# ತುಳುನಾಡು

ಸಾಮಾಜಿಕ ಚರಿತ್ರೆಯಲ್ಲಿ
ಒಂದು
ಸಂಶೋಧನಾತ್ಮಕ ವಿವೇಚನೆ

## ತೌಳವ ಸಂಸ್ಕೃತಿ




ಬೆಲೆ: ರೂ. 4-50

# ತುಳುನಾಡು

(ಸಾಮಾಜಿಕ ಚರಿತ್ರೆಯಲ್ಲಿ ಒಂದು ಸಂಶೋಧನಾತ್ಮಕ ವಿವೇಚನೆ)



ಲೇಖಕರು:

**ಪಿ. ಗುರುರಾಜ ಭಟ್,** ಎಂ. ಎ., ಬಿ. ಟಿ.,

ಎಂ. ಜಿ. ಎಂ. ಕಾಲೇಜು, ಉಡುಪಿ.



ಪ್ರಕಾಶಕರು:

**ಕೆ. ಲಕ್ಷ್ಮೀನಾರಾಯಣ ಭಟ್,**

ಸಂಪಾದಕ "ಭವ್ಯವಾಣಿ" ಪಡುಪೇಟೆ, ಉಡುಪಿ.



**1963**

# ಪರಿವಿಡಿ

# ಮೊದಲ ಮಾತು

1942ರಿಂದ ಉಪಾಧ್ಯಾಯ ವೃತ್ತಿಯಲ್ಲಿದ್ದ ನನಗೆ ಯಾವುದಾದರೂ ಒಂದು ರೂಪದಲ್ಲಿ ಮನನೀಯ ಹಾಗೂ ಗಣನೀಯ ಕಾರ್ಯವೊಂದನ್ನು ಮಾಡ ಬೇಕೆಂಬ ಉತ್ಕಟೇಚ್ಛೆ ಆರಂಭದಿಂದಲೂ ನನ್ನ ಮನಸ್ಸಿನಲ್ಲಿ ಬೇರೂರಿತ್ತು. ಉಪಾಧ್ಯಾಯನಿಗೆ ಸರಿಯೊಪ್ಪುವ ಇಂಥ ಕರ್ತವ್ಯ ಯಾವುದು ಎಂಬುದನ್ನು ನನ್ನಲ್ಲೇ ವಿಮರ್ಶಿಸಲು ಅದು ಸಂಶೋಧನಾರೂಪದ್ದಿರಬೇಕೆಂದೇ ನೆನೆಸಿ ಕೊಂಡಿದ್ದೆ. ಆದರೆ ಈ ತೆರನಾದ ಸಂಶೋಧನಾಕಾರ್ಯಕ್ಕೆ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಯೋಗ್ಯತೆಗಳನ್ನು ಹೊಂದುವುದು ಆದ್ಯ ಕರ್ತವ್ಯವೆಂಬುದನ್ನು ತಿಳಿಯಲು ನನಗೇನೂ ಕಷ್ಟವಾಗಲಿಲ್ಲ. ಆದುದರಿಂದ ಅಂದಿನಿಂದ ಇಂದಿನವರೆಗೆ ಎಂದರೆ 1942ರಿಂದ 1962ರ ವರೆಗೆ ಈ ಶೈಕ್ಷಣಿಕ ಯೋಗ್ಯತೆಯನ್ನು ಪಡೆಯುವುದರಲ್ಲಿ ನಿರತನಾದೆ. ಈ ಕಾರ್ಯಕ್ರಮವು ನಾನೆಣಿಸಿದ ರೀತಿಯಲ್ಲಿ ತೊಂದರೆಗಳಿಲ್ಲದೆ, ಸರಾಗವಾಗಿ ನೆರವೇರದಿದ್ದರೂ, ಒಂದರ ನಂತರ ಒಂದು ಎಂಬಂತೆ ಎಡೆಬಿಡದೆ ನನ್ನ ಪಾಲಿಗೊದಗಿದ ಕಷ್ಟ ಪರಂಪರೆಗಳನ್ನು ಹೋಗಲಾಡಿಸುವ ಶಕ್ತಿಯನ್ನು ಹೊಂದಿದವನಾಗಿ, ನಾನು ಹಾಕಿದ ಕಾರ್ಯಕ್ರಮವು ಯಶಸ್ಸನ್ನು ಪಡೆಯಿತು ಎಂಬುದು ನನಗೆ ಸಂತೋಷವನ್ನು ಕೊಡುವ ಅನುಭವ ವಾಗಿದೆ.

ನನ್ನ ಆಸೆಯ ಪೂರ್ತಿಯ ಬಗ್ಗೆ ನಾನು ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜನ್ನು ಸೇರಿದ್ದು ನನ್ನ ಭಾಗ್ಯವೇ ಸರಿ. ಆ ಸಂಸ್ಥೆಯು ನನಗೆ ಆದರ್ಶ ವಾತಾವರಣವನ್ನಿತ್ತು ನನ್ನ ಮಾನಸಿಕ ದೃಷ್ಟಿ ಕೋನವನ್ನು ವಿಶಾಲಗೊಳಿಸಿದೆ. ನನ್ನಲ್ಲಿ ಜ್ಞಾನವು ವೃದ್ಧಿಯಾಗುವಂತೆ ಮಾಡಿದೆ. ಇಲ್ಲಿ ಈರ್ವರ ಹೆಸರುಗಳನ್ನು ಎತ್ತಿಹೇಳಿದರೆ ಯುಕ್ತವೇ ಸರಿ. ನಮ್ಮ ಸಂಸ್ಥೆಯ ಮುಖ್ಯಾಧಿಕಾರಿಗಳಾದ ಪ್ರಿನ್ಸಿಪಲ್ ಯಚ್. ಸುಂದರರಾಯರೂ, ನಮ್ಮ 'ಅರ್ಥಶಾಸ್ತ್ರ ಮತ್ತು ಚರಿತ್ರೆ' ಖಾತೆಯ ಮುಖ್ಯಸ್ಥರಾದ ಪ್ರೊ|| ಕೆ. ಯಸ್. ಹರಿದಾಸ ಭಟ್ಟರೂ ನನಗೆ ತುಂಬಾ ಸಹಾನುಭೂತಿಯನ್ನೂ, ಸಹಕಾರವನ್ನೂ, ಕೊಟ್ಟಿದ್ದಾರೆ. ಪ್ರೊ|| ಹರಿದಾಸ ಭಟ್ಟರೊಡನೆ ಕೆಲಸ ಮಾಡುವುದೆಂದರೆ ಅದು ಒಂದು ಅಪೂರ್ವಯೋಗವೇ. ಅವರಿಂದ ಯಾವನೇ ಅಧ್ಯಾಪಕನೂ ಮಾರ್ಗದರ್ಶನವನ್ನು ಪಡೆಯುವ ಅವಶ್ಯವಿದೆ.

ಮೇಲಿನ ಮಾತುಗಳಂತಿರಲಿ. ಈ ನನ್ನ ಸಂಶೋಧನಾ ಗ್ರಂಥದ ವಿಚಾರ ಕೆಲವು ಮಾತುಗಳನ್ನು ಓದುಗರ ಮುಂದಿಡುವುದು ಇಲ್ಲಿ ಅನಗತ್ಯವಾಗಲಾರದು. ಯಾವ ವಿಷಯವನ್ನೆತ್ತಿ ಪ್ರಬಂಧವನ್ನು ಬರೆಯಲಿ ಎಂಬ ಪ್ರಶ್ನೆಯು ನನ್ನನ್ನು ಬಾಧಿಸುತ್ತಿತ್ತು. ವಿಷಯವನ್ನು ಆಯ್ದುಕೊಳ್ಳುವುದು ಬಹುಕಷ್ಟದ ಕೆಲಸ. ನಮ್ಮ ನಾಡಿನ

ಚರಿತ್ರೆಯನ್ನೇ ವಿಮರ್ಶಾತ್ಮಕ ದೃಷ್ಟಿಯಿಂದ ಬರೆಯೋಣ ಎಂಬ ಇಚ್ಛೆ ಮೂಡಿತು. ನಮ್ಮ ನಾಡು ತುಳುನಾಡು. ನಾವು ತುಳುವರು ಎಂದು ಪ್ರಚಲಿತವಿದೆ. ಒಬ್ಬ ತುಳುವನು ತುಳುವದ ಚರಿತ್ರೆಯನ್ನು ಬರೆಯುವುದು ಸಹಜವೇ. ಅಂತೆಯೇ ಕೆಲಸವನ್ನು ಆರಂಭಿಸಿ, ಇದೀಗ ಪೂರ್ತಿಮಾಡಿ, ಈ 'ಪುಷ್ಪ' ವನ್ನು ಓದುಗರ ಹಾಗೂ ಸಾರ್ವಜನಿಕರ ಮುಂದಿರಿಸಿದ್ದೇನೆ. ಬಲ್ಲವರು ನಾನೆತ್ತಿದ ವಿಷಯ ನಿರೂಪಣೆಯಲ್ಲಿ, ಅದರ ಕುರಿತಾಗಿ ಕೊಡಬಹುದಾದ ವಿಶೇಷ ಸಲಹೆ, ಸೂಚನೆಗಳನ್ನು ಹಾರ್ದಿಕವಾಗಿ ಸ್ವೀಕರಿಸಲು ತಯಾರಿದ್ದೇನೆ.

ಕೆಲವು ಗ್ರಂಥಗಳನ್ನೋದಿ ನನಗೂ 'ತುಳುವದ' ವಿಷಯ ಬರೆಯಬೇಕೆಂಬಾಸೆ ಮೂಡಿತು. ಡಾಕ್ಟರ್ ಆನಂದ ಭಾಸ್ಕರ ಸಲೆತೋರರ 'History of Tuluva' ಎಂಬ ಹಿರಿದಾದ ಗ್ರಂಥವು ನನ್ನನ್ನು ಪ್ರಚೋದಿಸಿತು. ಬರೆಯುವ ಪ್ರೇರಣೆ, ಚೈತನ್ಯಗಳೆರಡೂ ಇದ್ದರೆ ಎಷ್ಟು ವಿಶಾಲವಾಗಿ ಬರೆಯಬಹುದು ಎಂಬುದನ್ನು ಸಲೆತೋರರ ಗ್ರಂಥವು ತಿಳಿಸಿತು. ಶ್ರೀಗಳಾದ ಶೀನಪ್ಪ ಹೆಗ್ಗಡೆ ಮತ್ತು ನಾರಾಯಣ ಕಿಲ್ಲೆಯವರಿಂದ ವಿರಚಿತವಾದ 'ಪ್ರಾಚೀನ ತುಳುನಾಡು' ಎಂಬ ಗ್ರಂಥವು ನನ್ನನ್ನು ವಿಮರ್ಶೆಗೆ ಎಳೆಯಿತು. 'ದಕ್ಷಿಣಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ' ವೆಂಬ ಶ್ರೀಯಂ. ಗಣಪತಿರಾವ್ ಐಗಳರಿಂದ ಬರೆಲ್ಪಟ್ಟ ಚೊಕ್ಕವಾದ ಪುಸ್ತಕವೂ, 'ತುಳುವ ಚರಿತ್ರೆ' ಎಂಬ ಕೇಶವ ಕೃಷ್ಣ ಕುಡುವರ ಗ್ರಂಥವೂ ನಮ್ಮ ನಾಡಿನ ಚಾರಿತ್ರಿಕ ಹಿನ್ನೆಲೆಯನ್ನು ಪಡೆಯುವುದು ಎಷ್ಟು ಅವಶ್ಯವೆಂಬುದನ್ನು ತಿಳಿಸಿದುವು. ಆದರೂ ತುಳುನಾಡಿನ, ಅಂತೂ ತುಳುವರ ಮೂಲದ ಕುರಿತಾಗಿ ತೃಪ್ತಿಕರವಾದ ವಿವರವಾಗಲೀ, ಪ್ರತಿಪಾದನೆಯಾಗಲೀ ನನಗೆ ಈ ಯಾವ ಗ್ರಂಥಗಳಿಂದಲೂ ದೊರೆಯಲಿಲ್ಲ. ನನ್ನನ್ನು ಆಳವಾದ ವಿಚಾರಕ್ಕೆ ಗುರಿಪಡಿಸಿದ ಸಾಹಿತಿಕ ಬರಹಗಳು ಎರಡು.

(1) 'ತೆಂಕನಾಡಿ' ನಲ್ಲಿ ಶ್ರೀ ಗೋವಿಂದ ಪೈಗಳ 'ಪೂರ್ವಸ್ಮೃತಿ' ಎಂಬ ವಿಶಾಲವಾದ ಲೇಖನ.

(2) ಹಿರಿಯ ಸಾಹಿತಿ ಶಂ. ಭಾ. ಜೋಶಿಯವರ 'ಎಡೆಗಳು ಹೇಳುವ ಕಂನಾಡ ಕತೆ' ಮತ್ತು 'ಕನ್ನಡದ ನೆಲೆ'

ಈ ಸಾಹಿತಿಗಳೀರ್ವರಿಗೂ ನಾನು ಸದಾ ತಲೆ ಬಾಗುವೆನು. ಅವರು ಮೂಲವನ್ನು ಹುಡುಕಿ ಪರಿಶೋಧನೆ ಮಾಡಿದ, ಮಾಡುವ ಪ್ರಭೃತಿಗಳು.

ಸ್ಕಂದ ಪುರಾಣಾಂತರ್ಗತವೆಂದು ಹೆಸರಾದ ಸಹ್ಯಾದ್ರಿ ಖಂಡವನ್ನೂ, ಅದರ ಪ್ರತಿಛಾಯೆಯಾದ 'ತುಳುಗ್ರಾಮ ಪದ್ಧತಿ' 'ಲೋಕಾದಿತ್ಯ ಪದ್ಧತಿ' ಯನ್ನೂ ಓದಿದೆನು. ಇವುಗಳೆರಡೂ 'ತುಳುವ ಚರಿತ್ರೆಗೆ' 'ತುಳುವದ ಪ್ರಾಚೀನತೆ'ಯನ್ನು

ನಿರ್ಧರಿಸುವುದಕ್ಕೆ ಆಧಾರ ಗ್ರಂಥಗಳಾಗಲು ಸಾಧ್ಯವಿಲ್ಲವೆಂದೂ, ಏನೋ ಒಂದು ಉದ್ದೇಶದಿಂದ ರಚಿಸಲ್ಪಟ್ಟು ಸ್ಕಂದ ಪುರಾಣಕ್ಕೆ ಸೇರಿಸಲ್ಪಟ್ಟ ಅರ್ವಾಚೀನ ಗ್ರಂಥವು ಸಹ್ಯಾದ್ರಿ ಖಂಡ ಎಂದೂ, ಕೆಲಕೆಲವು ಧಾರ್ಮಿಕ, ಸಾಮಾಜಿಕ, ಹಾಗೂ ರಾಜಕೀಯ ವಿಷಯಗಳನ್ನು 'ಅಲ್ಲಲ್ಲಿ ಇಷ್ಟಿಷ್ಟು' ತಿಳಿಸುವುದು ಹೊರತಾಗಿ ಬೇರಾವ ಪ್ರಮಾಣಗಳನ್ನೂ ಇವು ಕೊಡುವುದಿಲ್ಲವೆಂದೂ ನನಗೆ ಖಚಿತವಾಯಿತು.

ಚರಿತ್ರೆಯ ಮೇರೆಯು ವಿಶಾಲವಾದುದು. ಅದು ಜನರ ಜೀವನದ ಎಲ್ಲಾ ಹಂತಗಳನ್ನೂ, ವಿಭಾಗಗಳನ್ನೂ, ರೂಪರೇಖೆಗಳನ್ನೂ ಚಿತ್ರಿಸಬೇಕು. ನೀತಿಯ ಉಪದೇಶವು ಅದರ ಕರ್ತವ್ಯವಲ್ಲ. ತುಳುನಾಡಿನ ಚರಿತ್ರೆಯನ್ನು ಬರೆಯುವುದಾದರೆ ಅಂಥ ಚರಿತ್ರೆಯು ಈ ಕೆಳಗಿನ ವಿಭಾಗಗಳನ್ನು ಒಳಗೊಂಡಿರುವುದು ಸಹಜವೆನಿಸುತ್ತದೆ.

1) ತುಳುನಾಡಿನ ಭೌಗೋಳಿಕ ಸ್ಥಿತಿಗತಿ (The Geography of Tulunad)

2) ತುಳುನಾಡಿನ ರಾಜಕೀಯ ಚರಿತ್ರೆ (A Political History of Tulunad)

3) ತುಳುನಾಡಿನ ಸಾಮಾಜಿಕ ಚರಿತ್ರೆ (A Social History of Tulunad)

4) ತುಳುನಾಡು ಮತ್ತು ಅದರ ಧರ್ಮ (Religion in Tulunad)

5) ತುಳುನಾಡಿನ ದೇವಳದ ಇತಿಹಾಸ (A History of the Temples of Tulunad)

5) ತುಳುನಾಡು ಮತ್ತು ಭೂತಾರಾಧನೆ (Tuluva Devil Worship)

7) ತುಳುನಾಡೂ, ತುಳುಭಾಷೆಯೂ (Tulunad and Tulu Language)

8) ತುಳುನಾಡು ಮತ್ತು ಕರ್ನಾಟಕ (Tulunad and its Relation with Karnataka)

9) ತುಳುನಾಡಿನ ಕಲೆಗಳು (Arts of Tulunad)

10) ತುಳುನಾಡಿನ ಸಂಸ್ಕೃತಿ ಮತ್ತು ಅದರ ಸ್ವರೂಪ (The Cultural traits of Tulunad)

ಮೇಲೆ ನಿರೂಪಿಸಿದ ಎಲ್ಲಾ ವಿಭಾಗಗಳನ್ನು ಸಂಶೋಧನೆಗೆ ಗುರಿಪಡಿಸಿ, ನ್ಯಾಯವಾಗಿದ್ದುದನ್ನೂ, ಸತ್ಯಾಂಶಗಳನ್ನೂ ಬಯಲಿಗೆಳೆದು ಹೊಸ ಬೆಳಕನ್ನು

ಚಾರಿತ್ರಿಕ ಸಂಗತಿಗಳ ಮೇಲೆ ಚೆಲ್ಲುವುದು ಅಗತ್ಯವಾದರೂ, ಇವೆಲ್ಲವನ್ನೂ ಎತ್ತಿ ಬರೆಯುವುದು ಪ್ರಕೃತಕ್ಕೆ ನನಗೆ ಅಸಾಧ್ಯವಾದುದರಿಂದಲೂ, ಅದು ಅಳತೆ ಮೀರಿದ್ದಾದುದರಿಂದಲೂ ನನ್ನ ಬರವಣಿಗೆಯ 'ವಸ್ತು'ವನ್ನು ಒಂದು ಮಿತಿಯಲ್ಲಿ ಇರಿಸುವ ಆವಶ್ಯಕತೆ ಕಂಡುಬಂತು. ತುಳುನಾಡಿನ ನಿಜಸ್ವರೂಪದ ಚಿತ್ರಣವನ್ನು ಜನತೆಯ ಮುಂದಿರಿಸ ಬೇಕಾದರೆ ಮೇಲೆ ನಮೂದಿಸಿದ ಎಲ್ಲಾ ಅಂಗಗಳ ಕೂಲಂಕಷ ಅನ್ವೇಷಣೆ ನಡೆಯತಕ್ಕದ್ದು ಎಂಬುದರಲ್ಲಿ ಸಂದೇಹವಿಲ್ಲ. ಜನತೆಯ ಹಾಗೂ ಬಲ್ಲವರ ಪ್ರೋತ್ಸಾಹವಿದ್ದರೆ ಈ ಆಶಾಪೂರ್ತಿಯನ್ನು ಹೊಂದಬೇಕೆಂದೂ ಇದೆ.

ನನ್ನ ಈ ಗ್ರಂಥದಲ್ಲಿ ಒಂದು ಸಮಸ್ಯೆಯನ್ನು ಮೂಲವಾಗಿ, ಕೇಂದ್ರವಾಗಿ ತೆಗೆದುಕೊಂಡು, ಉಳಿದುವುಗಳನ್ನು ಪೂರಕಗಳಾಗಿಯೂ ದ್ವಿತೀಯ ಸ್ಥಾನವನ್ನು ಹೊಂದುವ ರೀತಿಯಲ್ಲಿಯೂ ಪ್ರತಿಪಾದನೆ ಮಾಡಿದ್ದೇನೆ. ತುಳುನಾಡಿನಲ್ಲಿರುವ ಪ್ರತಿಯೊಬ್ಬನಿಗೂ ತಿಳಿದಿರಬೇಕಾದ ಮುಖ್ಯವಾದೊಂದು ಸಂಗತಿ ಎಂದರೆ ತುಳುವರು ಯಾರೆಂಬುದು. ಇದೇ ಮೂಲಸಮಸ್ಯೆ. ಮೊದಲಲ್ಲಿ ತುಳುವರು ಯಾರಾಗಿದ್ದರು, ಅವರ ಕಸುಬೇನಿತ್ತು, ಅವರ ಸ್ಥಾನಮಾನಗಳೇನಿದ್ದುವು, ಕಡೆಗೆ ಅವರು ಯಾವ ಸ್ಥಿತಿಯನ್ನು ಹೊಂದಿದರು, ಗೌಣಾರ್ಥದಲ್ಲಿ ತುಳುವರೆಂದರೆ ಯಾರು ಎಂಬುವುಗಳನ್ನು ನನಗೆ ತಿಳಿದಮಟ್ಟಿಗೆ ಆಧಾರ ಸಹಿತ ವಿವರಿಸಲು ಪ್ರಯತ್ನಿಸಿದ್ದೇನೆ. ನನ್ನ ನಿರ್ಧಾರ ಹೀಗಿದೆ ತುಳುವರೆಂದರೆ ತುರುಕಾರರು (ತುರುವರು); ಒಂದು ವರ್ಗದ ದನಗಾರರು (Herdsmen). ಆದಿಯ ಈ ತುಳುವರು ಈಗ ನಶಿಸಿ ಹೋಗಿದ್ದಾರೆ; ಅಥವಾ ಜಾತಿ ಸಂಕರ ಹೊಂದಿದ್ದಾರೆ. ಹಾಗಾದರೆ ಯಾರು ತುಳುವರಲ್ಲವೆಂಬ ಪ್ರಶ್ನೆಗೆ ಉತ್ತರವನ್ನು ತುಳುನಾಡಿನ ಸಾಮಾಜಿಕ ಪದರುಗಳಲ್ಲಿ ಪ್ರಾಮುಖ್ಯವಾದುವುಗಳನ್ನು ತೆಗೆದುಕೊಂಡು ಒಂದೊಂದಾಗಿ ಮೂಲಶೋಧನೆಯ ದೃಷ್ಟಿಯಲ್ಲಿ ವಿವೇಚಿಸಿದ್ದೇನೆ. ಆಗ ಹಳೆಗಾಲದ ಪ್ರಾಗೈತಿಹಾಸಿಕ ಜನರ ಪರಿಶೀಲನೆಯೂ, ಐತಿಹಾಸಿಕ ಜನರ ಪ್ರಭೇದಗಳ ಪರಿಶೀಲನೆಯೂ ಅಗತ್ಯವಾಗಿ ಕಂಡು ಬಂತು. ಬಿಲ್ಲವರು, ಮೊಗೇರರು, ಕುಡಿಗಳು (ಕುಡುವರು,) ತುಳುವರು (ತುರುವರು), ನಾಡವರು (ಬಂಟರು), ಆಳುವರು ಮತ್ತು ಬ್ರಾಹ್ಮಣರು ಇವರು ತುಳುನಾಡಿನ ಸಮಾಜದ ನಿರ್ಮಾಪಕರು. ಇವರನ್ನು ಹೊರತಾದ ಇತರ ಜಾತಿಗಳು (ವರ್ಗಗಳು) ಇಲ್ಲಿ ಅನೇಕವಿದ್ದರೂ, ಅವೆಲ್ಲ ಸಮಾಜದ ಆವಶ್ಯಕತೆಗಳ ಪೂರ್ತಿಕೆಗೋಸ್ಕರ ಅನಂತರ ಉಂಟಾದುವುಗಳು. ಆದರೆ, ಮೇಲೆ ಸೂಚಿತವಾದ ಏಳು ಪದರುಗಳು ಸಮಾಜ ಬೆಳವಣಿಗೆಯ ಹಾಗೂ ಜನಾಂಗದ ಸಂಸ್ಕೃತಿಯ ಬೆಳವಣಿಗೆಯ ನಿರ್ದಿಷ್ಟ ಹಂತಗಳನ್ನು ತಿಳಿಯಪಡಿಸುವವುಗಳೆಂಬುದರಲ್ಲಿ ಅನುಮಾನ

ವಿಲ್ಲ. ಆದುದರಿಂದ ನನ್ನೀ ವಿಷಯ ಸಮರ್ಥನೆಯಲ್ಲಿ ಸಾಮಾಜಿಕ ಚರಿತ್ರೆಯ ಅಂಶಗಳೇ ಪ್ರಾಮುಖ್ಯವಾಗಿ ತೋರಿಬರುವುವು. ನಮ್ಮನ್ನು ನಾವು ತಿಳಿಯಬೇಕಾದರೆ ಈ ತೆರನಾದ ಸಾಮಾಜಿಕ ಚರಿತ್ರೆಯು, ಹಾಗೂ ಸಮಾಜ ಬೆಳವಣಿಗೆಯ ಕ್ರಮವನ್ನು ಅರಿತುಕೊಳ್ಳುವುದಗತ್ಯವೆಂದು ನನಗೆ ಮನವರಿಕೆಯಾಗಿ, ಆ ದೃಷ್ಟಿಯನ್ನು ಇಟ್ಟುಕೊಂಡು ವಿಷಯವನ್ನು ಪ್ರತಿಪಾದಿಸಿದ್ದೇನೆ.

ಈ ಗ್ರಂಥದಲ್ಲಿ ಈ ಕೆಳಗಿನ ಪರಿಚ್ಛೇದಗಳನ್ನು ಕಾಣುವಿರಿ.

1) ತುಳುವರು ಯಾರು?
2) ತುಳುವದ ಹುಟ್ಟು
3) ಸ್ಥಳನಾಮಗಳು ಹೇಳುವ ತುಳುನಾಡಿನಕತೆ.
4) ನಾಡವರ (ಬಂಟರ) ಮೂಲ.
5) ಆಳುವರೂ ನಾಡವರೇ ಆಗಿರುವರು.
6) ತುಳುನಾಡಿನಲ್ಲಿ ಬ್ರಾಹ್ಮಣ್ಯ
7) ತುಳುನಾಡಿನಲ್ಲಿ ಬ್ರಾಹ್ಮಣ್ಯ (ಮುಂದುವರಿದುದು)
8) ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ಥಾನಿಕರ ಚರಿತ್ರೆ.
9) ಶಾಸನಗಳಲ್ಲಿ ಸ್ಥಾನಿಕರು.
10) ತುಳುನಾಡಿನ ಬ್ರಾಹ್ಮಣರ ವರ್ಗೀಕರಣ
11) ಕುಲನಾಮಗಳು ಹೇಳುವ ತುಳುನಾಡಿನ ಕತೆ.
12) ತುಳುನಾಡಿನಲ್ಲಿ ಜೈನಧರ್ಮ.
13) ಸಮರ್ಥನೆ ಮತ್ತು ಅರ್ಪಣೆ.
14) ಅನುಬಂಧ

ಈಗಿನ ಚಾರಿತ್ರಿಕ ಬರವಣಿಗೆಗಳಲ್ಲಿ ಆಧಾರಗಳನ್ನು ವೈಜ್ಞಾನಿಕ ರೀತಿಯಲ್ಲಿ ಕೊಟ್ಟು ಸಮರ್ಥನೆ ಮಾಡುವುದವಶ್ಯವಿದೆ. ಯಾವುದಕ್ಕೆ ದಾಖಲೆಯ ಆಧಾರ ಕೊಡಲು ಸಾಧ್ಯವಿಲ್ಲವೋ ಅದು ನಂಬಲಾತೀತವೆಂದು ತಿಳಿಯಲ್ಪಡುತ್ತದೆ. ಇದು ಸಹಜವೇಸರಿ. ಆದರೆ ದಾಖಲೆಗಳು ಅನೇಕ ರೀತಿಯವುಗಳಿರುವುದರಿಂದಲೂ, ಒಂದೊಂದು ತೆರನಾದ ದಾಖಲೆ ಒಂದೊಂದು ಪ್ರದೇಶದಲ್ಲಿ ಹಬ್ಬಿರುವುದು ಕಂಡುಬರುವುದರಿಂದಲೂ, ಎಲ್ಲಾ ಕಡೆಗಳಲ್ಲೂ ಎಲ್ಲಾ ವಿಧದ ದಾಖಲೆಗಳನ್ನು 'ಚಾರಿತ್ರಿಕ ಪುರಾವೆ'ಯಾಗಿ ಅಪೇಕ್ಷಿಸುವುದು ಹಿತಕರವಲ್ಲ. ಕಲ್ಬರಹಗಳು, ಶಾಸನಗಳು, ಚಾರಿತ್ರಿಕ ಅವಶೇಷಗಳು, ಚಾರಿತ್ರಿಕ ದಾಖಲೆಗಳನ್ನೊಳಗೊಂಡ ಸಾಹಿತ್ಯಗಳು, ಸ್ಥಳನಾಮಗಳು, ಕುಲನಾಮಗಳು, ಮಾನವ ವಂಶೀಯ ಕುರುಹುಗಳು, ನಾಣ್ಯಗಳು, ಜೀವಂತವಾಗಿ ಉಳಿದಿರುವ ಸಂಪ್ರದಾಯಗಳು ಹಾಗೂ 'ಪೂರ್ವಸ್ಮೃತಿ'—ಇವೆಲ್ಲ ದಾಖಲೆ

ಗಳಾಗುತ್ತವೆ. ಚರಿತ್ರೆಯನ್ನು ಬರೆಯುವಾಗ, ಅದರಲ್ಲೂ ಪ್ರಾಚೀನ ಇತಿಹಾಸವನ್ನು ಬರೆಯುವಾಗ ಇವುಗಳನ್ನೆಲ್ಲಾ ವಿಮರ್ಶೆ ಮಾಡಿ, ತುಲನಾತ್ಮಕ ದೃಷ್ಟಿಯನ್ನು ಪಡೆಯಬೇಕಾಗುತ್ತದೆ. ನಮ್ಮ ತುಳುನಾಡನ್ನು ಪರಿಶೀಲಿಸುವಾಗ ಈ ಜೀವಂತ ಸಂಪ್ರದಾಯಗಳು ಅನೇಕವಿರುವುದು ಕಂಡು ಬರುತ್ತದೆ. ಇವುಗಳನ್ನೆಲ್ಲ ಬದಿಗೊತ್ತಿ, ಅಲ್ಲಗಳೆದು, ಸಂಶೋಧನೆ ಮಾಡುವುದು ತೀರ ಅಸಂಭವ. ಆ ತೆಯೇ ಈ ಸಂಪ್ರ ದಾಯಗಳನ್ನೇ ಆಧರಿಸಿಕೊಂಡು ಇತಿಹಾಸವನ್ನು ಬರೆಯಲು ಹೊರಟರೆ 'ಮಳಲ ಮೇಲೆ ಮನೆ ಕಟ್ಟಿದಂತಾಗಬಹುದು.' ಇದಕ್ಕೆ ಕಾರಣಗಳನ್ನು ಈ ಗ್ರಂಥವನ್ನೋದು ವಾಗ ತಿಳಿಯುವಿರಿ.

ತುಳುನಾಡಿನ ಚರಿತ್ರೆಕಾರರಿಗೆ ಇನ್ನೊಂದು ತೊಂದರೆ ಇದೆ. ಇತಿಹಾಸ ಪೂರ್ವದ ವಿವರವನ್ನು ತಿಳಿಯಲು ನಮ್ಮ ನಾಡಿನಲ್ಲಿ ಭೂಶೋಧನೆ (Archaeological Survey or Excavations) ಕಾರ್ಯ ಏನೇನೂ ನಡೆದಿಲ್ಲ. ಬಾರಕೂರು, ಬಸರೂರು, ಸುಬ್ರಹ್ಮಣ್ಯ ಇತ್ಯಾದಿ ಸ್ಥಳಗಳಲ್ಲಿ ಭೂಶೋಧನೆ ನಡೆಸಿದಲ್ಲಿ ಖಂಡಿತವಾಗಿಯೂ, ಅನೇಕ ವಿಧವಾದ ಅವಶೇಷಗಳು ದೊರೆತು ನಮ್ಮ ಜ್ಞಾನವು ವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ; ಅಥವಾ ಈ ಅಗೆತಗಳ ಪರಿಣಾಮವಾಗಿ ನಮ್ಮ ಪ್ರಚಲಿತ ಜ್ಞಾನದ ಮೇಲೆ ಹೊಸ ಬೆಳಕು ಬಿದ್ದು, ತೀರ ನವೀನ ಜ್ಞಾನವನ್ನು ಹೊಂದುವಂತಾಗಲೂ ಬಹುದು. ಈ ಪ್ರಯತ್ನ ನಡೆದರೆ ಮಾತ್ರ ನಮ್ಮ ನಾಡಿನ ಪ್ರಾಚೀನತೆಯನ್ನೂ ಅದರ ವೈಶಿಷ್ಟ್ಯವನ್ನೂ ಕಂಡುಕೊಳ್ಳಬಹುದು.

ಕೊನೆಯದಾಗಿ ಬ್ರಾಹ್ಮಣರಲ್ಲಿ ಮೊದಲಿಗರಾದ ಸ್ಥಾನಿಕರ ಕುರಿತು ಕೆಲವು ಮಾತುಗಳನ್ನು ಹೇಳಲು ನಾನು ಬಯಸುತ್ತೇನೆ. ಚಿಕ್ಕಂದಿನಿಂದಲೂ ನನಗೆ ನಮ್ಮ ನಾಡಿನ ದೇವಸ್ಥಾನಗಳಲ್ಲಿ ಕೆಲಸಮಾಡುತ್ತಿರುವ 'ಸ್ಥಾನಿಕ'ರ ಕಡೆಗೆ ಒಂದು ರೀತಿಯ ಕುತೂಹಲವಿತ್ತು. ಇವರು ಸಮಾರಂಭಗಳಲ್ಲಿಯೂ, ಊಟ ಉಪಚಾರ ಗಳಲ್ಲಿಯೂ ಪ್ರವೇಶವನ್ನು ಪಡೆಯುತ್ತಿದ್ದರು. ಆದರೆ ಇವರು ಅಪಾಙ್ಕ್ತೇಯರಾಗಿದ್ದುದು (ಅಡ್ಡಪಙ್ಕ್ತಿ) ನನ್ನ ಕುತೂಹಲವನ್ನು ಮತ್ತೂ ಕೆರಳಿಸುತ್ತಿತ್ತು. ಇವರು ಯಾರೆಂದು ಕೇಳುವ ನನ್ನ ಪ್ರಶ್ನೆಯು ತೃಪ್ತಿಕರವಾಗಿ ಉತ್ತರವನ್ನು ಪಡೆಯುತ್ತಿರಲಿಲ್ಲ. ಅಬ್ರಾಹ್ಮಣರೋ? ಅಲ್ಲ; ಯಾಕೆಂದರೆ ಅಬ್ರಾಹ್ಮಣರು ಊಟ ಸಮಾರಂಭ ಗಳಲ್ಲಿ ಬ್ರಾಹ್ಮಣರ ಅವಲೋಕನೆಗೆ ಸಿಗಬಾರದು. ಇವರು ಬ್ರಾಹ್ಮಣರೋ? ಅದೂ ಅಲ್ಲ; ಕಾರಣ, ಇತರ ಬ್ರಾಹ್ಮಣರ ಪಙ್ಕ್ತಿಯಲ್ಲಿ ಇವರಿಗೆ ಸ್ಥಾನವಿರಲಿಲ್ಲ. ಎಲ್ಲೆಲ್ಲೂ ಇವರಿಗೆ ಅಡ್ಡಪಙ್ಕ್ತಿ ಕೊಡಲ್ಪಡುತ್ತಿತ್ತು. (ಹೇಗೂ ಪಙ್ಕ್ತಿ ಪ್ರಶ್ನೆ ಬ್ರಾಹ್ಮಣ್ಯಕ್ಕೆ ಮುಖ್ಯವಲ್ಲ.) ಹಾಗಾದರೆ ಇವರು ಪತಿತ ಬ್ರಾಹ್ಮಣರೇ? ಸಂಪ್ರದಾಯವು ನಮ್ಮ ನಾಡಿನಲ್ಲಿ ಸ್ಥಾನಿಕರನ್ನು ಪತಿತ ಬ್ರಾಹ್ಮಣರನ್ನಾಗಿ ತಿಳಿಯುತ್ತಿತ್ತು.

ನಾನು ಸಂಶೋಧನಾ ಕಾರ್ಯವನ್ನು ಎರಡು ಮೂರು ವರ್ಷಗಳ ಹಿಂದಕ್ಕೆ ಪ್ರಾರಂಭಿಸಿದಾಗ ಈ ಸ್ಥಾನಿಕ ವರ್ಗದ ವಿಷಯ ಹೆಚ್ಚು ತಿಳಿಯ ಬೇಕೆಂಬ ಆಶಾಂಕುರವು ಮೂಡಿತು. ತುಳುನಾಡಿನ ಸಮಾಜವನ್ನು ಪದರು ಪದರಾಗಿ ಅವಲೋಕಿಸುವಾಗ, ನಾನು ಕಂಡಂತೆ, ನನಗೆ ಆಧಾರಗಳ ಮೂಲಕ ಮನವರಿಕೆಯಾದಂತೆ, ಸ್ಥಾನಿಕರೆಂಬವರು ಒಂದು ವಿಶಿಷ್ಟವಾದ ಸ್ಥಾನವನ್ನು ಸಮಾಜದಲ್ಲಿ ಪಡೆದ ಬ್ರಾಹ್ಮಣ ವರ್ಗವೆಂದೂ, ಈ ಬ್ರಾಹ್ಮಣ ವರ್ಗವು, ಬ್ರಾಹ್ಮಣ್ಯವನ್ನು ತುಳುನಾಡಿನಲ್ಲಿ ಪ್ರಥಮವಾಗಿ ಪ್ರಚಾರಮಾಡಿದ್ದಾಗಿಯೂ ಕಂಡು ಬಂತು. ಸ್ಥಾನಿಕರು ತುಳುನಾಡಿನ ಬ್ರಾಹ್ಮಣರಲ್ಲಿ ಮೊದಲಿಗರು. ಅವರು ಪ್ರಾಚೀನರು, ಅವರ ಹತೋಟಿಯಲ್ಲಿ ನಮ್ಮ ನಾಡಿನ ಪ್ರಾಮುಖ್ಯವಾದ ದೇವಾಲಯಗಳಿದ್ದುವು, ಅವರು ಒಂದು ಕಾಲದಲ್ಲಿ (ಸಾಮಾನ್ಯ ಕ್ರಿ. ಶ.15ನೆಯ ಶತಮಾನದ ವರೆಗೆ) ಉಚ್ಛ್ರಾಯ ಸ್ಥಿತಿಯಲ್ಲಿದ್ದರು. ಕಾಲ ಉರುಳಿದಂತೆ ಬೇರೆ ಬೇರೆ ಬ್ರಾಹ್ಮಣರ ಪಂಗಡಗಳು ನಮ್ಮ ನಾಡಿಗೆ ಬಂದು ನೆಲೆಸಿಕೊಂಡು, ಅವರ ಸಂಖ್ಯೆ ಹೆಚ್ಚಾದಾಗ, ಧಾರ್ಮಿಕ ಭಾವನೆಯು ವಿಭಿನ್ನವಾದಾಗ, ಅಧಿಕಾರ ಹಸ್ತಾಂತರವಾದಾಗ ಈ ಮೂಲ ಬ್ರಾಹ್ಮಣರಾದ ಸ್ಥಾನಿಕರು ಪತನಹೊಂದಿದರು—ಎಂಬೀ ವಿಷಯಗಳನ್ನು ಕಂಡುಕೊಂಡೆನು. ಅವರ ಉದ್ಧಾರವನ್ನು ನಾನೀಗ ಮಾಡಲು ಹೊರಟವನಲ್ಲ; ನನ್ನಿಂದ ಸಾಧ್ಯವೂ ಇಲ್ಲ; ಈ ಕೆಲಸದ ಆವಶ್ಯಕತೆಯೂ ಇಲ್ಲ. ಅದರೆ ಸತ್ಯ ಸಂಗತಿಗಳನ್ನೂ, ಚಾರಿತ್ರಿಕ ವಿಷಯಗಳನ್ನೂ, ಓದುಗರ ಮುಂದಿಡುವುದು ನನ್ನ ಕೆಲಸ. ನಮ್ಮ ನಾಡಿನ ಅತ್ಯಂತ ಪ್ರಧಾನವಾದ ಸಾಮಾಜಿಕ ಘಟಕಗಳಲ್ಲಿ ಒಂದಾದ ಬ್ರಾಹ್ಮಣರ ಮೂಲವನ್ನು ಈ ಸ್ಥಾನಿಕರಲ್ಲಿ ಕಂಡು ಕೊಳ್ಳಬೇಕಾದುದು ನಮ್ಮ ಕರ್ತವ್ಯವೆಂಬುದನ್ನು ಜನತೆಗೆ ತಿಳಿಯಪಡಿಸುವುದೂ, ನಮ್ಮ ನಾಡಿನ ಬ್ರಾಹ್ಮಣರು ಇದನ್ನು ಸರಿಯಾಗಿ ಮನವರಿಕೆ ಮಾಡಿಕೊಳ್ಳ ಬೇಕೆಂಬುದಾಗಿಯೂ ನನ್ನ ಆಶಯವಾಗಿದೆ.

ಲೇಖನಗಳನ್ನು ಒಂದೊಂದಾಗಿ ಪ್ರಕಟಿಸಿದ್ದರಿಂದ ಓದುಗರಿಗೆ ವಿಷಯ ಕಾಠಿಣ್ಯ ಕಂಡು ಬರದಂತೆ, ಸರಾಗ ಓದಿಗೆ ಅನುಕೂಲವಾಗುವಂತೆ ನನ್ನ 'ವಿಷಯ ನಿರೂಪಣೆ'ಯನ್ನು ಮಾಡಿದ್ದೇನೆ. ಮೂಲಾಧಾರಗಳನ್ನು ಕೊಡುವುದು ನನ್ನ ಕರ್ತವ್ಯವಾದುದರಿಂದ ಕೊನೆಯ ಲೇಖನದಲ್ಲಿ (ಸಮರ್ಥನೆ ಮತ್ತು ಅರ್ಪಣೆ) ಸಾಧ್ಯವಾದ ಮಟ್ಟಿಗೆ ಆಧಾರ ಗ್ರಂಥಗಳನ್ನೆಲ್ಲ ನನ್ನ ಸಮರ್ಥನೆಗೆ ಕಂಡು ಬರುವ ಪುರಾವೆಗಳನ್ನೆಲ್ಲ ಕೊಟ್ಟಿದ್ದೇನೆ.

ಪ್ರಕಟಿಸಿದ ಲೇಖನಗಳಲ್ಲಿ ಸಂದೇಹ ಹಾಗೂ ಚರ್ಚಾಸ್ಪದವಾದವಿಷಯಗಳು ಇನ್ನು ಅನೇಕವಿವೆ. ಅವುಗಳಿಗೆ ಸಂಬಂಧಿಸಿದ ಸಂಪೂರ್ಣ ಸವಿವರವು ಇನ್ನೂ ಆಳವಾದ ಸಂಶೋಧನೆಯಿಂದ ಸಾಧ್ಯ. ಉದಾಹರಣೆಗಾಗಿ ತುಳು ಭಾಷೆ, ಓದುಗರ

ಹಾಗೂ ತುಳು ಬಾಂಧವರ ಸಹಕಾರ, ಪ್ರೋತ್ಸಾಹಗಳು ದೊರಕಿದರೆ ಎರಡನೆಯ ಆವೃತ್ತಿಯಲ್ಲಿ ಈ ಸಮಸ್ಯಾತ್ಮಕ ಪ್ರಶ್ನೆಗಳಿಗೆ ತೃಪ್ತಿಕರವಾದ ಉತ್ತರವನ್ನು ಕೊಡಲು ಪ್ರಯತ್ನಿಸುತ್ತೇವೆ.

ನನ್ನೀ ಗ್ರಂಥವನ್ನು ಬರೆಯುವುದರಲ್ಲಿ ಒಂದಲ್ಲ ಒಂದು ರೀತಿಯಿಂದ ಸಹಾಯವನ್ನು ಮಾಡಿದ ನನ್ನ ಸಹೋದ್ಯೋಗಿಗಳಿಗೂ ಹಾಗೂ ಮಿತ್ರರಿಗೆಲ್ಲರಿಗೂ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯವಾಗಿದೆ.

**ಪಾದೂರು ಗುರುರಾಜ ಭಟ್**, ಎಂ.ಎ.ಬಿ.ಟಿ.,
ಚರಿತ್ರೆಯ ಪ್ರಾಧ್ಯಾಪಕ,
ಮಹಾತ್ಮಾ ಗಾಂಧಿ ಮೆಮೋರಿಯಲ್ ಕಾಲೇಜು,
ಉಡುಪಿ. ದ. ಕ.

# ತೌಳವ ಸಂಸ್ಕೃತಿ




**ವೃತ್ತಗಳಿಗೆ ವಿವರ (Legend for Circles)**

A) ಮೂಲ ಸಂಸ್ಕೃತಿ (Original Culture)

ಮೊಗೇರ, ಬಿಲ್ಲವ, ತುರುಕಾರ (ತುಳುವ) ಮತ್ತು ಕುಡುವ (ಕುಡಿಯ)

(Culture of the Mogers andBillavas,Turukaras (Tuluvas) and Kuduvas (Kudiyas)

B) ನಾಡವ ಸಂಸ್ಕೃತಿ (Nadavas Culture-Alvas)

C) ಆರ್ಯ ಸಂಸ್ಕೃತಿ ( Brahminism and Jainism)

**ವೃತ್ತ ಭಾಗಗಳಿಗೆ ವಿವರ (Legend for Sectors)**

A 1) ಮೊಗೇರ ಮತ್ತು ಬಿಲ್ಲವ (Mogers and Billavas)

A 2) ತುರುಕಾರ (ತುಳುವ) (Turukaras-Tuluwas)

A 3) ಕುಡುವ (ಕುಡಿಯ) (Kuduvas- Kudiyas)

B 1) ಮೊಗೇರ, ಬಿಲ್ಲವ + ನಾಡವ (Mogers, Billavas+ Nadavas)

B 2) ತುರುಕಾರ (ತುಳುವ)+ನಾಡುವ (Turukaras, Tuluvas +Nadavas)

B 3) ಕುಡುವ (ಕುಡಿಯ) +ನಾಡುವ(Kuduvas-[Kudiyas] Nadavas)

C 1) ಮೊಗೇರ, ಬಿಲ್ಲವ+ನಾಡವ+ಆರ್ಯ (Mogers, Billavas +Nadavas+Aryan)

C 2) ತುರುಕಾರ (ತುಳುವ)+ನಾಡವ + ಆರ್ಯ (Turukara-Tuluvas+Nadavas+Aryan

C 3) ಕುಡುವ (ಕುಡಿಯ) + ನಾಡವ + ಆರ್ಯ Kuduvas-Kudiayas+Nadavas+Aryan)

# ತುಳುವರೆಂದರೆ ಯಾರು?

ತುಳುವರೆಂದರೆ ಯಾರು ಎಂಬುದು ತುಳುನಾಡಿನ ಚರಿತ್ರೆ ಬರೆಯುವಾಗ ಮೊದಲು ಹಾಗೂ ಮೊದಲ ಪಂಕ್ತಿಯಲ್ಲಿ ಜೇತರಿಸಿಕೊಳ್ಳುವ ಪ್ರಶ್ನೆ. ತುಳುವರೆಂದರೆ ತುಳು ಭಾಷೆಯನ್ನಾಡುವವರೋ? ಅಥವಾ ತುಳುದೇಶದಲ್ಲಿ ವಾಸ್ತವ್ಯ ಮಾಡಿಕೊಂಡಿರುವವರೋ? ಇದರ ನಿಷ್ಕರ್ಷೆ ಅತ್ಯಗತ್ಯವಾದರೂ ಅಷ್ಟೊಂದು ಸುಲಭವಲ್ಲ.

ತುಳು— ತುಳುವ-ಎಂಬ ಪದದ ನಿಷ್ಪತ್ತಿ ಹೇಗೆಂಬುದು ಅನಗತ್ಯವೆಂದು ಕೆಲವರಭಿಪ್ರಾಯವಿರಬಹುದು. ಪ್ರತಿಯೊಂದರ ಮೂಲವನ್ನು ಶೋಧಿಸುತ್ತಾ ಹೋದಲ್ಲಿ ನಮಗೆ ನೆಲೆ ಸಿಕ್ಕಲಾರದೆಂದು ಅಂತವರ ವಾದ. ತುಳುಭಾಷೆ ಇದೆ. ಅದು ಪಂಚ ದ್ರಾವಿಡ ಭಾಷೆಗಳಲ್ಲಿ ಒಂದಾದ ಭಾಷೆ. ಆ ಭಾಷೆಯನ್ನಾಡುವವರು ತುಳುವರೇ ಸರಿ. ತುಳು ಭಾಷೆಯನ್ನಾಡುವ ನಾಡು ತುಳು ನಾಡು. ಅಂದಮೇಲೆ ಇದಕ್ಕಿಂತಲೂ ಆಳಕ್ಕೆ ಮುಳುಗಿ ಚರ್ಚೆಗೆ ಮತ್ತೂ ಹಾದಿ ಮಾಡಿಕೊಳ್ಳುವ 'ತಲೆಹರಟೆ' ಏಕೆಂದು ಅವರು ಪ್ರಶ್ನಿಸಬಹುದು. ಆದರೆ ಇದು ದುರ್ದೈವದ ಸಂಗತಿ. ಭಾಷೆಯ ಮೇಲಿಂದ ಹೆಸರುಗೊಂಡ ಒಂದು ದೇಶವೂ ಪ್ರಪಂಚದಲ್ಲಿ ದೊರೆಯಲಾರದು. ಜನಾಂಗದಿಂದ ಭಾಷೆಗೆ ಹೆಸರುಂಟಾಗಬಹುದು. ಅಥವಾ ದೇಶದಿಂದ ಭಾಷೆಯು ಹೆಸರನ್ನು ಪಡೆಯಬಹುದು. ಆದರೆ ಇದರ ವಿಪರೀತವಾದುದನ್ನು ಎಲ್ಲಿಯೂ ಕಾಣಸಿಕ್ಕುವುದಿಲ್ಲ. ಆದ ಕಾರಣ ತುಳು ನುಡಿಯಿಂದ ತುಳುನಾಡು ಯಾ 'ತುಳುವ'ವೆಂಬ ಹೆಸರುಬಂದಿತೆಂದು ವಾದಿಸಿದರೆ ಅದು ಅವಿಚಾರವಾದೀತು. ಕಾಲಾನುಗತಿತ್ವದಿಂದ, ಮಾತಿನಿಂದ ಮಾತಿಗೆ ಪದ್ಧತಿಯ ರೂಢಿಯಿಂದ ಬಂದಿರುವ ಅರ್ಥವು ತಪ್ಪು ಎನ್ನಲಿಕ್ಕಾಗದಿದ್ದರೂ (ಏಕೆಂದರೆ ರೂಢಿಯೇ ಭಾಷೆಗೆ ಮೂಲವೆಂಬುದು ಬಲ್ಲವರ ಮತ) ಅದು ಪರಮ ಅರ್ಥವಲ್ಲ. ಆದುದರಿಂದ ಮುಂದಕ್ಕೆ ವಿವರಿಸಲಾಗುವಂತೆ 'ತುಳುವ' ಎಂದರೆ ಜನಾಂಗದಿಂದ ಬಂದಂತ ಅರ್ಥವಿರುವುದು, ಇರಬೇಕಾದುದು ನ್ಯಾಯವೆಂಬುದು ವಿದಿತವಾಗುವುದು.

ಇನ್ನೊಂದೆಡೆ–ತುಳುನಾಡು ಎಂಬುದು ಪ್ರಖ್ಯಾತವಾಗಿದ್ದ ಒಂದು ದೇಶ ಒಂದು ಕಾಲದಲ್ಲಿ. ಆ ನಾಡಿನಲ್ಲಿ ವಾಸಿಸುತ್ತಿದ್ದವರು (ವಾಸಿಸುತ್ತಿರುವವರು) ತುಳುವರು. ಬಹಳ ಸರಳವಾದ ವಿವರಣೆ. ಇದಕ್ಕಿಂತ ಹೆಚ್ಚೇಕೆ ವಿಮರ್ಶೆ? ಈ ದಾಂದಲೆ ಏಕೆ ಬೇಕು? ಎಂಬುದೇನೋ ತೋರಿಕೆಗೆ ಸರಿ ಕಾಣಬಹುದು. ಆದರೆ ಇಷ್ಟರಲ್ಲಿ ನಮ್ಮ

ವಿಮರ್ಶೆಯನ್ನು ಮುಗಿಸಿದರೆ ನಮ್ಮನ್ನು ನಾವೇ ಅರಿತಂತಾಗದು. ಈ ಎರಡನೇ ವಾದಕ್ಕೂ, ಅರ್ಥಕ್ಕೂ ಗೌಣಸ್ಥಾನವೇ ಹೊರತು ಪ್ರಥಮ ಸ್ಥಾನ ಸಿಗಲಾರದು.

ಆದರೆ ಈ ಬಗೆಯ ವಿಚಾರ ವಿಮರ್ಶೆಯ ಕೆಲಸವು ಎಣಿಸಿದಷ್ಟು ಸುಲಭವಲ್ಲ. ಕಾರಣ ನಮ್ಮ ನಾಡಿನಲ್ಲಿ ಅತೀ ಪ್ರಾಚೀನ ಕಾಲದ ಕಲ್ಬರಹಗಳು ಅತಿವಿರಳವಾಗಿವೆ. ಇನ್ನಿತರ ಪುರಾತನ ಶಾಸನಗಳೂ ಕಡಿಮೆ. ಚಾರಿತ್ರಿಕ ದಾಖಲೆಗಳೂ ಅತ್ಯಲ್ಪ. ಹೀಗಾದುದರಿಂದ ಪರಂಪರಾಭ್ಯಾಸಗಳು, ಐತಿಹ್ಯ, ಸ್ಥಳಪುರಾಣಗಳು, ಊಹನೆ, ಸ್ಥಳನಾಮಗಳು, ಅನ್ಯದೇಶಗಳ ಚರಿತ್ರೆಯಲ್ಲಿ ಒಮ್ಮೊಮ್ಮೆ ಕಂಡುಬರುವ ಉಲ್ಲೇಖಗಳು ಇತ್ಯಾದಿಗಳೇ ನಮಗೆ ಮೂಲಾಧಾರವಾಗುವ ಸಂಭವ. ಆದಾಗ್ಯೂ ಪ್ರಯತ್ನ ಮಾಡುವುದು ಪ್ರತಿಯೋರ್ವನ ಕರ್ತವ್ಯವಾಗಿದೆ. ಪ್ರತಿಯೊಬ್ಬನೂ ತನ್ನ ಅಳವಿಗೆ ಅನುಸರಿಸಿ ಪ್ರಯತ್ನ ಮಾಡಲೇ ಬೇಕು. ಮಾಡದಿದ್ದರೆ ಅದುವೇ ಅಧರ್ಮವೆನಿಸುವುದು. ಅಂತೆಯೇ ನನ್ನದು ಬರಿ ಪ್ರಯತ್ನವಷ್ಟೇ, ಈ ಕೆಲಸದ ಸಂಭ್ರಮದಲ್ಲಿ ನನ್ನ ಪ್ರಯತ್ನವು ಪರಿಪೂರ್ಣವೆಂದು ಬಗೆಯಲಾರೆ.

ನಮ್ಮ ನಾಡಿನ ಪ್ರಾಚೀನ ಸಾಂಸ್ಕೃತಿಕ ಚರಿತ್ರೆಯನ್ನು ಬರೆಯಲು ಕೆಲವು ತೊಡಕುಗಳಿವೆಯೆಂದು ಮೇಲೆ ತಿಳಿಸಿದೆ. ಕಲ್ಬರಹ,ಶಾಸನ ಮತ್ತು ಗ್ರಂಥಗಳ ತೀವ್ರ ಅಭಾವ ಮತ್ತು ಇವುಗಳಿಲ್ಲದೆ ಇತಿಹಾಸದ ಪರಿಪೂರ್ಣ ಚಿತ್ರಣವು ಸಾಧ್ಯವಿಲ್ಲವೆಂಬ ಸಾಮಾನ್ಯ ನಂಬಿಕೆ. ಆದರೆ ಈಗ ಇವುಗಳು ಹಿಂದಿನಂತೆ ತೊಡಕು, ಪ್ರತಿಬಂಧಕಗಳಾಗಿ ನಿಲ್ಲಬೇಕಾಗಿಲ್ಲ. ಕಾರಣ ಸಂಪ್ರದಾಯ ಮತ್ತು ಪೂರ್ವ ಪರಂಪರೆಗಳನ್ನು ಮಾನವ ಸಮಾಜ ವಿಕಾಸ ಶಾಸ್ತ್ರದ ಬೆಂಬಲದಿಂದ ಹೊಂದಿಸಿಕೊಂಡು ಇತಿಹಾಸದ ನಿರೂಪಣೆಯು ವಿದ್ವಾಂಸರ ಹಾಗೂ ಪ್ರಭೃತಿಗಳ ಮನ್ನಣೆಯನ್ನು ಪಡೆಯುತ್ತಿದೆ. ಏಕೆಂದರೆ ಸಂಪ್ರದಾಯ, ಪೂರ್ವ ಪರಂಪರೆಗಳು ಪ್ರತ್ಯಕ್ಷ ಜೀವನದ ಭಾಗವಾಗಿದ್ದು ಶಾಸನಾದಿಗಳು ಅದರ ನೆರಳೆಂದರೆ ತಪ್ಪಾದೀತೇ? ಎಲ್ಲೆಲ್ಲಿ ಅಂತಹ ಪರಂಪರೆ ಪೂರ್ವ ಸಂಪ್ರದಾಯಗಳು ಮಾಯವಾಗಿವೆಯೋ ಅಲ್ಲಿ ಶಾಸನಾದಿ ಲಿಖಿತ ಆಧಾರದಿಂದಲೇ ಸಂಶೋಧನೆ ಮೊದಲು ಮಾಡಬೇಕಾಗುತ್ತದೆ. ಉದಾ:–ಇಜಿಪ್ತ, ಮೆಸಪಟೋಮಿಯಾ ಇತ್ಯಾದಿ. ಆದರೆ ತುಳುನಾಡಿನಂತಹ ಜೀವಂತ ಪರಂಪರೆಗಳನ್ನು ಪರಮಾವಧಿಯಲ್ಲಿ ಈ ವರೆಗೆ ಕಾಯ್ದುಕೊಂಡು ಬಂದಿರುವ 'ನಾಡವರ' ಆಗುಹೋಗುಗಳನ್ನು ಜೀವನದ ಚಿತ್ರಣವನ್ನು ಬರೆಯುವಾಗ ಕಲ್ಬರಹ, ಶಾಸನ, ಲಿಖಿತಚರಿತ್ರೆಗಳನ್ನೇ ಅವಲಂಬಿಸಿದರೆ ಆ ಇತಿಹಾಸ ಅಪೂರ್ಣವಾಗುವದೆಂದು ನನ್ನ ಅಭಿಪ್ರಾಯ.

ಲಿಖಿತ ಆಧಾರಗಳಲ್ಲಿ ಒಮ್ಮೊಮ್ಮೆ ಒಂದು ಕುಂದು ಕಂಡು ಬರುತ್ತದೆ. ಅವುಗಳಲ್ಲಿ ಪಾಂಡಿತ್ಯದ ಹೊಳಪು ಕೂಡಿ ಮೂಲ ರೂಪವು ಎಷ್ಟೋ ಬಾರಿ ತಿಳಿಯದಾ

ಗುತ್ತದೆ. ಆದುದರಿಂದ ಜನಜೀವನದ ಅಭ್ಯಾಸದಲ್ಲಿ ಪರಿಣತರು ಸಾಂಸ್ಕೃತಿಕ ಇತಿಹಾಸ ಬರೆಯುವಲ್ಲಿ ಪರಂಪರೆಗಳ ಪರಿಶೋಧನೆಗೆ ಒಂದು ಮಹತ್ವವನ್ನಿತ್ತು, ದಾಖಲೆಗಳ ಆಧಾರಗಳನ್ನೇ ಅವಲಂಬಿಸುವುದು ಅಸಮಂಜಸ ಮಾತ್ರವಲ್ಲ, ತಪ್ಪು ಎಂಬುದಾಗಿಯೂ ನಿರ್ಣಯಕ್ಕೆ ಬಂದಿದ್ದಾರೆ. ಭಾಷಾ ಶಾಸ್ತ್ರದ ತುಲನೆಯಲ್ಲಿಯೂ ಇದೇ ಉಕ್ತಿ ಉಪಯುಕ್ತ, ಸುಶಿಕ್ಷಿತರ ಉಚ್ಚಾರಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡು ಭಾಷೆಯೊಳಗಿನ ಶಬ್ದಗಳ ಮೂಲ ಸ್ವರೂಪ ಹೇಗೆಂಬುದನ್ನು ನೆಲೆ ಹಿಡಿಯಲು ಸಾಧ್ಯವಿಲ್ಲ. ಅಂತಹ ಪ್ರಯತ್ನವೂ ವಿಫಲ. ಜನ ಸಾಮಾನ್ಯರ ಉಚ್ಚಾರಗಳನ್ನು ಎಣಿಕೆಯಲ್ಲಿ ತಂದುಕೊಳ್ಳಲೇಬೇಕು ಎಂಬ ನಿರ್ಧಾರಕ್ಕೆ ಶಾಸ್ತ್ರಜ್ಞರು ಬಂದಿದ್ದಾರೆ.

ಒಟ್ಟಾರೆಯಲ್ಲಿ ಹೇಳುವುದಾದರೆ ಪರಂಪರೆಗಳು ಫಕ್ಕನೆ ಪ್ರತ್ಯಕ್ಷವಾಗುವುದೂ ಇಲ್ಲ; ಮಾಯವಾಗುವುದೂ ಇಲ್ಲ. ಹೊಸತು ಹಳೆಯದೊಡನೆ ಬೆರೆತುಕೊಳ್ಳುತ್ತದೆ, ಹಳೆಯದು ಮಾರ್ಪಾಡು ಹೊಂದುತ್ತದೆ. ಕೆಲವು ಹೆಚ್ಚು ಅರ್ಥವತ್ತಾಗುತ್ತವೆ- ಇನ್ನೂ ಕೆಲವು ಅರ್ಥ ವಿಹೀನವಾಗುತ್ತವೆ. ಇವುಗಳಲ್ಲೆಲ್ಲಾ ಪ್ರಾಚೀನ ಯಾವುದು, ಅರ್ವಾಚೀನವಾವುದು, ಸತ್ಯ ಯಾವುದು, ಜೊಳ್ಳು ಯಾವುದು, ಇವುಗಳು ಎಂದು ಬಂದವು, ಹೇಗೆ ಬಂದುವು. ಕಾಲಾನುಗತಿಯಲ್ಲಿ ಅವು ಯಾವಾಗ, ಏಕೆ, ಹೇಗೆ ಮಾರ್ಪಾಡು ಹೊಂದಿದವು—ಎಂದು ಮುಂತಾದ ಸಂಗತಿಗಳನ್ನು ಸೂಕ್ಷ್ಮವಾಗಿ ವಿಮರ್ಶಿಸಿ, ವಿಚಾರಿಸಿ, ಕೂಲಂಕಷವಾದ ಸ್ಪಷ್ಟೀಕರಣ ಅಗತ್ಯ.

ನಮ್ಮ ನಾಡಿನ ಊರ ಹೆಸರುಗಳು ತೋರಿಕೆಗೆ ಕ್ಷುಲ್ಲಕವಾಗಿ ಕಾಣಬಹುದು. ಆದರೆ ಅವುಗಳ ಅಭ್ಯಾಸ, ಪರಿಶೋಧನೆಯಿಂದ ಸಂಸ್ಕೃತಿಯ ಕೆಲವು ಸಮಸ್ಯೆಗಳು ಬಗೆಹರಿಯಲು ಸಾಧ್ಯವಿದೆ. ಈ ಸಮಸ್ಯೆಗಳನ್ನು ಈ ಹೆಸರುಗಳಲ್ಲಿ ಬಿಡಿಸಿ ಬಗೆಹರಿಸುವ ಸಾಮರ್ಥ್ಯವನ್ನು ನಾವು ಬೆಳೆಸುವದಗತ್ಯ. ಸಾಮರ್ಥ್ಯವಿಲ್ಲದಿದ್ದರೆ ಪ್ರಕೃತಿಯು ವಿಕೃತವಾಗುತ್ತದೆ. ಸ್ವಾಭಾವಿಕವಾಗಿದ್ದುದು ಅಸ್ವಾಭಿಕತೆಯನ್ನು ಹೊಂದುವ ಸಂಭವ ಹೆಚ್ಚು. ನಮ್ಮೂರ ಹೆಸರುಗಳ ಮಟ್ಟಿಗಂತೂ ಅವುಗಳಲ್ಲಿ ಏನಾದರೂ ಹುರುಳಿದೆಯೋ ಎನ್ನುವಷ್ಟು ಹಲವೆಡೆಗಳಲ್ಲಿ ಅವು ಅರ್ಥ ವಿಹೀನವಾಗಿವೆ. ವಿಕಾರವನ್ನು ಹೊಂದಿವೆ. ಸಂಸ್ಕೃತೀಕರಿಸಲ್ಪಟ್ಟಿವೆ. ಮೂಲಾರ್ಥ ತಿಳಿಯದಷ್ಟು ಮಾರ್ಪಾಡಾಗಿವೆ. ತುಳು ತೌಳವವಾಗಿದೆ; ಪಾಳಲುಂಜೆ ಪಾವಂಜೆಯಾಗಿದೆ; ಕುಡುಮ ಧರ್ಮಸ್ಥಳವಾಗಿದೆ; ಕುಂಜಾರ ವಿಮಾನಗಿರಿಯಾಗಿದೆ; ಪೊಳಲಿ (ಪುರಾಲ್)ಪುಲಿನಾಪುರವಾಗಿದೆ. ಕೋಟ ಕೂಟಮಹಾಜಗತ್ತು ಎನಿಸಿದೆ. ಇತ್ಯಾದಿ.

'ತುಳುವ'ದ ಮೇರೆ ಯಾವುದೆಂದು ತಿಳಿಯುವುದೂ ದುಸ್ತರವಾಗಿದೆ. ತುಳುವದ ಚರಿತ್ರೆಗೆ ಆಧಾರಗಳಲ್ಲೊಂದಾದ 'ಪಾಡ್ದನ'ಗಳಲ್ಲಿ (ಪ್ರಾರ್ಥನೆ)ಏಕಾಭಿಪ್ರಾಯವು ವ್ಯಕ್ತವಾಗಿಲ್ಲ. ಲೆಕ್ಕೆಸಿರಿ (ರಕ್ತೇಶ್ವರಿ) ಪಾಡ್ದನದ ಪ್ರಕಾರ "ಬಡಗು ಅಂಕೋಲೆಯಿಂದ, ತೆಂಕು ರಾಮೇಶ್ವರ, ಮೂಡುಗಟ್ಟ ಪಡು ಸಮುದ್ರ"ವೆಂತ ನಿರುಕ್ತವಾಗಿದೆ. ಆದರೆ ಇದು ವಿಚಾರಕ್ಕೆ ನಿಲುಕದಷ್ಟು ಸ್ಥೂಲವಾದ ನಿರೂಪಣೆ. ಇನ್ನು ಕೆಲವು ದೈವಗಳು "ಉತ್ತರಕ್ಕೆ ಗಂಗೊಳ್ಳಿ ಹೊಳೆಯೂ ದಕ್ಷಿಣಕ್ಕೆ ಮಲೆಯಾಳವೂ, ಪೂರ್ವಕ್ಕೆ ಗಟ್ಟವೂ ಪಶ್ಚಿಮಕ್ಕೆ ಸಮುದ್ರವೂ" ಇರುವುದೆಂಬುದಾಗಿ ತುಳುನಾಡಿನ ಗಡಿಗಳನ್ನು ತಿಳಿಸುತ್ತವೆ. ಇದರ ಪ್ರಕಾರ ಎರಡರ್ಥವನ್ನು ನಾವು ಕಟ್ಟಿಕೊಳ್ಳಬಹುದು. ಗಂಗೊಳ್ಳಿ ಹೊಳೆಗೆ ಉತ್ತರ ಕನ್ನಡದ ಗಂಗಾವಳಿ ನದಿ ಎಂಬುದಾಗಿ ಸ್ವೀಕರಿಸಿದರೆ ಉತ್ತರಕನ್ನಡದ ಅರ್ಧ ಭಾಗವು ತುಳುವದಲ್ಲಿ ಸೇರಿರಬೇಕು. ದಕ್ಷಿಣ ಕನ್ನಡದ ಗಂಗೊಳ್ಳಿ ನದಿಯನ್ನು ಉತ್ತರ ಮೇರೆಯಾಗಿ ತೆಗೆದುಕೊಂಡರೆ ನಮ್ಮ ಜಿಲ್ಲೆಯು ಪೂರ್ತಿಯಾಗಿ ತುಳುವವಾಗಿರಲಿಲ್ಲವೆಂದರ್ಥವಾಗುತ್ತದೆ ದಕ್ಷಿಣ ಕನ್ನಡದ ಮೆನ್ಯುವೆಲ್ಲಿನಲ್ಲಿ ಈ ಎರಡನೇ ಅರ್ಥವನ್ನು ಸ್ವೀಕರಿಸಿದಂತೆ ಕಾಣುತ್ತದೆ ವೇಣುಪುರದ ನಿವಾಸಿಗಳಾದ ಚಂದಯ್ಯೋಪಾಧ್ಯಾಯರು ಬರೆದ ಜೈನಾಚಾರವೆಂಬ ಗ್ರಂಥದಲ್ಲಿ ತುಳುನಾಡಿನ ಬಸದಿಗಳ ವಿವರವನ್ನು ಕೊಟ್ಟಿದೆ. ಅದರಲ್ಲಿ ಅವರು ತುಳುನಾಡಿನ ಉತ್ತರ ಮೇರೆಯನ್ನು 'ಗೆರೆಸೊಪ್ಪೆ'ಯ ವರೆಗೆ (ಶರಾವತಿ ವರೆಗೆ) ಕೊಂಡೊಯ್ದಿದ್ದಾರೆ. ಯಂ. ಗಣಪತಿ ರಾವ್ ಐಗಳವರು ಅವರ 'ತುಳುದೇಶದ ವಿಸ್ತಾರ'ಎಂಬ ಲೇಖನದಲ್ಲಿ ಈ ರೀತಿ ಬರೆದಿದ್ದಾರೆ "ತುಳು ದೇಶವು ಉತ್ತರದಲ್ಲಿ ಗೋಕರ್ಣದಿಂದ, ಪಯಸ್ವಿನಿಯ ವರೆಗೂ ವಿಸ್ತರಿಸಿಕೊಂಡಿತ್ತು. ತುಳು ಜೈನ ಅರಸರಾದ ಸಂಗೀತ ಪುರದರಸರು ತುಳು ಅರಸರೆಂದೇ ಆಳುತ್ತಿದ್ದರು. ಇವರು ಗೋಕರ್ಣದಿಂದ ದಕ್ಷಿಣಕ್ಕಿರುವ ಆವಿನ ಹಳ್ಳಿ, ತರವೂರು, ಮೊರಬಡಿ, ಸಾಳನಾಡು, ಬಟಕಳ, ಗೆರಸೊಪ್ಪೆ, ಚಂದಾವರ, ಗೋವರ್ಧನಗಿರಿ, ವಡಿ ಎಂಬ ಮಾಗಣೆಗಳನ್ನು ಆಳಿಕೊಂಡಿದ್ದರು. ಭೂತಾಳಪಾಂಡ್ಯರಾಯನ ಕಾಲದಿಂದಲೂ ಈ ಕುಟುಂಬವು ಆಳಿಕೊಂಡಿತ್ತು. ಈ ಕುಟುಂಬಕ್ಕೆ ಭಾರಸವೆಂಬ ವಂಶನಾಮವಿತ್ತು. ಕೆಳದಿಯ ನಾಯಕರು ಈ ದೇಶವನ್ನು ಸ್ವಾಧೀನ ಪಡಿಸಿಕೊಳ್ಳುವ ವರೆಗೂ ಗೋಕರ್ಣದಿಂದ ಪಯಸ್ವಿನಿ ನದಿಯ ವರೆಗಿನ ಪ್ರದೇಶವು ತುಳುದೇಶವೆನ್ನಿಸಿಕೊಂಡೇ ಇತ್ತು. ಅನಂತರ ಈ ಹೆಸರು ಮಾಯವಾಯ್ತು" ಕೇರಳೋತ್ಪತ್ತಿಯಲ್ಲಿ 'ಸೀತಾನದಿಯಿಂದ ಪಯಸ್ವಿನಿ ನದಿಯ ವರೆಗೆ ತುಳುರಾಜ್ಯ"ವೆಂದಿದೆ. ಐಗಳವರ ವಿವರದಿಂದ ಒಂದು ಸಂಗತಿ ವ್ಯಕ್ತವಾಗುತ್ತದೆ. ಇನ್ನಿತರ ನಿರೂಪಣೆಗಳೂ ಇದಕ್ಕೆ ಪೂರಕಗಳಾಗಿವೆ ಎಂದೇ ಹೇಳಬೇಕು. 'ತುಳವ'ವೆಂಬುದು (ತುಳು) ನಿರ್ದಿಷ್ಟವಾದೊಂದು ದೇಶ

ವಾಚಕ ಶಬ್ದವಲ್ಲವೆಂದೂ, ಸಹ್ಯಾದಿ ಖಂಡದಲ್ಲಿ ಕಂಡು ಬರುವಂತೆ 'ಕರಾಟಂಚ ವಿರಾಟಂಚ ಮರಾಟಂ ಕೊಂಕಣಂ ತಥಾ, ಹವ್ಯಗಂ ತೌಳವಂ ಚ್ಯೈವ ಕೇರಳಂ ಚೇತಿ ಸಪ್ತಕಃ|" ಈ ರೀತಿ ಪರಶುರಾಮನೇ ಸಪ್ತ ಕೊಂಕಣವನ್ನಾಗಿ ಪಶ್ಚಿಮ ಕರಾವಳಿಯನ್ನಿರಿಸಿದ್ದೆ ಬಂದು ಕೃತಕವೆಂದೂ ತಿಳಿಯಲು ಸಾಧ್ಯವಿದೆ.

ಚಾಳುಕ್ಯರ ರಾಜ್ಯವು ಕಂನಾಡು ರಾಷ್ಟ್ರಕೂಟರ ರಾಜ್ಯವೂ ಕಂನಾಡೇ, ಅಂತೆಯೇ ಕದಂಬರೂ, ಗಂಗರೂ, ಹೊಯ್ಸಳರೂ, ಆಳ್ವರೂ, ಕೆಳದಿಯನಾಯಕರೂ ಕಂನಾಡಿನಲ್ಲೇ ತಮ್ಮ ರಾಜ್ಯವನ್ನು ಕಟ್ಟಿದರು. ಅಂತೆಯೇ ತುಳುವರೂ ಕಂನಾಡಿನ ಒಂದು ಭಾಗದಲ್ಲಿ ಕೇಂದ್ರೀಕೃತರಾಗಿ ಆ ಭಾಗವು ಸ್ಥಳೀಕವಾಗಿ ತುಳುನಾಡಾಯಿತೆಂದು ಅನುಮಾನಿಸಲು ಸಾಧ್ಯವಿದೆ. ಹಾಗಾದರೆ ತುಳುವರೆಂದರೆ ಯಾರು?

ನಮ್ಮ ನಾಡಿಗೆ ಯಾವಂದಿನಿಂದ 'ತುಳುವ' (ತುಳುರಾಜ್ಯ) ಎಂಬ ಹೆಸರು ಬಂತೆಂಬುದನ್ನು ತಿಳಿಯುವುದೂ ಕಷ್ಟವೇ ಸರಿ. ಕಾರಣಗಳು ಈ ಕೆಳಗಿನಂತಿವೆ.

ತುಳುನಾಡಿನವರ ಉಲ್ಲೇಖವು ಋಗ್ವೇದ ಕಾಲದಲ್ಲಿ ಸ್ಪಷ್ಟವಾಗಿ ಕಂಡುಬರುವುದಿಲ್ಲ. ಐತರೇಯ ಬ್ರಾಹ್ಮಣದಲ್ಲಿನ ನಮೂದಿಸಲ್ಪಟ್ಟ ದಕ್ಷಿಣಾಪಥದ ಅನಾರ್ಯರ ಹೆಸರುಗಳಲ್ಲಿ ಆಂಧ್ರರು, ಪುಂಡರು, ಶಬರರು, ಪುಲಿಂದರು, ಮೂತಿಬರು— ಇವರೇ ಮೊದಲಾದ ದಸ್ಯುಗಳ ಉಲ್ಲೇಖವಿದೆ ಹೊರತು, ತುಳುವರ ಹೆಸರು ಕಂಡುಬರುವುದಿಲ್ಲವಾದುದರಿಂದ ಈ ಪ್ರದೇಶಕ್ಕೆ ತೌಲವವೆಂಬ ನಾಮಾಂಕಿತವು ವೇದಕಾಲವಲ್ಲಿ ಇದ್ದಿರಲಾರದು. ಆದರೆ ಋಗ್ವೇದದಲ್ಲಿ ಕಂಡುಬರುವ ಒಂದು ಪಂಗಡವು ನಮ್ಮ ನಾಡಿನಲ್ಲಿದ್ದಂತೆ ಭಾಸವಾಗುತ್ತದೆ. ಇವರೇ ಪಣಿಗಳು ಇವರು ಆರ್ಯರ ದನಗಳನ್ನು ಓಡಿಸಿಕೊಂಡು ಹೋಗುವ ಕಾಯಕದವರು ಆರ್ಯರಿಗೂ ಪಣಿಗಳಿಗೂ ಸಂಧಾನವೇ ಇರಲಿಲ್ಲ. ಈ ಪಣಿಗಳ ಅಸ್ತಿತ್ವವನ್ನು ಅವರ ನೆನಹವನ್ನು ಕೊಡುವ ಪಣಿಯಾಡಿ, ಪಣಿಯಾಲ, ಪಣಂಬೂರು, ಪಣಿಯೂರು, ಪಣಸಿಲ ಎಂಬ ಊರುಗಳ ಹೆಸರುಗಳಿಂದಷ್ಟೆ ತಿಳಿಯಲು ಆಸ್ಪದವಿದೆ. ಈ ಊರುಗಳು ನಮ್ಮ ದಕ್ಷಿಣಕನ್ನಡ ಜಿಲ್ಲೆಯಲ್ಲಿವೆ ಎಂದು ಹೇಳಿದರೆ ಹಲವರು ಸೋಜಿಗಗೊಳ್ಳಬಹುದಾಗಿದೆ. ಈ ಪಣಿಗಳು ನಮ್ಮ ಜಿಲ್ಲೆಗೆ ಎಂದು ಆಗಮಿಸಿ ನೆಲಸಲು ಪ್ರಾರಂಭಿಸಿದರು. ಎಂಬುದು ತಿಳಿಯದಾಗಿದೆ. ಈ ಪಣಿಗಳಷ್ಟೆ ಪ್ರಾಚೀನರಾದ ಜನಸ್ತೋಮವು ತುರುವರದ್ದು (ತುರುಕಾರರು ಯಾ ತುಳುವರದ್ದು) ಈ ತುರುವರ ನಾಡೇ ನಮ್ಮ ತುಳುನಾಡೆಂಬು ನಿರ್ಧರಿಸಲು ಅನೇಕ ಕಾರಣಗಳುಂಟು, ಅದರ ವಿವರವು ಮುಂದಕ್ಕೆ ಕೊಡಲ್ಪಡುವುದು. ಆರ್ಯರು ಮತ್ತು ದ್ರಾವಿಡರಿಗಿಂತ ಮೊದಲು ಅಲ್ಲಲ್ಲಿ ನೆಲೆಸಿದ್ದ ಪ್ರಾಗೈತಿಹಾಸಿಕ ಜನ

ಕುರುಹುಗಳೂ ನಮ್ಮ ನಾಡಿನಲ್ಲಿವೆ. ಕೋಲರೆಂಬ ಜನದ ಕುರುಹು ಕೊಲ್ಲೂರು, ಕೋಲ್ನಾಡುಗಳೆಂಬ ಊರುಗಳ ಹೆಸರುಗಳ ಮೂಲಕವೂ, ಮುಂಡರ ಕುರುಹು ಮುಂಡುಕೂರು, ಕಲ್ಲ ಮುಂಡುಕೂರು ಮುಂಡಜೆ, ಪೆರ್ಮುಂಡೆ ಇತ್ಯಾದಿ ಹೆಸರುಳ್ಳ ಊರುಗಳ ಮೂಲಕವೂ, ಆದಿನಿವಾಸಿಗಳಾದ ಬಿಲ್ಲರ(ಬಿಲ್ಲವರು)ಅಸ್ತಿತ್ವವು ಬಿಲ್ಲಾಡಿ ಎಂದು ಹೆಸರಾಂತ ಊರಿನ ಮೂಲಕವೂ, ಕನ್ನರೆಂಬ (ಕರ್ಣ, ಕರಣ) ಜನವು ಭೇದವು ಕನ್ನರಪಾಡಿ,ಕಣ್ಣೂರು,ಕನ್ಯಾಡಿ,ಕನ್ಯಾನಕಣಿಯೂರು, ಕಣ್ಣಲು,ಕನ್ಯಾರ ಎಂಬೀ ಊರುಗಳ ಮೂಲಕವೂ ತಿಳಿದುಕೊಳ್ಳಲು ಆಸ್ಪದವಿದೆ. ಕನ್ನರು" ಕಂನಾಡಿ ನಲ್ಲಿ ಎಲ್ಲೆಲ್ಲೂ ಸಾರ್ವತ್ರಿಕವಾಗಿ ನೆಲೆಸಿದ್ದು ಬೀಡು ಮಾಡಿಕೊಂಡಿದ್ದರಿಂದ "ಕಂನ್ನಾಡು" (ಕರ್ಣಾಟ) ಎಂಬ ಹೆಸರು ಬರುವಂತಾಯಿತು ಚಾರಿತ್ರಿಕ ಲಿಖಿತ ದಾಖಲೆಗಳು ಇಲ್ಲದಿರುವಾಗ ಈ ಸ್ಥಳ ನಾಮಗಳು ಅತಿಪ್ರಾಚೀನ ಇತಿಹಾಸವನ್ನು ತಿಳಿಯಲು ಸಹಾಯಕಗಳಾಗುವುದರಲ್ಲಿ ಸಂಶಯವಿಲ್ಲ. ಇವರಲ್ಲದೆ ಶಂಖಕುಲದ "ನಾಗರು" ಪಶ್ಚಿಮ ಕರಾವಳಿಯಲ್ಲಿ ಉತ್ತರ ಕನ್ನಡ ಜಿಲ್ಲೆಯಿಂದಾದರೂ ಕನ್ಯಾಕುಮಾರಿಯವರೆಗೆ ನೆಲೆಸಿದ್ದರೆಂದು ವ್ಯಕ್ತವಾಗುತ್ತದೆ. ಹರಿವಂಶದ ವಿಷ್ಣುಪರ್ವದಲ್ಲಿ (ಈ ಕಾವ್ಯವು 200 ಕ್ರಿ. ಶ.ದಿಂದ 400 ಕ್ರಿ. ಶ. ಅವಧಿಯೊಳಗೆ ನಿರ್ಮಿತವಾಗಿರಬೇಕು) ಹೇಳಲ್ಪಟ್ಟ 'ಮುದ್ಗಧಾ' ಎಂಬ ಪಂಗಡವು ನಮ್ಮ ನಾಡಿನ 'ಮೊಗೇರ' ರೆಂಬ ಬೆಸ್ತರಲ್ಲದೆ ಬೇರಾರೂ ಇರಲಾರರು. ನಮ್ಮ ಜಿಲ್ಲೆಯಲ್ಲಿ ಮೊಗ್ರು (ಮೊಗರು) ಎಂದು ಹೆಸರಾಂತ ಅನೇಕ ಸ್ಥಳಗಳು ಈ ಮೊಗೇರರ ಮೂಲವನ್ನು ತಿಳಿಸುವುದಿಲ್ಲವೇ?

ಮಾರ್ಕಂಡೇಯ ಪುರಾಣದಲ್ಲಿ ಹೆಸರಿಸಲ್ಪಟ್ಟ 'ಶಾಂತಿಕಾ' ಎಂಬ ದೇಶವು ನಮ್ಮ ನಾಡೇ ಆಗಿರಬೇಕೆಂದು ಶ್ರೀ ಗೋವಿಂದ ಪೈಗಳು ಸೋದಾಹರಣೆಯಿಂದ ವಿವರಿಸಿರುವರು. ಅಂತೆಯೇ ವರಾಹ ಮಿಹಿರನ ಬೃಹತ್ಸಂಹಿತೆಯಲ್ಲಿ (ಕ್ರಿ. ಶ. ೫ನೇ ಶತಮಾನ) ಈ ಪ್ರದೇಶಕ್ಕೆ ಶಾಂತಿಕವೆಂದೇ ಹೆಸರಿದ್ದುದು ಕಂಡುಬರುವುದಲ್ಲದೆ ತುಳುವ, ತೌಳವವೆಂದಿಲ್ಲ. ಅಶೋಕನ ಎರಡನೇ ಶಿಲಾಲೇಖದಲ್ಲಿ ನಮೂದಿಸಿದ 'ಸತಿಯಪುತ್ರರು' ನಮ್ಮೂರಾದ 'ಶಾಂತಿಕ'ವ ಜನರೇ ಎಂಬುದರಲ್ಲಿ ಸಂದೇಹ ಅನಗತ್ಯವೆಂದು ಶ್ರೀ ಗೋವಿಂದ ಪೈಗಳು ವಿಷಧೀಕರಿಸಿದ್ದಾರೆ.

ಕ್ರಿ. ಶ. ಎರಡನೇ ಶತಮಾನದಲ್ಲಿದ್ದ ಇಜಿಪ್ತ ದೇಶದ ಗ್ರೀಕ್ ಭೌಗೋಲಿಕನಾದ ಪ್ಟೋಲೆಮಿ ಎಂಬಾತನು ಭಾರತ ದೇಶವನ್ನು ಕುರಿತಾಗಿತ್ತ ವಿವರದಲ್ಲಿ (ಓಲಖ್ಯೊರಾ) ಎಂಬ ಹೆಸರಿನ ಪ್ರದೇಶವನ್ನುದ್ದೇಶಿಸಿ ಬರೆದಿದ್ದಾನೆ. ಇದು "ಆಳುವ",

"ಆಲುವ ಖೇಡ (ಖೇಟ)", "ಆಲುಕ"ವೆಂದು ಅಂದು ಪ್ರಖ್ಯಾತವಾಗಿದ್ದ ನಮ್ಮ ನಾಡೇ ಆಗಿದ್ದಿರ ಬೇಕು. ಈ "ಆಲುವ" ವನ್ನು ಆಳುತ್ತಿದ್ದವರು ಆಲುಪ ಅರಸರಾಗಿದ್ದರು. ಇವರು ಕ್ರಿ. ಶ 14ನೇ ಶತಮಾನದ ವರೆಗೆ ಒಂದಿಲ್ಲೊಂದು ಸ್ಥಾನಮಾನದಲ್ಲಿದ್ದು ತುಳು ನಾಡಿನ ಪ್ರಭುಗಳಾಗಿದ್ದರು. ಇದರಿಂದ ಈ ಪ್ರದೇಶವು 'ತುಳುವ ವೆಂಬ ಹೆಸರನ್ನು ಕನಿಷ್ಟ ಪಕ್ಷ ಕ್ರಿ. ಶ. 10ನೇ ಶತಮಾನದ ವರೇಗೆ ಧರಿಸಿಲ್ಲವೆಂದರ್ಥವಾಗುತ್ತದೆ. ರಾಷ್ಟ್ರಕೂಟರ ಪ್ರಖ್ಯಾತ ಅರಸರಲ್ಲೊಬ್ಬನಾದ ಮೂರನೇ ಗೋವಿಂದನ ಕಾಲದ (791-894 ಕ್ರಿ. ಶ.) ಶಿಲಾಲೇಖದಲ್ಲಿಯೂ 'ಆಳ್ವಖೇಡ'ಕ್ಕೆ' ಉಲ್ಲೇಖವಿದೆ. ಕ್ರಿ. ಶ. 602ರ ಮಹಾ ಕೂಟಸ್ತಂಭ ಲೇಖದಲ್ಲಿ ವೈಜಯಂತಿ ಎಂಬ ಬನವಾಸಿಯ ಜತೆಯಲ್ಲಿ 'ಆಳುಕ' ವೆಂಬ ದೇಶವನ್ನು ಹೇಳಿದ್ದು ಅದು ನಮ್ಮ ನಾಡೆಂಬುದರಲ್ಲಿ ಎರಡು ಮಾತಿರಲಾರದು. ಹೊಯ್ಸಳರಿಗೆ ನಮ್ಮ ನಾಡು 'ಆಳ್ವ ಖೇಡ'ವೇ

'ತುಳುವ' ವೆಂಬ ಹೆಸರು ನಮ್ಮ ನಾಡಿಗಿದ್ದುದು ಶಾಸನಗಳ ಮೂಲಕ ಮೊತ್ತ ಮೊದಲನೆಯದಾಗಿ ಕಂಡು ಬಂದುದು ಪ್ರಾಯಶಃ ಕ್ರಿ. ಶ. 1012ರ ಬಲ್ಮರಿಯ ಶಾಸನದಲ್ಲಿ, ಇದರಲ್ಲಿ ನಮ್ಮ ನಾಡನ್ನು 'ತುಳವ' ಎಂದು ಉಲ್ಲೇಖಿಸಿದೆ. ಈ ಕಾಲದ ನಂತರದಲ್ಲಿಯ ಶಾಸನಗಳಲ್ಲಿ 'ತುಳುವ' 'ತುಳುನಾಡು' 'ತುಳು ದೇಶ' ಎಂದೇ ಹೆಸರಿದ್ದುದು ಕಂಡು ಬರುತ್ತದೆ. ವಿಜಯ್ನ ನಗರದ ಆಳ್ವಿಕೆಯ ಕಾಲದಿಂದಲಂತೂ 'ತುಳು ದೇಶ'ವೆಂದೂ, 'ತುಳುವ'ವೆಂದೂ, 'ತುಳುನಾಡೆ'ಂದೂ ಮಾತ್ರವಲ್ಲ ಬಾರಕೂರು, ಮಂಗಳೂರು ರಾಜ್ಯವೆಂದೂ ನಮ್ಮ ನಾಡು ಹೆಸರನ್ನು ಪಡೆಯಿತು.

'ತುಳು ದೇಶವು ಬಹು ಪುರಾತನ ಕಾಲದಿಂದ ಇದ್ದ ದೇಶವಾಗಿದೆ.'ಎಂದು ಅಭಿಮಾನದಿಂದ ನಾವೆಲ್ಲರೂ (ಎಂದರೆ ತುಳುವರೆನಿಸಿಕೊಳ್ಳುವವರು) ಹೇಳಿಕೊಳ್ಳುವುದು ಅಷ್ಟೊಂದು ಅಸಮಂಜಸವಾಗದು. ಆದರೆ ಇದು ಎಷ್ಟು ಪ್ರಾಚೀನ, ಅದರ ಸ್ವತಂತ್ರ ವ್ಯಕ್ತಿತ್ವ ಎಂದಿನಿಂದ ಬೆಳೆದು ಬಂತು (ಸ್ವತಂತ್ರ ವ್ಯಕ್ತಿತ್ವವಿತ್ತೇ?) ತುಳುವರೆಂಬವರು ಯಾರು ಎಂಬುದನ್ನು ಕೂಲಂಕಷವಾಗಿ,ವಿಚಾರ ಒರೆಗಲ್ಲಿಗೆಕ್ಕಿ ಸತ್ಯವನ್ನು ಪ್ರಕಾಶಕ್ಕೆ ತರುವುದು ಅಗತ್ಯ. ಬರೆ ಹೆಮ್ಮೆ ಮಾತುಗಳನ್ನಾಡಿ ಪ್ರಯೋಜನವಿಲ್ಲ. ಈ ರೀತಿಯ ಪ್ರಯತ್ನದಲ್ಲಿ ಮೇಲ್ಕಾಣಿಸಿದ ಕೆಲವು ವಿಷಯಗಳು ತಲೆದೋರುತ್ತವೆ. ಸ್ಕಾಂದ ಪುರಾಣಾಂತಗರ್ತವೆಂದೆನಿಸುವ ಸಹ್ಯಾದ್ರಿಖಂಡದಲ್ಲಾಗಲೀ,ಕೇರಳೋತ್ಪತ್ತಿಯಲ್ಲಾಗಲೀ, ಆನಂದರಾಮಾಯಣದಲ್ಲಾಗಲೀ, ಕನ್ನಡ ಮಹಾಭಾರತದಲ್ಲಾಗಲೀ ತೌಳವವೆಂದು ಹೆಸರಿಸಿದ್ದರೆ ಅದು ಅದರ ಪ್ರಾಚೀನತೆಯನ್ನು ದೃಢೀಕರಿಸುವ

ದಾಖಲೆ ಎಂಬುದಾಗಿ ತೀರ್ಮಾನಿಸ ಬಾರದು. ಕಾರಣ ಈ ಸಾಹಿತ್ಯಗಳು ಅತಿ ಹಿಂದಿನವುಗಳಲ್ಲ; ಇತ್ತಲಾಗಿನವುಗಳು.

ಮೇಲಿನ ಸಂಗ್ರಹದಲ್ಲಿ ಎರಡು ವಿಷಯಗಳು ಸ್ಪಷ್ಟೀಕರಿಸಲ್ಪಟ್ಟವೆ. 'ತುಳುವ' ಎಂಬ ಪದವು ನಮಗೆ ದೊರಕಿರುವ ದಾಖಲೆಯಾಧಾರವನ್ನು ಹೊಂದಿಕೊಂಡು ಹೇಳುವುದಾದರೆ ಬಹು ಪ್ರಾಕ್ಕಾಲದ ಪದವಲ್ಲ. ಪರಂಪರೆಯು ಸನ್ನಿವೇಶದಲ್ಲಿ ಅದರ ಪ್ರಾಚೀನತೆಯ ನಿರ್ಣಯವನ್ನು ಮಾಡಬೇಕು. ಎರಡನೇಯದಾಗಿ 'ತುಳು' ಎಂಬುದು ದೇಶವಾಚಕವೂ ಅಲ್ಲ; ಭಾಷಾವಾಚನಕವೂ ಅಲ್ಲ. ಅದು "ತುರು" ಎಂಬುದರ ಪರ್ಯಾಯ ಪದ. ಹೀಗಾಗಿ ತುಳುವರೆಂದರೆ ತುರುವರು (ತುರುಕಾರರು) ಗೋಪರು. ಅವರ ನಾಡು ಗೋಪ ರಾಷ್ಟ್ರ, ಗೋರಾಷ್ಟ್ರ; ತುರುನಾಡು (ತುಳುನಾಡು) ತುಳು ಭಾಷೆಯು ಇಂದಿನ ತನಕ ಸಂಶೋಧಕರು. ವ್ಯಕ್ತಪಡಿಸಿದಂತೆ, ಪರಂಪರೆ ಕಟ್ಟಿದಂತೆ, ಪ್ರತ್ಯೇಕವಾದ ದ್ರಾವಿಡ ಭಾಷೆಗಳ ಕುಟುಂಬಯಾದ ಭಾಷೆಯಲ್ಲ. ಅದು ಕಂನುಡಿಯೇ ಆಗಿದೆ. ಬಹಳ ಹಳೇ, ಹಳೇ ಕಂನುಡಿ. ತುಳು ಎಂಬ ಶಬ್ದದ ಉತ್ಪತ್ತಿಯನ್ನೂ, ತುಳುವರೆಂದರೆ ಕಂನಾಡಿನಲ್ಲೇ ವ್ಯಾಪಿಸಿಕೊಂಡಿದ್ದ ತುರುವರು (ತುರುಕಾರರು) ಯಾ ಗೋಪರು ಎಂಬ ವಿಶಿಷ್ಟ ವಿಷಯವನ್ನೂ, ಗೋಪರಿದ್ದ ಪ್ರದೇಶ ಗೋಪ ರಾಷ್ಟ್ರ, ಗೋರಾಷ್ಟ್ರ ಯಾ ತುರು (ತುಳು) ನಾಡು ಎಂಬ ತೀರ್ಮಾನವನ್ನೂ ಪುಷ್ಟೀಕರಿಸಿ ಮುಂದಿನ ಭಾಗದಲ್ಲಿ ವಿಷದವಾಗಿ ವಿವರಿಸುತ್ತೇನೆ.

# 'ತುಳುವ'ದ ಹುಟ್ಟು

ಹಿಂದಿನ ಲೇಖನದಲ್ಲಿ ತುಳುವರೆಂದರೆ ಯಾರು ಎಂಬುದಕ್ಕೆ ಪ್ರಶ್ನಾರ್ಥಕ ಚಿನ್ಹೆಯನ್ನಷ್ಟೆ ಹಾಕಿ ಬಿಟ್ಟಿದೆ. ನಾವು ತುಳುನಾಡೆಂದು ಕರೆಯುವ ನಮ್ಮ ಪ್ರದೇಶಕ್ಕೆ ಒಂದೇ ಹೆಸರು ಎಲ್ಲಾ ಕಾಲದಲ್ಲಿ ಇರಲಿಲ್ಲವೆಂಬುದಾಗಿಯೂ, ಆಧಾರ ಗ್ರಂಥಗಳಲ್ಲಿ ನಮೂದಿಸಲ್ಪಟ್ಟ ಕೆಲವು ಹೆಸರುಗಳನ್ನು ಅನುಮಾನಿತ-ಸತ್ಯ (Hypothesis)ದ ಮೂಲಕ ನಮ್ಮ ತುಳುನಾಡಿಗೆ ಹೊಂದಿಸಿಕೊಳ್ಳುವ ಪ್ರಯತ್ನವನ್ನು ನಮ್ಮ ನಾಡಿನ ಪ್ರಭೃತಿಗಳು ಮಾಡಿದ್ದಾರೆಂಬುದಾಗಿಯೂ ತಿಳಿಸಿದ್ದಾಯಿತು. ತುಳುನಾಡಿನ ಚರಿತ್ರೆಯ ಮೇಲೆ ಹೆಚ್ಚಿನ ಬೆಳಕನ್ನು ಚೆಲ್ಲಿದ ಮಹಾವ್ಯಕ್ತಿಗಳೆಂದರೆ ಯಂ. ಗಣಪತಿರಾವ್ ಐಗಳವರು, ಶ್ರೀ ಮಂಜೇಶ್ವರ ಗೋವಿಂದ ಪೈಗಳು ಮತ್ತು ಡಾಕ್ಟರ್ ಆನಂದ ಭಾಸ್ಕರ ಸಲೆತೋರರು. ಶ್ರೀಮಾನ್ ಪೈಗಳು ನಮ್ಮ ನಾಡನ್ನು ಮುಸುಕು ಹಾಕಿದ್ದ ಅಜ್ಞಾನದ ಪರದೆಯನ್ನು ಮೇಲಕ್ಕೆತ್ತಿದವರು. ಅವರ "ಇತಿಹಾಸದ ಇರುಳಿನಲ್ಲಿ ತುಳುನಾಡು" "ತುಳುನಾಡು- ಪೂರ್ವಸ್ಮೃತಿ" "ದಕ್ಷಿಣ ಕನ್ನಡದ ಹಳೆ ಹೆಸರುಗಳು"ಎಂಬ ಅಮೂಲ್ಯವಾದನಿಬಂಧನೆಗಳಲ್ಲಿ ನಮ್ಮನಾಡು"ತಾಲವನ" "ಶಾಂತಿಕ" "ಸಾತೀಯ" "ಆಲುಕ-ಅಲುವಖೇಡ" ಎಂಬ ಹೆಸರುಗಳನ್ನು ಧರಿಸಿತ್ತು ಎಂಬುದು ವಿದಿತವಾಗುತ್ತದೆ. ಅಶೋಕನ ಎರಡನೆಯ ಶಿಲಾಲೇಖದಲ್ಲಿ ಕಂಡು ಬರುವ "ಸತಿಯ ಪುತ್ರೋ" ಎಂಬುದು ನಮ್ಮ ನಾಡಿನ ಜನರಿಗೇನೇ ಉದ್ದೇಶಿಸಿ ಬರೆದುದಾಗಿದೆ ಎಂಬುದು ತುಂಬಾ ಸಮಾಧಾನಕರವಾದ ತೀರ್ಮಾನ. ಆದರೆ ಅವರು "ಸತಿಯ" ಎಂಬುದು "ಶಾಂತಿಕ" ಎಂಬ ಸಂಸ್ಕೃತ ಪದದ ಪ್ರಾಕೃತ ರೂಪವೆಂದು ನಿಶ್ಚಯಿಸಿದ್ದು ಅಷ್ಟೊಂದು ಸಮಂಜಸವೆಂದು ನನಗನಿಸುವುದಿಲ್ಲ."ಸತಿಯ ಪುತ್ರೋ" ಎಂದರೆ,ಹೆಣ್ಣು ಮೂಲವೇ ಪ್ರಧಾನವಾದ ನಮ್ಮ ನಾಡಿನ ಪುತ್ರರು (ಜನರು) ಎಂಬ ಅರ್ಥಕ್ಕೆ ಹೆಚ್ಚಿನ ಆಧಾರವಿದೆ ಎಂದು ನನ್ನ ಅಭಿಪ್ರಾಯ. ಈ ಕುರಿತಾಗಿ ಶ್ರೀಮಾನ್ ವಿದ್ವಾನ್ ಕೆ. ವೆಂಕಟ್ರಾಯಾಚಾರ್ಯರು, ಅವರ "ಸಾಹಿತ್ಯದ ಹಿನ್ನೆಲೆ" ಎಂಬ ಸಂಶೋಧನಾಗ್ರಂಥದಲ್ಲಿ ಸ್ಪಷ್ಟೀಕರಿಸಿದ್ದು ವಿಚಾರಣೀಯವಾಗಿದೆ. ಏನೇ ಇರಲಿ; ಈ ವಿಷಯವು ಪ್ರಕೃತಕ್ಕೆ ಅಪ್ರಸ್ತುತ. ಈ ಲೇಖನದ ಮುಖ್ಯ ಉದ್ದೇಶ ತುಳು ಅಥವಾ ತುಳುವ ಎಂಬ ಶಬ್ದದ ನಿಷ್ಪತ್ತಿ ಹೇಗೆಂಬುದು. ತುಳುನಾಡಿನ ಮೇಲೆ ತೃಪ್ತಿಕರವಾದ ಸಂಶೋಧನೆ ಇಷ್ಟರ ತನಕ ನಡೆಯದುದರಿಂದ ನನ್ನ ತೀರ್ಮಾನಗಳಲ್ಲಿ ಹಲಕೆಲವರಿಗೆ ಸಂದೇಹ ಉಂಟಾಗಲೂ ಶಕ್ಯವಿದೆ.

ತುಳು— ಶಬ್ದದ ಉತ್ಪತ್ತಿ ಹೇಗೆ ಎಂಬುದರ ಪರವಾಗಿ ಕೆಲವು ವಾದಗಳಿವೆ. ಅವುಗಳನ್ನು ಒಂದೊಂದಾಗಿ ಈ ಕೆಳಗಿನಂತೆ ವಿವರಿಸಬಹುದು.

1) ತೌಳವ ಬ್ರಾಹ್ಮಣರು ಸ್ಕಾಂದಪುರಾಣಾಂತರ್ಗತ ಸಹ್ಯಾದ್ರಿ ಖಂಡವನ್ನು ಆಧಾರವಾಗಿಟ್ಟುಕೊಂಡು 'ತುಳುವ'ದ ಮೂಲವನ್ನು ಈ ರೀತಿಯಾಗಿ ವಿವರಿಸುತ್ತಾರೆ. "ರಾಮ ಭೋಜರಾಯನು ಧರ್ಮದಿಂದ ರಾಜ್ಯಪರಿಪಾಲನೆಯನ್ನು ಉದ್ಯಾವರದಲ್ಲಿ ಮಾಡಿಕೊಂಡಿರುವಾಗ ಒಂದು ದಿನ ಯಜ್ಞಗಳನ್ನು ಮಾಡಬೇಕೆಂದು ಆಲೋಚಿಸಿ ಭೂಮಿಯನ್ನು ಉಳುತ್ತಿರುವಾಗ, ಒಂದು ಸರ್ಪವು ನೇಗಿಲ ಸಾಲಿಗೆ ಸಿಕ್ಕಿ ಸತ್ತು ಹೋಯಿತು. ಇದನ್ನು ಕಂಡು ಮಹಾ ಶೋಕಯುಕ್ತನಾಗಿ ಪರಶುರಾಮ ದೇವರಿಗೆ ವಿಜ್ಞಾಪಿಸಿಕೊಂಡನು. ಪರಶುರಾಮ ದೇವರು ಕಾಣದೆ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಉಂಟೆಂದು ಹೇಳಿ ಉಡುಪಿಯಲ್ಲಿ ರಜತಪೀಠವನ್ನಿಟ್ಟು ತಾನೇ ದೀಕ್ಷಿತರಾಗಿ ಯಜ್ಞಗಳನ್ನು ಪೂರೈಸಿದರು. ಆಗ ರಾಮಭೋಜರಾಯನು ಬ್ರಾಹ್ಮಣರಿಗೆ "ತುಲಾಪುರುಷ"ದಾನಗಳನ್ನೂ, ಹಾಗೆಯೇ "ತುಲಾ ಭಾರ"ಗಳನ್ನೂ ತೂಗಿಸಿಕೊಟ್ಟನು. ಅನಂತರ ಬ್ರಾಹ್ಮಣ ಶ್ರೇಷ್ಠರು ಗ್ರಾಮ ಗ್ರಾಮಗಳಲ್ಲಿಯೂ, ದೊಡ್ಡ ದೊಡ್ಡ ಪಟ್ಟಣಗಳಲ್ಲಿಯೂ ಈ ರಾಜನಿಗೆ ತುಲಾಭಾರನೆಂದು ಕರೆದರು; ಮತ್ತು ಕೆಲವರು ತುಲಾರಾಜನೆಂತಲೂ, ಇನ್ನು ಕೆಲವರು ತುಲಾ ದೇಶಾಧಿಪತಿ ಎಂತಲೂ ಹೇಳಿದರು. ಅದಲ್ಲದೆ ಆದೇಶದಲ್ಲಿ ವಾಸಿಸುವ ಸರ್ವ ಜನರು ತೌಳವರೆಂದೆನಿಸಿಕೊಂಡರು."

ಈ ಪ್ರಕಾರದ ನಿಷ್ಪತ್ತಿಯನ್ನು ಅಂಗೀಕರಿಸುವುದಕ್ಕೆ ಕೆಲವು ಆತಂಕಗಳಿವೆ. ಮೊದಲನೆಯದಾಗಿ ಈ ಸಹ್ಯಾದ್ರಿ ಖಂಡವು ಆಧಾರ ಗ್ರಂಥಗಳಲ್ಲೊಂದಾಗದು. ಏಕೆಂಬುವನ್ನು ನನ್ನ ಮುಂದಿನ ಲೇಖಾಂಕದಲ್ಲಿ ತಿಳಿಸುತ್ತೇನೆ. ಎರಡನೆಯದಾಗಿ, "ತುಲಾ ಪುರುಷ"ದಾನಕ್ಕೆ ಸ್ಕಾಂದ ಪುರಾಣದಲ್ಲಿ ನನಗೆ ತಿಳಿದ ಮಟ್ಟಿಗೆ ಉಲ್ಲೇಖವಿಲ್ಲ. ಅದಕ್ಕೆ ಉಲ್ಲೇಖವಿರುವುದು ಮತ್ಸ್ಯ, ಭಾಗವತ ಮತ್ತು ಲಿಂಗ ಪುರಾಣಗಳಲ್ಲಿಯೂ, ಅಥರ್ವವೇದದಲ್ಲಿಯೂ, ಹರ್ಷಚರಿತದಲ್ಲಿಯೂ ಆಗಿದೆ. ಮೂರನೆಯದಾಗಿ, ಈ ಕಟ್ಟುಕತೆಯನ್ನು ಅದರಷ್ಟಕ್ಕೇ ನೀಗಿ ಬಿಡಬಹುದು. ಕಾರಣವನ್ನು ಶ್ರೀಮಾನ್ ಗೋವಿಂದ ಪೈಗಳ ಮಾತಿನಲ್ಲೇ ಕೊಡುವುದು ಉಚಿತ. "ಅಚ್ಚ ಅನಾರ್ಯ ದೇಶಗಳಾದ ಚೋಳ, ಪಾಂಡ್ಯ, ಚೇರ(ಕೇರಳ)ಗಳಿಗೆ ದ್ರಾವಿಡಭಾಷೆಗಳಿಂದ ತಾನೆ ಆಯಾಯ ಹೆಸರಾದಂತೆ, ದ್ರಾವಿಡ ಭಾಷೆಯಿಂದಲೇ ಹುಟ್ಟಿರಬೇಕಾದ ತುಳು ಎಂಬ ಹೆಸರನ್ನು ಸಂಸ್ಕೃತದಿಂದ ಹುಟ್ಟಿಸಲಿಕ್ಕೆ ಹೆಣೆದಿರುವ ಈ ಕಲ್ಪನೆಯಲ್ಲಿ ನೀರು ನಿಲ್ಲುವಂತಿಲ್ಲ" ಅರ್ಥಾತ್, 'ತುಳು'ವಿನಿಂದ 'ತೌಲವ'ವಾಯಿತೇ ಹೊರತು, 'ತೌಲವ'ದಿಂದ 'ತುಳು' ಶಬ್ದದ ಉತ್ಪತ್ತಿಯಾಗಲು ಎಂದಿಗೂ ಸಾಧ್ಯವಿಲ್ಲ. ಕಾರಣ 'ತುಳು' ಎಂಬುದು ದ್ರಾವಿಡ ಭಾಷಾ ವರ್ಗದ ಪದವಾಗಿದೆ.

2) ಸ್ಟರಕ್ ದೊರೆಗಳು ಬರೆದ ದಕ್ಷಿಣ ಕನ್ನಡದ ಮೆನ್ಯುವಲಿನಲ್ಲಿ 'ಕೇರಳೋತ್ಪತ್ತಿ' ಎಂಬ ಕೇರಳದ ಪುರಾಣ ಗ್ರಂಥದ ಉಲ್ಲೇಖವಿದೆ. ಅದರಲ್ಲಿ ಅವರು 'ತುಳುವ' ಎಂಬುದು ತುಳುಬನ್ ಪೆರುಮಾಳ ಎಂಬ ಅರಸನ ಹೆಸರಿನಿಂದ ಹುಟ್ಟಿದುದೆಂದು ಬರೆದಿರುತ್ತಾರೆ. ಕೇರಳೋತ್ಪತ್ತಿ ಪ್ರಕಾರ ತುಳುಬನ್ ಪೆರುಮಾಳನೆಂಬ ಅರಸನು, ಶೈವಮತ ಪ್ರಧಾನವಾದ ಕೋಟೇಶ್ವರದಲ್ಲಿ ತನ್ನ ರಾಜಧಾನಿಯನ್ನು ನಿರ್ಮಿಸಿ ಈ ನಾಡನ್ನಾಳುತ್ತಿದ್ದನೆಂದೂ, ಮೊದಲು ತುಳುವವು ಕೇರಳದ ಭಾಗವಾಗಿತ್ತೆಂದೂ, ಈ ಅರಸನ ಹೆಸರಿನಿಂದ ಈ ನಾಡಿಗೆ 'ತುಳುವ' ಎಂಬ ಹೆಸರು ಬಂತೆಂದೂ ತಿಳಿದು ಬರುತ್ತದೆ.

ನನಗೇನೂ ಕೇರಳೋತ್ಪತ್ತಿಯ ಮೂಲಪ್ರತಿ ದೊರೆಯಲಿಲ್ಲ. ಆದುದರಿಂದ ಅದನ್ನೋದಿ ಟೀಕೆ ಮಾಡಿದ್ದೇನೆಂದು ಹೇಳಲಾರೆ. ಆದರೆ ಕೇರಳೋತ್ಪತ್ತಿಯ ಸಾರವನ್ನು ಒಳಗೊಂಡ ಗ್ರಂಥಗಳು ಹಲವಿವೆ. ಅವುಗಳಲ್ಲೆಲ್ಲಾ ಈ ವಿಷಯವು ಕಂಡುಬರುತ್ತದೆ. ಆದರೆ ಈ ನಿಷ್ಪತ್ತಿಯೂ ತೀರಾ ಅತೃಪ್ತಿಕರವೂ, ಅಸಮಂಜಸವೂ ಎಂಬುದನ್ನು ಸಮರ್ಥಿಸಲು ಬಲುದೂರ ಹೋಗಬೇಕಾಗಿಲ್ಲ. ಯಾವ ಸಮಯದಲ್ಲಿ ನಮ್ಮ ನಾಡು ಕೇರಳದ ಭಾಗವಾಗಿತ್ತೆಂದು ನಿರ್ಧಾರವಾಗಿಲ್ಲ. ಪ್ರಾಯಶಃ ನಿರ್ಧರಿಸಲು ಸಾಧ್ಯವೂ ಇಲ್ಲ. ಕೇರಳೋತ್ಪತ್ತಿಯೂ ಸಹ್ಯಾದ್ರಿ ಖಂಡದಂತೆ ಸಂಶೋಧನೆಗೆ ಅನಧಿಕೃತ ಗ್ರಂಥ. ಮಾತ್ರವಲ್ಲದೆ, ಪೆರುಮಾಳ್ ಎಂಬುದು ಅರಸನೆಂಬ ಅರ್ಥದ ಅಚ್ಚ ತಮಿಳು ಬಿರುದು. 'ತುಳುವ' ಎಂಬುದರದೇ ತಮಿಳು ರೂಪಾಂತರವು 'ತುಳುಂಬು (ತುಳುಬನ್) ಎಂಬುದು ಪ್ರತ್ಯಕ್ಷವಿರುವುದು. ಆದುದರಿಂದ ಶ್ರೀ ಗೋವಿಂದ ಪೈಗಳನ್ನವಂತೆ, ಆತನ ಅಂಕಿತನಾಮವೇ ತುಳುಂಬ (ತುಳುವ) ಎಂದಿರದೆ ತುಳುವರ ಅಥವಾ ತುಳುದೇಶದ ಅರಸನಾಗಿದ್ದುದರಿಂದಲೇ ಆತನು ತುಳುಂಬ ಪೆರುಮಾಳನೆಂದು ತಮಿಳು ದೇಶದಲ್ಲಿ ಕರೆಯಲ್ಪಟ್ಟಿರಬೇಕು. ಹಾಗಾದರೆ ಅತನಿಂದ ಈ ನಾಡಿಗೆ ಹೆಸರು ಬರುವುದು ಅಸಂಭವೇ ಸರಿ. ಅಷ್ಟಲ್ಲದೆ ಚಾರಿತ್ರಿಕ ಹಿನ್ನೆಲೆಯಲ್ಲಿ ವಿಮರ್ಶಿಸಿದರೆ ಈ ಹೆಸರಿನ ಅರಸನು ನಮ್ಮಲ್ಲಿ ಆಳಿದುದು ಕಂಡುಬರುವುದಿಲ್ಲ. ಹೆಚ್ಚಾಗಿ ಜನಗಳಿಂದ ನಾಡಿಗೆ ಹೆಸರು ಬರುವುದೇ ಹೊರತು, ಅರಸನೋರ್ವನಿಂದ ಬರುವುದು ಸಾಮಾನ್ಯವಾಗಿಲ್ಲ. ಕೇರಳೋತ್ಪತ್ತಿಯೂ, ಗ್ರಾಮಪದ್ಧತಿಯೂ ಸಂಶೋಧನೆಗೆ ಒಪ್ಪುವ ಗ್ರಂಥಗಳಲ್ಲವಾದರೂ, 'ತುಳು' ಶಬ್ದದ ಉತ್ಪತ್ತಿಯ ಕುರಿತಾಗಿ ಪರಸ್ಪರ ವಿರೋಧವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವುದು ಗಣನೀಯ ವಿಷಯವಾಗಿದೆ.

3) ಕೆಲವರ ಅಭಿಪ್ರಾಯದಂತೆ 'ತುಳು' ಎಂಬ ಪದವು ಸಾಧು, ಕೋಮಲ, ನಮ್ರ, ವಿನಯ ಎಂಬ ಅರ್ಥವುಳ್ಳ ಶಬ್ದಗಳನ್ನು ಪ್ರತಿನಿಧೀಕರಿಸುತ್ತದೆಂದೂ, ಈ ಶೀಲ

ಗಳುಳ್ಳ ಜನರು ನಮ್ಮ ನಾಡಿನವರೆಂದೂ, ಅವರೇ ತುಳುವರೆಂದೂ ಊಹಿಸಬಹುದಾಗಿದೆ. ಆದರೆ 'ತುಳು' ಪದವು ಈ ಅರ್ಥಗಳಲ್ಲಿ ವ್ಯವಹಾರದಲ್ಲಿ ಉಪಯೋಗಿಸುವುದು ನಮ್ಮ ನಾಡಿನಲ್ಲಿ ಎಲ್ಲಿಯೂ ಕಂಡು ಬರುವುದಿಲ್ಲ. ಅದನ್ನು ಒಂದು ತರದ ಹಲಸಿನ ಮತ್ತು ಮಾವಿನ ಹಣ್ಣು ಎಂಬರ್ಥದಲ್ಲಿ ಉಪಯೋಗಿಸುವ ವಾಡಿಕೆ ಇದೆ (ತುಳುವೆ ಪೆಲಕ್ಕಾಯಿ—ಕುಜ್ಜೆ; ತುಳುವೆ ಕುಕ್ಕು) ಆದರೆ ಸಾಧು, ಕೋಮಲ ಎಂಬ ಅರ್ಥದಲ್ಲಿ ಎಂದೆಂದೂ ಅಲ್ಲ. ಆದುದರಿಂದ ಈ ಅಭಿಪ್ರಾಯ ಸಿಂಧುವಾಗಲಾರದು.

ಇನ್ನು, ತುಳುವೆ ಹಲಸಿನ ಹಣ್ಣಿನಿಂದ, 'ತುಳು' ಎಂಬ ಪದವು ಹೊರಟಿತು ಎಂಬುದೂ ಹುರುಳಿಲ್ಲದ ಮಾತು. ಕಾರಣ, ಎಲ್ಲ ಕಡೆಯೂ ತುಳುವೆ ಎಂಬುದಾಗಿ ಉಚ್ಚರಿಸುವುದಿಲ್ಲ, ಕೆಲವೆಡೆ, ಕೆಲವೊಮ್ಮೆ 'ತುರುವೆ' ಎನ್ನುತ್ತಾರೆ. ಇದರಲ್ಲಿ ಅವ್ಯವಸ್ಥೇ ತುಂಬಾ ಇದೆ. ಒಂದುತರದ ವೃಕ್ಷದಿಂದ ಸ್ಥಳೀಕವಾಗಿ ಚಿಕ್ಕದೊಂದು ಕ್ಷೇತ್ರಕ್ಕೆ ಹೆಸರು ಬರುವುದಿದೆ. (ಉದಾ: ತಾಳೀಪಾಡಿ, ಸಂಪಿಗೆ, ಕಿನ್ನಿಗೋಳಿ, ನೆಲ್ಲಿಕಾರು, ಪೆಲತ್ತೂರು ಇತ್ಯಾದಿ)ಆದರೆ ಇಡೀ ನಾಡಿಗೆ ಹೆಸರುಬರುವುದು ಅಸಂಭವ.ಆದುದರಿಂದ 'ತುಳುವೆ' ವೃಕ್ಷವಿದ್ದ ಊರು, ತುಳುನಾಡು ಎಂದು ವಾದಿಸಿದಲ್ಲಿ ಅದೊಂದು ಗೌರವಾನ್ವಿತವಾದ ವಾದವೆನಿಸದು. 'ತುಳುವೆ' ಇಂದು'ತುಳುವ' ಜನ್ಯವಾದರೆ, 'ತುರುವೆ' (ಎತ್ತರವಾಗಿ ಬೆಳೆಯುವ ಒಂದು ತರದ ಗಿಡ)ಯಿಂದ 'ತುಳುವ' ಜನ್ಯವಾಗಬಾರದೇಕೆ?

ನಮ್ಮ ನಾಡಿನ ಜನರು ಬಹಳ ಮೃದುಸ್ವಭಾವದ ಜನರು ಎಂಬುದೂ ಅಷ್ಟೊಂದು ಒಪ್ಪುವ ಮಾತಲ್ಲ. ತುಳುನಾಡಿನ ವೀರಪುರುಷರ ಚರಿತ್ರೆಯನ್ನೋದಿದರೆ, ಇದರ ಅಸಮಂಜಸತೆ ವಿದಿತವಾಗುವುದು (ಭೂತಾಳಪಾಂಡ್ಯ, ಅಗೋಳಿಮಂಜಣ್ಣ, ಕೋಟಿಚನ್ನಯ, ಚೆನ್ನಮ್ಮಾಜಿ, ಅಬ್ಬಕ್ಕಾದೇವಿ ಇತ್ಯಾದಿ) ಅಷ್ಟೇಕೆ? ನಮ್ಮ ಸಮಾಜದ ಪ್ರಧಾನವಾದ ಪದರೊಂದು 'ಬಂಟ'ರದಲ್ಲವೆ? ಬಂಟವೆಂಬ ಶಬ್ದವೇ ವೀರತೆಯ ಪ್ರತೀಕವಲ್ಲವೇ? ಆಯಾಯ ಜನರ ಗುಣಾವಗುಣಗಳಿಂದ ಆಯಾಯ ನಾಡುಗಳಿಗೆ ಹೆಸರಾದಂತೆ ತೋರುವುದಿಲ್ಲ.

4) ಡಾ| ಆನಂದ ಸಲತೋರರು ತುಳುವಿನ ಮೂಲವನ್ನು 'ತೊಳು' ಎಂಬ ಹಳೆಗನ್ನಡ ಪದದಲ್ಲಿ ಕಂಡಂತೆ ಭಾಸವಾಗುತ್ತದೆ. (Ancient Karnataka History of Tuluwa) ದಲ್ಲಿ' ತೊಳು' ಎಂಬಶಬ್ದಕ್ಕೆ ಹಳೆಗನ್ನಡದಲ್ಲಿ' ಹೊಡೆದಾಡುವುದು' ಎಂಬ ಅರ್ಥವಿದೆ. (ತೊಳಿದನು ಕಲಿಪಾರ್ಥನು ಈತನ ಮೇಲೆ) ಇದನ್ನಾಧರಿಸಿಕೊಂಡು ಆವರು ತುಳುವರು ಮಹಾ ಯೋಧರಾಗಿದ್ದು ಘಟ್ಟದ ಮೇಲಿನ

ವರ ಮೇಲೆ ಆಗಾಗ ಧಾಳಿ ಮಾಡುತ್ತಿದ್ದುದರಿಂದ ಅವರನ್ನು ತುಳುವರೆಂದು ಘಟ್ಟದ ಮೇಲಿನವರು ಕರೆಯುತ್ತಿದ್ದಿರಬಹುದೆಂದು ಅಭಿಪ್ರಾಯವಿತ್ತಿದ್ದಾರೆ. ಇದನ್ನು ಪುಷ್ಟೀಕರಿಸಿ ತುಳು ಪಾಡ್ದನಗಳಲ್ಲಿಯ ತುಳುವರ ವೀರತ್ವವನ್ನೂ, ತುಳು ಸಂಪ್ರದಾಯ, ನಂಬಿಕೆಗಳು, ಆಟಗಳು ಮತ್ತು ರಾಜಕೀಯ ಇವನ್ನೆತ್ತಿ ಉದಾಹರಿಸುತ್ತಾರೆ. ಹೊಲೆಯರು ಮತ್ತು ಮೊಗೇರರು ಇನ್ನಿತರ ಪ್ರಾಚೀನ ನಿವಾಸಿಗಳನ್ನು ಉದಾಹರಿಸಿ ತುಳುವರಲ್ಲಿ ಕಂಡು ಬರುವ ಶಕ್ತಿಯನ್ನು ಬಯಲಿಗೆ ತಂದಿದ್ದಾರೆ. ಕೆಡವಿಬಿದ್ದ ಕೋಟೆಗಳಿಗೆ ಕೈ ತೋರಿಸಿದ್ದಾರೆ. ಅಜಕಾಯಿದರ್ಪುನಿ (To break coconuts is a kind of play) ತಪ್ಪಂಗಾಯಿ (A kind of play with coconuts,) ಅಂಬೋಡಿ ಜಾತ್ರೆ (A kind of dance or mock-fight among the Pariahs), ಕೋರಿದ ಜೂಜು, (Cock-fight) ತೂಟೆದಾರ (A festival of lit torches made out of coconut leaves) ಕೆಡ್ಡಸ(A kind of three days festivala mong the Tulu people about February or March when they go on hunting excursions and eat fried grains) ಚೆಂಡು (Festival of Ball Play) ಮತ್ತು ಬೋಂಟೆ (Hunting) ಇತ್ಯಾದಿಗಳು ತುಳುವರ ಧೈರ್ಯ, ಸ್ಥೈರ್ಯ, ವೀರತ್ವದ ಕುರುಹುಗಳೆಂಬುದಾಗಿ ಸೂಚಿಸಿದ್ದಾರೆ. ಸಮರ್ಥನೆಯ ಅಂತ್ಯದಲ್ಲಿ ತುಳುವ ಸೈನ್ಯವನ್ನು ಕುರಿತಾಗಿ ಶಾಸನವನ್ನು ತೋರಿಸಿಕೊಟ್ಟು "ತುಳುವ ಬಲ ಜಲಧಿಬಡವಾನಲಂ" ಎಂಬುದನ್ನು ಎತ್ತಿ ಹೇಳಿದ್ದಾರೆ.

ಡಾ। ಸಲೆತೋರರ ಸಮರ್ಥನೆಯು ವಿಚಾರಣೀಯವೂ, ವಿದ್ವತ್ಪೂರ್ಣವೂ ಆಗಿದೆ. ಆದರೆ ಅದನ್ನು ವಿಮರ್ಶಿಸುವಾಗ ಸಂದೇಹಾಸ್ಪದವಾದ ವಿಷಯಗಳು ಮೂಡುತ್ತವೆ. ಮೊದಲನೆಯದಾಗಿ, ತುಳುವರು ರಾಜಕೀಯದಲ್ಲಿ ಘಟ್ಟದ ಮೇಲೆ ಅಧಿಪತ್ಯವನ್ನು ಸ್ಥಾಪಿಸುವದಕ್ಕೋಸ್ಕರ ಹೊಡೆದಾಡಿದ ಉದಾಹರಣೆಗಳು ಅತಿ ವಿರಳ. ಭೂತಾಳಪಾಂಡ್ಯ ರಾಯನಿಗೆ ತುಳು, ಮಲೆಯಾಳ, ಹೈಗ, ಕರ್ನಾಟಕ ಚತುರ್ದೇಶಾಧೀಶ್ವರ, ಎಂಬ ಬಿರುದು ಇತ್ತಂತೆ. ಇಲ್ಲಿ ಕರ್ನಾಟಕ ದೇಶವೆಂದರೆ ಹೊನ್ನೆಯ ಕಂಬಳಿ ಎಂಬ ಜೈನ ರಾಜನು ಆಳುತ್ತಿದ್ದ ಕುಂದಾಪುರ ತಾಲೂಕಿನ ಕೊಲ್ಲೂರು, ಹೊಸಂಗಡಿ, ಬಗ್ಗವಾಡಿ, ಮುಗಿನಾಡು, ಆರುನಾಡು (ಹಾರ್ನಾಡು) ಕಡರಿ, ಕಬ್ಬಿನಾಡು ಎಂಬ ಮಾಗಣೆಗಳೂ, ಗಟ್ಟದ ಮೇಲಿನ ಕುಂದಾಪುರ ತಾಲೂಕಿಗೆ ತಾಗಿಕೊಂಡಿರುವ ಎಡವೂರು,ಪಟ್ಟಗುಪ್ಪೆ, ಚಿನ್ನಬದರೂರು ಎಂಬ ಮಾಗಣೆ

ಗಳೂ ಒಳಗೊಂಡಿರುವ ಪ್ರದೇಶವಷ್ಟೆ. ಎರಡನೆಯದಾಗಿ, ಸಲೆತೋರರು ಉದಾಹರಿಸಿದ ಸಂಗತಿಗಳು ಪ್ರಾಚೀನತೆಯ ವೈಶಿಷ್ಟ್ಯವನ್ನಾಗಲೀ,ಹಳೆ ಪದ್ಧತಿಯನ್ನಾಗಲೀ (Primitive customs and manners) ಪ್ರಧಾನವಾಗಿ ಸೂಚಿಸುತ್ತವಲ್ಲದೆ ಎದ್ದು ತೋರುವಂತಹ ವೀರತ್ವದ ಕುರುಹುಗಳನ್ನಲ್ಲ. ಇಂತಹ ನಂಬಿಕೆಗಳಾಗಲೀ, ಪದ್ಧತಿಗಳಾಗಲೀ, ಪ್ರಾಚೀನ ಜನಾಂಗಳಲ್ಲೆಲ್ಲಾ ಕಂಡು ಬರುವುದು. ನಮ್ಮಲ್ಲಿ ಈ ಪದ್ಧತಿಗಳು ಈಗಲೂ ಜೀವಂತವಾಗಿ ಉಳಿದಿವೆ ಎಂದಿಷ್ಟೇ ಹೇಳಬಹುದು. ಮೂರನೆಯದಾಗಿ, ಹೊಡೆದಾಡಿ ಕೊಳ್ಳುವವರು ಎಲ್ಲಾ ಸಂಗಡಗಳಲ್ಲೂ ಜನಾಂಗಗಳಲ್ಲೂ ಇದ್ದುದರಿಂದ ತುಳುವರು ಯಾರು ಎಂಬ ಸಂದೇಹವನ್ನು ಅವರು ಪರಿಹರಿಸಿದಂತಾಗಲಿಲ್ಲ. ಮಾತ್ರವಲ್ಲದೆ 'ತೂಳು' ಎಂಬುವಕ್ಕೆ "To go off, to go away or backward; to recoil" ಎಂಬ ಅರ್ಥವೂ ಇದೆ. ತುಳುವರು ಹೇಡಿಗಳಲ್ಲದಿದ್ದರೂ ತುಳುವೇತರರಿಂದ ತಾವು ಮಹಾ ಪ್ರತಾಪಿಗಳೆಂದೆನಿಸಿಕೊಳ್ಳುವ ಮಹತ್ಕಾರ್ಯಗಳನ್ನು ಚಾರಿತ್ರಿಕ ಕಾಲದಲ್ಲಿ ನಡೆಸಿದುದು ಕಂಡು ಬರುವುದಿಲ್ಲ. ಹಾಗಾದರೆ ಡಾ| ಸಲತೋರರ ಅಭಿಪ್ರಾಯವಾದರೂ ಸ್ವೀಕೃತವಾಗುವುದು ಹೇಗೆ?

5) ಶ್ರೀಮಾನ್ ಗೋವಿಂದ ಪೈಗಳ ಅಭಿಪ್ರಾಯವನ್ನು ಅವರ ಮಾತಿನಲ್ಲೇ ಹೇಳುವುದು ಯುಕ್ತವಾಗಿದೆ.

"ತಮಿಳನ್ನು ಆಶ್ರಯಿಸಿ ತುಳುವಿನ ನಿಷ್ಪತ್ತಿಯನ್ನು ಕಂಡು ಹಿಡಿಯುವುದಾದರೆ ನನಗೆ ಹೀಗೆನಿಸುತ್ತದೆ. ತಮಿಳಿನಲ್ಲಿ ತುವೈ ಎಂದರೆ, ನೀರಿನಲ್ಲಿ ಹುಟ್ಟುಹಾಕು ಎಂದೂ, ತುಳೈ ಎಂದರೆ ಮುಳುಗು, ನೀರಿನಲ್ಲಿ ಆಡು ಎಂದೂ, ತುಳೈಯುಮ್ ಎಂದರೆ ನೀರಿನಲ್ಲಿ ಆಡುವಿಕೆ ಎಂದೂ ಅರ್ಥ. ಹರಿವಂಶದಿಂದ ತುಳುನಾಡಿನ ಜನರನ್ನು ಕುರಿತು" ತಸ್ಯದಾಶಾಜಲೇಮಗ್ನಾಃ........ಸಮುದ್ರೋದರಚಾರಿಣಃ" ಎಂದು ಮೇಲೆ ಕಂಡಿರುವಂತೆ, ಕಡಲಕರೆಯ ಪ್ರದೇಶವಾಗಿದ್ದ ಈ ನಾಡಿನಲ್ಲಿ ಆ ಹಳೆಗಾಲದಲ್ಲಿ ಬೆಸ್ತರೂ, ಅಂಬಿಗರೂ ಸಹಜವಾಗಿ ಹೇರಳವಾಗಿದ್ದು ದಾರಾಭೂಯಿಷ್ಟವಾಗಿರಬೇಕಾದ ಈ ದೇಶವು, ಅದೇಕಾರಣ, ತುಳು-ತುಲು ಎಂದು ಕರೆಯಲ್ಪಟ್ಟಿರಬೇಕು. ಈ ಬಗ್ಗೆ ಅಂಬಷ್ಟರೆಂಬ ಜನರಿದ್ದ ದೇಶಕ್ಕೆ ಅಂಬಷ್ಟ ಎಂದು ಹೆಸರಾದ ಉದಾಹರಣೆ ಮಹಾಭಾರತದಲ್ಲಿದೆ. (ಸಭಾಪರ್ವ, ಅಧ್ಯಾಯ ೩೨) ಈಗ ತುಳುವಿನಲ್ಲಿ 'ತುಳಾಪಿನಿ' ಎಂದರೆ ನೀರಿನಲ್ಲಿ ಹುಟ್ಟುಹಾಕು ಎಂದು ಹೇಗೆ ಅರ್ಥವಿದೆಯೋ, ಹಾಗೆಯೇ ತಮಿಳಿನಲ್ಲಿ..............ತುಳೈಯುಮ್ ಎಂದರೆ, ನೀರಿನಲ್ಲಿ ಆಡುವಿಕೆ ಎಂದು ಅರ್ಥವಿದೆ. ಆಕಾರಣವೇ ದಕ್ಷಿಣ ಕನ್ನಡವು ಸ್ವಾಭಾವಿಕವಾಗಿ 'ತುಳು' ಎಂದು ಕರೆಯಲ್ಪಟ್ಟಿರ ಬೇಕು ಎಂದು ನಿಶ್ಚಯಿಸ ಬಹುದು"

ಶ್ರೀಮಾನ್ ಗೋವಿಂದ ಪೈಗಳ ಈ ಅನುಮಾನ ಸತ್ಯದಲ್ಲಿ ತುಂಬಾ ಅರ್ಥವಿದೆ. ಆಳವಾದ ಅಭ್ಯಾಸದ ಫಲದಿಂದ ಪಡೆದ ತೀರ್ಮಾನವಿದು. ಆದರೆ, ಈ ರೀತಿಯಶಬ್ದ ಉತ್ಪತ್ತಿ ಕ್ರಮವೂ ಅಷ್ಟೊಂದು ಒಪ್ಪುವಂತಹುದಲ್ಲವೆಂದು ನನಗೆ ಕಾಣುತ್ತದೆ. ಇಲ್ಲಿ ಹೆಚ್ಚಿನ ವಿಚಾರ ಮಾಡುವುದವಶ್ಯವಿದೆ. ಕಾರಣ, ಪೈಗಳ ಮಾತನ್ನು ಅಷ್ಟೊಂದು ಸುಲಭದಲ್ಲಿ ತೆಗೆದು ಹಾಕುವಂತಿಲ್ಲ. ತುಳುವಿಗೂ, ತಮಿಳಿಗೂ ಸಗೋತ್ರವೆಂದು ಅವರು ಹೇಳುತ್ತಾರೆ. ಆದರೆ, ದಕ್ಷಿಣ ಭಾರತದ ನುಡಿಗಳಲ್ಲಿ ತುಳುವು ತೀರಾ ಭಿನ್ನತೆಯನ್ನು ಹೊಂದಿರುವುದು ತಮಿಳಿನಿಂದ ಎಂದು ಬಲ್ಲವರ ಮತ. [It has always been declared that the dialect from which Tulu-differs most is Tamil-'Tulu language-A Historical Survey' by Sri H. V. Ramesh B. A. (Hons.)] ಎಷ್ಟೋ ತಮಿಳು ಶಬ್ದಗಳು ತುಳುವಿನಲ್ಲಿವೆ ಎಂಬುದು ಸಹಜ. ಪಾಂಡ್ಯ ದೇಶಕ್ಕೂ ತುಳುನಾಡಿಗೂ ಸಂಬಂಧವಿದ್ದುದೂ ಕಂಡುಬರುತ್ತದೆ. ಆದರೂ, ಶ್ರೀ ಪೈಗಳ ಅನುಮಾನವು ಕಂಠೋಕ್ತವಾಗಿ ನಿರ್ಧರಿಸುವಷ್ಟು ಒಪ್ಪಿಗೆಯಾಗದು. ಕಾರಣಗಳನ್ನು ಈ ಕೆಳಗಿನಂತೆ ಕೊಡಬಹುದು.

1) ತಮಿಳು ಶಾಸನಗಳಲ್ಲಾಗಲೀ, ಸಾಹಿತ್ಯದಲ್ಲಾಗಲೀ, ತುಳು ಯಾ ತುಳುವಕ್ಕೆ ಉಲ್ಲೇಖ ಕಂಡು ಬರುವುದಿಲ್ಲ.

2) ಕೊರಮಂಡಲ ಮತ್ತು ಮಲಬಾರ್ ಕರಾವಳಿಗಳಲ್ಲಿ ಈ ನಾವಿಕರ ವೃತ್ತಿ ಸಾರ್ವತ್ರಿಕವಾಗಿಯೂ, ಗಣನೀಯವಾಗಿಯೂ ಕಂಡು ಬಂದರೂ ನಮ್ಮ ನಾಡಿಗೆ ಮಾತ್ರ ತುಳು ಎಂಬ ಹೆಸರನ್ನೇಕೆ ತಮಿಳರು ಕೊಡಬೇಕೆಂದೇ ಅರ್ಥವಾಗುವುದಿಲ್ಲ.

3) ಅಂಬಷ್ಠರಿರುವ ದೇಶಕ್ಕೆ ಅಂಬಷ್ಟವೆಂದಿರುವುದು ನ್ಯಾಯವೇಸರಿ. ಪಂಗಡದಿಂದ ದೇಶಕ್ಕೆ ಹೆಸರಾಯಿತು. ಆದರೆ, 'ತುಳಾಪಿನಿ' ಎಂಬ ಕ್ರಿಯಾಪದದಿಂದ 'ತುಳು' ಎಂದು ಹೇಗೆ ಜನ್ಯವಾಗುತ್ತದೆಂದು ಅರ್ಥವಾಗುವುದಿಲ್ಲ. ಇನ್ನು 'ತುಳಾಪಿನಾಯೆ' 'ತುಳುವೆ' ಎನ್ನೋಣವೇ, ಅದೂ ಸಮಂಜಸವಾಗಲಾರದು. ಏಕೆಂದರೆ, ಈ ಹುಟ್ಟು ಹಾಕಿ ದೋಣಿ ನಡಿಸುವುದನ್ನು 'ತುಲಾವುನಿ' ಎಂದೂ ಹೇಳುವುದುಂಟು. ಆದರೆ ತುಳುನಾಡಿಗೆ 'ಸುಲುವೆ' ಎಂದೂ ಎಲ್ಲಿಯೂ ಕರೆಯಲಾರರು, ಅರ್ಥಾತ್ 'ತುಳು' ಶಬ್ದೋತ್ಪತ್ತಿಗೆ 'ತುಳಾಪಿನಿ' ಎಂಬ ಪದದ ಅನೌಚಿತ್ಯವನ್ನು ಬೇರೆ ಹೇಳಬೇಕಾಗಿಲ್ಲ.

4) ನಮ್ಮೂರ ಬೆಸ್ತರಿಗೆ ಬಹಳ ಪುರಾತನವಾದ 'ಮೊಗೇರ' ಎಂಬ ಹೆಸರಿರುವುದು ಎಲ್ಲರಿಗೂ ತಿಳಿದಿದೆ. ಇದರ ಸಂಸ್ಕೃತೀಕರಿಸಲ್ಪಟ್ಟ ಪದವೇ 'ಮುದ್ಗರ' ಇದರ

ಉಲ್ಲೇಖವು ಹರಿವಂಶದ ವಿಷ್ಣುಪರ್ವದಲ್ಲಿದೆ. ಈ ಮುದ್ಗರರು ಮೊಗೇರರೆಂದು ಶ್ರೀ ಪೈಗಳೇ ವಿಶದೀಕರಿಸಿದ್ದಾರೆ. ಹಾಗಾದರೆ 'ತುಳುವರು' ಮತ್ತು 'ಮೊಗೇರರು' ಎಂಬೀ ಪದಗಳು ಪರ್ಯಾಯ ಪದಗಳೇ?

5) ನಮ್ಮ ನಾಡು ಪರಶುರಾಮ ಸೃಷ್ಟಿಗೆ ಸೇರಿದುದೆಂದು ಐತಿಹ್ಯ. ಹೊಸತಾಗಿ ನಿರ್ಮಿಸಲ್ಪಟ್ಟ ಪ್ರದೇಶದಲ್ಲಿ ಮೊದಲು ವಲಸೆಗಾರರು (Nomads) ನಂತರದಲ್ಲಿ ದನಗಾರರು (Herdsmen) ಮುಂದಕ್ಕೆ ಬರುವುದು ಸಹಜವು. ನಂತರದಲ್ಲಿ ಇತರ ಕಸಬುಗಾರರು, ಇದು ಸಮಾಜಬೆಳವಣಿಗೆಯ ಸಾಮಾನ್ಯ ತತ್ವ. ಇಂತಿರುವಲ್ಲಿ ಈ ಮೊದಲ ಎರಡು ಪಂಗಡಗಳು ಗಣನೀಯವಾಗದೆ ಬೆಸ್ತರೂ, ಅಂಬಿಗರೂ ಅಂದಿನ ಹಳೆಗಾಲದಲ್ಲಿ ಪ್ರಾಮುಖ್ಯತೆಗೆ ಬರಲು ಸರಿಯಾದ ಕಾರಣ ಕಂಡುಬರುವುದಿಲ್ಲ. ಈ ಕಾರಣಗಳಿಂದ ಶ್ರೀ ಪೈಗಳ ಅನುಮಾನ- ಸತ್ಯವು ಅಷ್ಟೊಂದು ಹಿತವಾದುದೆಂದು ನನಗೆನಿಸುವುದಿಲ್ಲ.

6) ಚುಟು-ತುಳುವಾದ ವಿಚಾರ. ಶ್ರೀ ಗೋವಿಂದ ಪೈಗಳು ಇನ್ನೊಂದು ಅನುಮಾನವನ್ನು ನಮ್ಮ ಮುಂದಿಡುತ್ತಾರೆ. 'ಚುಟು' ವಿನಿಂದ ತುಳುವೋ, ತುಳುವಿನಿಂದ 'ಚುಟುವೋ' ಎಂದು ಮಾರ್ಪಟ್ಟಿರಬೇಕು ಎಂಬ ಅನುಮಾನ. ಶಿವಮೊಗ್ಗೆ ಜಿಲ್ಲೆಯ ಮಳವಳ್ಳಿಯ ಶಿಲಾಸ್ತಂಭದಲ್ಲಿ ವರ್ಣಿತನಾದ 'ಹರಿತೀ ಪುತ್ರ ವಿಷ್ಣುಸ್ಕಂದ ಚುಟುಕುಲಾನಂದ ಶಾತಕರ್ಣಿ' ಎಂಬ ಅರಸನು ವೈಜಯಂತಿ (ಬನವಾಸಿ) ಯ ಅರಸನಾಗಿದ್ದು (ಕ್ರಿ.ಶ. ೩ನೇ ಶತಮಾನ) ಆತನ ವಂಶದ ಹೆಸರಾದ 'ಚುಟು'ವಿಗೂ ತುಳುನಾಡಿನ ತುಳುವಿಗೂ, ನಿಕಟ ರೂಪ ಸಂಬಂಧವಿರುವುದಾಗಿ ಅವರ ಅಭಿಮತ. ಅಂದರೆ, ತುಳುನಾಡಿಗೆ ಆತನ ಕಾಲಕ್ಕೂ ಹಿಂದೆ ಎಂದಾದರೂ ಚುಟು ದೇಶವೆಂದ ಹೆಸರಿದ್ದುದಾಗಿರಬೇಕು. ಆ ಮೇಲೆ ಕ್ರಮೇಣ ಅದು 'ತುಳು' ಎಂದಾಯಿತೇನೊ (ಚಕಾರಕ್ಕೆ ತಕಾರವೂ, ಟಕಾರಕ್ಕೆ ಳಕಾರವೂ ಆದೇಶವಾಗಿ) ಅಥವಾ ತುಳು ಎಂದಿದ್ದ ಹೆಸರೇ ಪ್ರಾಕೃತದಲ್ಲಿ ಚುಟು ಎಂದಾಯಿತೇನೋ? ಮಾತ್ರವಲ್ಲದೆ, ಬ್ರಾಹ್ಮಣೇತರರಲ್ಲಿ ಈಗಲೂ ಬಳಕೆಯಲ್ಲಿರುವ 'ಚೌಟ' ಎಂಬ ಕುಲನಾಮವು ಪ್ರಾಯಶಃ ಇದೇ ಚುಟುವಿನಿಂದ ಹುಟ್ಟಿರಬೇಕು-ಇತ್ಯಾದಿ ಅವರ ಸಂದೇಹವನ್ನು ತೋರಿಸಿದ್ದಾರೆ.

ಈ ಅನುಮಾನದಲ್ಲಿಯೂ ಅಷ್ಟೊಂದು ಇಂಬು ಉಂಟೆಂದು ನನಗನಿಸುವುದಿಲ್ಲ. ತುಳು ಇದ್ದುದು ಚುಟುವಾಗಲು ಪ್ರಾಕೃತ ಭಾಷೆಯ ಪ್ರಭಾವವು ನಮ್ಮ ನಾಡಿನ ಮೇಲೆ ಅಷ್ಟೊಂದು ಅಧಿಕವಾಗಿರಲಿಲ್ಲ. ವರ್ಣಸಿಯಮವನ್ನಾಧರಿಸಿ 'ಚುಟು' 'ತುಳು' ವಾಗುವುದು ಸ್ವಲ್ಪ ಅಸ್ವಾಭಾವಿಕತೆಯನ್ನು ತೋರಿಸುತ್ತದೆ. 'ತಮಿಳು'

ಕಾಲಾನುಗತಿಕದಿಂದ 'ದ್ರಾವಿಡ'ವಾಗಿ ಮಾರ್ಪಾಡು ಹೊಂದಿದೆ. ಆದರೂ ತಮಿಳು ಎಂಬ ಮೂಲ ರೂಪ ಅಚ್ಚಳಿಯದೆ ಉಳಿದಿದೆ. ಪಾಂಡಿಯವು ಪ್ರಾಕೃತದಲ್ಲಿ ಪಾಡಿಯವಾಗಿದೆ. ಆದರೆ ಪ್ರಾಕೃತ ರೂಪದ 'ಪಾಡಿಯ'ವು 'ಪಾಂಡಿಯ'ವನ್ನು ಸ್ಮೃತಿಯಿಂದ ಮರೆಯಿಸಲಿಲ್ಲ. 'ಚುಟು' ಮೂಲದಿಂದ 'ತುಳು' ಹೊರಟದ್ದಾದರೆ ಈ ಮೂಲ ಪದವು ಸಂಪೂರ್ಣವಾಗಿ ಮರೆತು ಹೋಗಲು ಕಾರಣವೇನು?

ಇನ್ನು ಚೌಟರ ವಿಷಯ ಒಂದೆರಡು ಮಾತು, ಶ್ರೀ ಪೈಗಳು ಚೌಟ ಪದಕೂ ಚುಟು ಶಬ್ದಕ್ಕೂ ಸಂಬಂಧವನ್ನು ಕಲ್ಪಿಸುವಾಗ ಸಂದೇಹವನ್ನೇ ವ್ಯಕ್ತಪಡಿಸಿದ್ದಾರೆ. ಆದರೂ ಒಂದು ರೀತಿಯ ಸಿದ್ಧಾಂತವನ್ನು ಮುಂದಿರಿಸಿದ್ದಾರೆ. ಅವರ ಬರಹದಲ್ಲೇ ಈ ಸಿದ್ಧಾಂತ ಹೀಗಿದೆ "ಉಳ್ಳಾಳ, ಮೂಡಬಿದ್ರೆಗಳಲ್ಲಿ ಕ್ರಿ.ಶ. 12ನೇ ಶತಕದಿಂದ ಆಳಿದ ಚೌಟರು ಎಂಬವರ ಹೆಸರು ಪ್ರತ್ಯಕ್ಷಃ 'ಚುಟು' ಎಂಬುದರಿಂದಲೇ ಬಂದಿರಬೇಕು. ಈ ಚೌಟರಿಗೂ, ಚುಟುಕುಲದ ಶಾತವಾಹನರಿಗೂ ಏನೂ ಸಂಬಂಧವಿದ್ದಂತೆ ತೋರುವುದಿಲ್ಲ. ಆದ್ದರಿಂದ ಚೌಟವೆಂಬ ಹೆಸರು ಚುಟುಕುಲದಿಂದ ಬಂದಿರಬಹುದೆಂದು ಊಹಿಸಲಾದರೂ ಕಾರಣವಿಲ್ಲ. ಹೀಗಾಗಿ ಚುಟುಕುಲದವರಿಗೂ, ಚೌಟರಿಗೂ ಸಾಮಾನ್ಯವಾಗಿರುವ ಈ ಚುಟು ಎಂಬುದು ಇತ್ತಂಡದವರಿಗೂ ಅವರು ಆಳಿದ ಚುಟುವೆಂಬ ಹೆಸರಿನ ದೇಶದಿಂದಲೇ ಬಂದುದಾಗಿರಬೇಕು. ಹೀಗಾದರೆ ಈ ದೇಶಕ್ಕೆ ಚುಟುದೇಶವೆಂದು ಹೆಸರಿದ್ದು, ಅದರಿಂದಲೇ ಅಂದಿನಿಂದ ಈಗಲೂ ಈ ದೇಶದ ಹೆಸರಾಗಿರುವ 'ತುಳು' ದೇಶವೆಂಬ ಹೆಸರು ಇದಕ್ಕೆ ಬಂದಿರಬೇಕು." ಇದಕ್ಕುತ್ತರವಾಗಿ 1931ರಲ್ಲಿ ಸ್ವದೇಶಾಭಿಮಾನಿಯಲ್ಲಿ ಪ್ರಕಟವಾದ 'ಸ್ಥಳನಾಮ' ಎಂಬ ಲೇಖನದಲ್ಲಿಯ ಒಂದು ಪಾರವನ್ನು ಇದ್ದಕ್ಕಿದ್ದಂತೆ ಮುಂದಿಡಲು ಅಪೇಕ್ಷಿಸುತ್ತೇನೆ. "ಚವುಟು, ಬಂಗ್ರು ಎಂಬೀ ಪ್ರಸಿದ್ಧವಾದ ಹೆಸರುಗಳು....ಅವು ತುಳುನಾಡಿನಲ್ಲಿ ಹುಟ್ಟಿದುವುಗಳೂ ಅಲ್ಲ. ಇಲ್ಲಿಯ ಸ್ಥಳನಾಮಗಳನ್ನು ಕುರಿತವುಗಳೂ ಅಲ್ಲ. ಅವು ಅಧಿಕಾರ ಸೂಚಕವಾದ ಹೆಸರುಗಳು. ಅರಸನ ಕಂದಾಯದ ವಸೂಲಿಗಾಗಿ ಸೀಮೆಯಲ್ಲಿ ಚೌಧ್ರಿ ಎಂಬವನೊಬ್ಬ ಅಧಿಕಾರಿಯು ಮೊಗಲಾಯಿ ರಾಜ್ಯಕ್ಕಿಂತ ಮೊದಲೇ ಇದ್ದನೆಂದು ಗೊತ್ತಾಗಿದೆ. ಅಂಥ ಚೌಧ್ರಿ, ವಿಜಯ ನಗರದ ಕಾಲದಲ್ಲಿದ್ದನು. ಈ ಚೌಧ್ರಿ (ಚವುಧ್ರಿ) ಎಂಬುದು ತುಳುವಿನಲ್ಲಿ ಚವುಟ್ರು ಎಂದು ಮಾರ್ಪಟ್ಟು ಅದರೊಳಗೆ ಮೊದಲೇ ಇದ್ದ 'ರ'ಕಾರವು ತುಳುವಿನಲ್ಲಿ ಬಹುಮಾನಾರ್ಥ ಸೂಚಕವಾದ ಬಹುವಚನದ 'ಅರು' ಪ್ರತ್ಯಯವೆಂಬ ಭ್ರಮೆಗೆ ಅವಕಾಶಕೊಟ್ಟಿತು. ಕಡೆಗೆ ನಮ್ಮ ಇಂಗ್ಲಿಷ್ 'ಮಾಸ್ತರ್' ಪದಕ್ಕೇ ತುಳುವಿನಲ್ಲಿ 'ಮಾಟೆ' ಎಂಬ ದುರ್ದಶೆ ಬಂದಂತೆ 'ಚವುಧರ್' (ಚವುಟರ್) ಚವುಟ ಎಂದು ಬಡವಾಯಿತು. ............ಆದರೆ ಚವುಟರ್ ಎಂಬುದು ಹೊರಗಿನಿಂದ ಆಮದು ಮಾಡಿದ ಶಬ್ದ."

(7) ತಲನಾಡು— ತುಳುನಾಡು ವಿಚಾರ. ತುಳುನಾಡು ಎಂಬುದನ್ನು 'ತಲನಾಡು' ಮತ್ತು ತುಳುವರನ್ನು 'ತಲಬೇರ್' ಎಂಬುದಾಗಿ ಮಾರ್ಪಡಿಸಿ ಅರ್ಥಮಾಡುವವರಲ್ಲಿ ಶ್ರೀ ನಾರಾಯಣ ಕಿಲ್ಲೆಯವರು ಪ್ರಮುಖರು. ಅವರ 'ಕಾನಿಗೆ' ಎಂಬ ಪುಸ್ತಕದಲ್ಲಿ ರಸಪೂರಿತವಾದ ಕವನಗಳನ್ನು 'ತುಳುವ'ರ ಮೇಲೆ ರಚಿಸಿದ್ದಾರೆ. ಅವರ ಪಾಂಡಿತ್ಯ ಅಗಾಧವಾದುದಾದರೂ 'ತಲನಾಡು' ತುಳುನಾಡು ಹೇಗಾಗುವುದೆಂದು ಮನನೀಯವಾಗುವುದಿಲ್ಲ. ತಗ್ಗು ಪ್ರದೇಶದಲ್ಲಿ (ತಲದಲ್ಲಿ) ಇರುವ ನಾಡು 'ತಲನಾಡು' ಅದುವೇ 'ತುಳುನಾಡು' ಎಂದು ಅವರ ಅಭಿಪ್ರಾಯ. ಈ ವಾದವೂ ಹುರುಳಿಲ್ಲದುದು. ತಲದಲ್ಲಿ ಇರುವ ನಾಡು ನಮ್ಮ ನಾಡು ಮಾತ್ರವಲ್ಲ. ಸಹ್ಯಾದ್ರಿಯ ಪಶ್ಚಿಮದಲ್ಲಿರುವ ಎಲ್ಲಾ ನಾಡುಗಳೂ ತಲದಲ್ಲಿಯೇ ಇವೆ. ಆದರೂ ನಮ್ಮ ನಾಡು ಮಾತ್ರ ತಲನಾಡಾಯ್ತೇಕೆ? ಶ್ರೀ ಕಿಲ್ಲೆಯವರಿಗೆ ತಲಮತ್ತು ತಳಶಬ್ದಗಳಿಗೆ ಏನೇನೂ ವ್ಯತ್ಯಾಸವಿಲ್ಲ. ಆದರೆ ತಲ ಎಂಬ ಪದವು ಸ್ಥಳವನ್ನೂ, ತಳಪದವು ತಗ್ಗಾದ ಪ್ರದೇಶವೆಂಬ ಅರ್ಥವನ್ನೂ ಹೊಂದುತ್ತದೆಂಬುದನ್ನು ತಿಳಿಯುವುದವಶ್ಯ. 'ತಲ'ಕ್ಕೂ 'ತುಳು'ವಿಗೂ ಅಜಗಜಾಂತರವಿದೆ ಎಂದೂ, ವ್ಯಾವಹಾರಿಕವಾಗಿ ಮಾತಿನಿಂದ ಮಾತಿಗೂ ಶಬ್ದ ಪರಿವರ್ತನೆಯಾಗುವುದರಲ್ಲಿ ಒಂದು ಕ್ರಮವಿದೆ ಎಂದೂ ತಿಳಿಯುವುದು ಅತಿ ಪ್ರಾಮುಖ್ಯವಾಗಿದೆ.

ಹೆಚ್ಚಾಗಿ . ಹೆಸರನ್ನಿಡುವುದು ಹೆರವರು. ಹಾಗಾದರೆ ಕಂನಾಡಿನವರು ನಮ್ಮನ್ನು ತಲವೇರ್ ಎಂದು ಕರೆದಿರಬೇಕಲ್ಲವೇ? ಅದನ್ನು ಗ್ರಂಥಗಳಲ್ಲಾಗಲೀ ಶಾಸನಗಳಲ್ಲಾಗಲೀ ತಲವರು (ತಳವರು) ಎಂಬುದಾಗಿ ಕರೆಯದೆ 'ತುಳುವರು' 'ತುಳುವ' ಎಂದು ಸ್ಪಷ್ಟವಾಗಿ ಉಲ್ಲೇಖಿಸಿದುದು ವಿಚಾರಣೀಯವಾದುದು ಮಾತ್ರವಲ್ಲದೆ ಈ ವಾದದ ಅಸಾಧ್ಯತೆಯನ್ನು ಸೂಚಿಸುತ್ತದೆ.

(8) ಕಡೆಯದಾಗಿ ಎನ್. ಎಸ್. ಕಿಲ್ಲೆ ಮತ್ತು ಎಸ್. ಎ. ಶೀನಪ್ಪ ಹೆಗ್ಡೆಯವರು ಬರೆದ ಪ್ರಾಚೀನ ತುಳುನಾಡು ಎಂಬ ಗ್ರಂಥದಲ್ಲಿ ಏನು ಸಿದ್ಧಾಂತವಿದೆ ಎಂಬುದನ್ನು ವಿಮರ್ಶಿಸಿದರೆ ಅದರಲ್ಲಿ ವಿಷಯ ವೈಶಾಲ್ಯವಿದ್ದರೂ ಬಹಳ ಅವ್ಯವಸ್ಥೆ ಮತ್ತು ಪರಸ್ಪರ ವಿರುದ್ಧವಾದ ಅಭಿಪ್ರಾಯಗಳು ತೋರಿಬರುತ್ತವೆ. ತುಳುವರೆಂದರೆ ಯಾರು ಎಂಬುದಕ್ಕೆ ಬಾದರಾಯಣ ಸಂಬಂಧದ ಮೂಲಕ ಕಾಲ್ಪನಿಕ ಉತ್ತರವನ್ನು ಕೊಟ್ಟಂತಿದೆ ಎಂದರೆ ಅತಿಶಯೋಕ್ತಿಯಾಗಲಾರದು. 'ತುಳುವ' ವೆಂಬುದಕ್ಕೆ ಯಾವ ಆಧಾರದ ಮೇಲೆ 'ಗಾಂಪ'ವೆಂದೂ, ತವು+ತಲ=(ತೌಲವ) ಪಸೆ ಇದ್ದ ಊರು ಹೇಗಾಗುವುದೆಂದೂ, ತಲವೆರ್ ಎಂಬುದಕ್ಕೆ 'ನೀರು ನಿಂತ ಸ್ಥಳದಲ್ಲಿ ಬೆಳೆಮಾಡುವವರು' ಎಂಬೀ ನಿರೂಪಣೆ ಹೇಗಾಗುವುದೆಂದೂ, ವಿಚಾರಕ್ಕೆ ನಿಲುಕದ ಸಂಗತಿಯಾ

ಗಿದೆ. "ತುರವೆ" ಎಂಬುದರ ಅರ್ಥ ಸ್ವೀಕಾರ ಮಾಡಿ "ತುಳುವೆ" ಎನ್ನೋಣವೇ? ಅದೂ ಸಾಧ್ಯವಿಲ್ಲ. ಕಾರಣ ಅವರು ಕೊಟ್ಟ ಅರ್ಥಗಳ ಯಾದಿಯಲ್ಲಿ ತುಳುವರನ್ನು ಮರಕಲರಿಗೆ ಹೋಲಿಸಿದೆ. ಮರಕಲರೂ (ಮೊಗೇರರು) ಹೆಂಡ ಇಳಸುವವರೂ (ತುರವೆ-ಬಿಲ್ಲವ-ಬಿರುವ) ಬೇರೆ ಬೇರೆ ಸಂಗಡದವರು. ಅರ್ಥವಿಸುವುದಕ್ಕೆ ದುಸ್ತರವಾದ ಇನ್ನೊಂದು ಸಂಗತಿ ಯಾವುದೆಂದರೆ ಮರಕಲರು ತುಳುವರು ಹೇಗೆಂದು. ಒಟ್ಟಿನಲ್ಲಿ ಹೇಳುವುದಾದರೆ ನಮ್ಮ ಪ್ರಶ್ನೆಯನ್ನು ಉತ್ತರಿಸುವ ಬದಲು ಪ್ರಶ್ನೆಯನ್ನೇ ಪುನಃ ಹಾಕಿದಂತೆ ಭಾಸವಾಗುತ್ತದೆ. ಪ್ರಾಚೀನ ತುಳುನಾಡು ಪುಸ್ತಕವಿಡೀ, ಪ್ರಾಚೀನತೆಯ ಕುರಿತಾಗಿ ನಮ್ಮಲ್ಲಿರುವ ಅವ್ಯವಸ್ಥೆಯನ್ನೂ ವಿಷಯದ ಬಡತನವನ್ನೂ ಸೂಚಿಸುತ್ತದೆ.

ಇನ್ನೂ ಕೆಲವು ಅನುಮಾನಗಳಿವೆ. ಅವನ್ನಿಲ್ಲಿ ಚರ್ಚಿಸುವುದಗತ್ಯ ಕಾಣುವುದಿಲ್ಲ. ತುಳುವ ಕತ್ತಿಯಿಂದ ತುಳುನಾಡಾಯಿತೆಂದೂ, ಮೆದು ಮಣ್ಣಿನ ಪ್ರದೇಶವೆಂಬರ್ಥದಲ್ಲಿ ಈ ಪ್ರದೇಶಕ್ಕೆ ತುಳು ನಾಡೆಂಬ ಹೆಸರಾಯಿತೆಂದೂ ವಾದಿಸುವವರೂ ಇದ್ದಾರೆ. ಇವುಗಳಲ್ಲಿ ಏನೂ ಹುರುಳಿಲ್ಲವೆಂದು ತೆಗೆದು ಹಾಕಬಹುದು.

ಹಾಗಾದರೆ ತುಳುವರೆಂದರೆ ಯಾರು? ತುಳು ಎಂದರೇನು? 'ತುಳುವ' ಎಂದರೆ ಯಾವುದು? ಈ ಪ್ರಶ್ನೆಗಳಿಗೆ ನನ್ನ ಅಭ್ಯಾಸಕ್ಕೆ ಸಿಲುಕಿದಂತೆ ಉತ್ತರವನ್ನೀಯಲು ಪ್ರಯತ್ನಿಸುತ್ತೇನೆ.

"ತುಳು" ಎಂಬ ಪದವು "ತುರು"ವಿನ ಪರ್ಯಾಯ ಪದವಾಗಿ ಬಂದಿರುವುದು ಉಚಿತವಾಗಿದೆಂದು ನನಗನಿಸುತ್ತದೆ. 'ತುರು'ವೆಂದರೆ ದನ, ಗೋವು, ಅಂತೂ ಆಕಳು ಎಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ (ಜಗುನೆಯತಡಿಯಲ್ಲಿ ತುರುಗಳಂ ಮೇಯಿಸಿದಂ) 'ರ' 'ಳ'ಗಳ ಅಭೇದದಿಂದಾಗಿ ತುರು ಪದವು ಕಾಲಾನುಗತಿಕದಿಂದ 'ತುಳು' ಎಂದು ಮಾರ್ಪಾಟು ಹೊಂದಿದೆ. ಈ ರೀತಿಯ ಮಾರ್ಪಾಟಿಗೆ ಸಾಧ್ಯತೆಯೂ ಇದೆ. ತುರುಗಳೇ ಪ್ರಧಾನವಾದ ನಾಡು ತುರು ನಾಡು. ಅದೇ ತುಳುನಾಡು. ತುರುಗಳನ್ನು ಸಾಕುವವರು, ಅವುಗಳನ್ನು ಹೊಂದಿದವರು ತುರುಕಾರರು (ತುರುವರು) ಅವರೇ ತುಳುವರೆಂದು ಹೆಸರನ್ನು ಪಡೆದರು. ಅವರ ನಾಡು 'ತುಳುವ'ವಾಯಿತು. ತುರುವರ ನಾಡು ತುಳುನಾಡಾಯ್ತು. ಈ ತುರುಕಾರರು ಗೋವಳರು. ಗೋಪಾಲಕ ವೃತ್ತಿಯನ್ನವಲಂಬಿಸುವರು. ಈ ತುರುವರು ಬಹಳ ಪ್ರಾಚೀನಕಾಲದ ಜನಪ್ರಭೇದ. ಇವರು ಚಂದ್ರವಂಶಕ್ಕೆ ಸೇರಿದವರೆಂದು ಹೇಳಿಕೊಂಡಿದ್ದರು. ಇವರ ಪ್ರಾಚೀನತೆಯನ್ನು ವೇದಕಾಲದವರೆಗೂ ಕೊಂಡು ಹೋಗಬಹುದು. ಒಂದು ಕಾಲದಲ್ಲಿ ಇಡೀ ಭಾರತವಲ್ಲೇ ವ್ಯಾಪಿಸಿಕೊಂಡಿದ್ದ ಜನಾಂಗವಿದು. ಈ ತುರುವರು ಹಿಂ

ದಕ್ಕೆ ಬಹಳ ಪ್ರಾಮುಖ್ಯತೆಯನ್ನು ಹೊಂದಿದ ಜನಾಂಗವಾಗಿ ನಮ್ಮ ನಾಡಿನಲ್ಲಿ ಇದ್ದಿರಬೇಕು. ಈ ತುರುವರ ನಾಡೇ ಗೋಪರಾಷ್ಟ್ರವಾಯಿತು. ಗೋರಾಷ್ಟ್ರವಾಯಿತು. ಅದರ ಪ್ರಾಮುಖ್ಯತೆಯನ್ನು ನಾವು ನಿತ್ಯ ಮಾಡುವ ಸಂಕಲ್ಪದಿಂದ ತಿಳಿಯಬಹುದು (ಗೋರಾಷ್ಟ್ರದೇಶೇ, ಗೋಕರ್ಣ ಮಂಡಲೇ. ಪರಶುರಾಮಕ್ಷೇತ್ರೇ) ಈ ರೀತಿಯ ಅನುಮಾನ ಸತ್ಯವನ್ನು ಪ್ರತಿಪಾದನೆ ಮಾಡುವಾಗ ಮೂರು ವಿಷಯಗಳ ಸ್ಪಷ್ಟೀಕರಣವಾಗುವುದು.

1) ತುರುವರು (ತುರುಕಾರರು) ಒಂದು ಪ್ರತ್ಯೇಕ ಜನಾಂಗ (ವಂಶ) ಈ ಜನ ಪ್ರಭೇದದಿಂದ ಈ ನಾಡಿಗೆ ತುಳುನಾಡೆಂಬ ಹೆಸರು ಬಂತು.

2) ಒಂದು ಕಾಲದಲ್ಲಿ ಈ ತುರುಕಾರರು ಈ ಪದೇಶದಲ್ಲಿ ಪ್ರಮುಖ ಜನರಾಗಿದ್ದರು. ಆಗಿದ್ದಿರಲೂ ಬೇಕು. ಸಮಯ ಕಳೆದಂತೆ ಇತರರು ಪ್ರಬಲರಾದರು. ಆದಾಗ್ಯೂ ತುಳು ನಾಡೆಂಬ ಹೆಸರು ಅಳಿಯದೆ ಉಳಿಯಿತು.

3) ಈ ತುರುಕಾರರು ಸಮಾಜದ ಬೆಳವಣಿಗೆಯ ಮೂರು ಹಂತಗಳಲ್ಲಿ (ಬೇಟೆಯ, ದನಕಾಯುವ ಮತ್ತು ವ್ಯವಸಾಯದ ಹಂತಗಳು) ದನಕಾಯುವ ಹಂತವನ್ನು (Pastoral Age) ನಿರ್ದೇಶಿಸುತ್ತಾರೆ.

ಈ ತುರಕಾರರು ನಮ್ಮ ನಾಡನ್ನು ಎಲ್ಲಿಂದ ಮತ್ತು ಎಂದು ಸೇರಿ ನೆಲೆಸಿದರೆಂಬುದನ್ನು ಅನುಮಾನದಿಂದಲೇ ನಿರ್ಧರಿಸಬೇಕಷ್ಟೆ!

ತುಳುನಾಡು, ತುರುನಾಡು, ಗೋವಳರ ನಾಡು–ಎಂಬುದನ್ನು ಈ ಕೆಳಗಿನ ದೃಷ್ಟಾಂತಗಳಿಂದ.ಉದಾಹರಿಸುವುದು ಉಚಿತವೆನಿಸುತ್ತದೆ.

(i) ಬ್ರಾಹ್ಮಣರ ಸಂಕಲ್ಪದಲ್ಲಿ 'ಗೋರಾಷ್ಟ್ರೆ' ಎಂದುನಾಡನ್ನುದ್ದೇಶಿಸಿ ದೈನಂದಿನ ಉಲ್ಲೇಖವು ಮಹತ್ಪೂರ್ಣವಾಗಿದೆ.

(ii) ನಮ್ಮ ನಾಡಿನ ಅನೇಕ ಊರ ಹೆಸರುಗಳು ಗೋವಳರ ಹಾಗೂ ತುರುಕಾರರ ಆಧಿಕ್ಯವನ್ನೂ ಸಾನ್ನಿಧ್ಯವನ್ನೂ ಸೂಚಿಸುತ್ತವೆ. ಉದಾ: ಗೋಪಾಡಿ, ಹಂದಾಡಿ, ಹಾಲಾಡಿ, ಹಾರಾಡಿ, ಹಾಲುವಳ್ಳಿ, ಪಾಡಂಪಳ್ಳಿ, ಪೇರಂಪಳ್ಳಿ, ಪಾಲಡ್ಕ, ಮಂದಾಡಿ, ನಂದ್ಯಾಲ, ನಂದ್ಯೂರು, ನಂದಾವರ, ನಂದನವನ, ಬೆಣ್ಣೆಕುದರು, ಹಟ್ಟಿಕುದುರು. ಹಾಲ್ನಾಡು, ಕುರಿಯಾಲ, ಗೋಕಾಡ, ಮಧೂರು, ಆಡೂರು, ಹಾಲುಮಕ್ಕಿ, ಕೋಡೂರು ಇತ್ಯಾದಿ ಸ್ಥಳನಾಮಗಳು ನಮ್ಮ ಗಮನವನ್ನು ಸೆಳೆಯದಿರಲಾರವು. ಇವುಗಳಲ್ಲಿ ಕೆಲವು ಅರ್ವಾಚೀನ ಹೆಸರುಗಳಿರಬಹುದು.

(iii) ಪೊಳಲಿಗೆ ತುಳುವಿನಲ್ಲಿ 'ಪುರಾಲ್' ಎಂಬುದಾಗಿ ಕರೆಯುತ್ತಾರೆ. ಪುರಾಲ್ ಎಂಬುದರಿಂದಲೇ ಪೊಳಲಿ ಎಂದಾಗಿರಬೇಕು. ಪುರಾಲ್ ಎಂದರೆ ಕೊಳಲು

ಎಂದರ್ಥ. ಈ ಪ್ರದೇಶವು ಹಿಂದಕ್ಕೇ ತುರುಕಾರರಿಗೆ ಪ್ರಾಮುಖ್ಯವಾದ ಊರಾದ್ದಿರಬೇಕು. ಈ ತುರುಕಾರರ ಕುಲ ದೈವವು 'ಚಾಮುಂಡಿ' ಹಾಗೂ 'ದುರ್ಗೆ ಈ ದುರ್ಗಾಪರಮೇಶ್ವರಿಯ ಆರಾಧನೆಯು ಪೊಳಲಲ್ಲಿ ಪ್ರಧಾನವಾಗಿದೆ.

(iv) ತುಳು ಪಾಡ್ದನದಲ್ಲಿ (ನಾಗರಾಜು ಪಾಡ್ದನ) ತುಳುವರು ಚಂದ್ರವಂಶದಗಿ ತುರ್ವಸುವಿನ ಸಂತತಿಯವರೆಂದು ಹೇಳಿದೆ."ಚಂದ್ರವಂಶದ ಯಯಾತಿಎಂಬರಾಜನು, ತನ್ನ ವೃದ್ಧಾಪ್ಯವನ್ನು ಮಕ್ಕಳು ತೆಗೆದುಕೊಳ್ಳಬೇಕೆಂದು ಕೇಳಲು: ಯದು, ತುರ್ವಸು' ಪುರು ಎಂಬವರಲ್ಲಿ ತುರ್ವಸು ಎಂಬವನು ತಂದೆಯ ರಾಜ್ಯವನ್ನು ಬಿಟ್ಟು ಪಾತಾಳ ಲೋಕಕ್ಕೆ ಬಂದು ನಾಗರಾಜನ ಕೂಡ ಸಮಾಚಾರವನ್ನು ತಿಳಿಸಿ ಮಿತ್ರತ್ವದಿಂದ ನಾಗಲೋಕದ ಸ್ತ್ರೀಯರನ್ನು ಮದುವೆಯಾಗಿ ಇಲ್ಲಿಯೇ ಕಾಲವಾದನೆಂತಲೂ, ಅವನಿಗೆ ಹುಟ್ಟಿದವರು ತುಳುವರು, ಮಲವರು, ತೊದವರು ಆಗಿದ್ದಾರೆಂದು ಈ ಪಾಡ್ದನದಿಂದ ವ್ಯಕ್ತವಾಗುತ್ತದೆ. ಕಥಾ ಭಾಗವನ್ನು ಸಂಪೂರ್ಣ ನಂಬಲಾಗದಿದ್ದರೂ, ಇಲ್ಲಿ ಉಲ್ಲೇಖವಿರುವ 'ತುರ್ವಸುವಿನ ಸಂತತಿಯವರು ತುಳುವರು' ಎಂಬುದು ವಿಚಾರಣೀಯವಾಗಿದೆ. ಇವರು ತುರುಕಾರರೇ, ಗೋವಳರೇ ಆಗಿರುವರು.

(v) ಇದೇ ಉಕ್ತಿಯು ಮಹಾಭಾರತದ ಆದಿ ಪರ್ವತದಲ್ಲಿ ಕಂಡು ಬರುವುದು ಗಮನಾರ್ಹವೂ ಆಗಿದೆ. (ಇದರಲ್ಲಿ ದಕ್ಷಿಣದ ಮ್ಲೇಂಛರಲ್ಲಿ ಜನಿಸುವಂತೆ ಶಾಪಗ್ರಸ್ಥನಾದ ಕತೆ ಇದೆ.)

(vi) ಭೂತಾಳ ಪಾಂಡ್ಯರಾಯನ ಕತೆಯಲ್ಲಿ ಆದಿಭಾಗದಲ್ಲಿ ಒಂದು ಉಲ್ಲೇಖವಿದೆ. "ಬಾರಕೂರಿನಲ್ಲಿ ಗೋವಳ ಹುಡುಗರು ಸೋಮೇಶ್ವರನನ್ನು ಪ್ರತಿಷ್ಠೆ ಮಾಡಿ ಪೂಜಿಸಲು, ಸೋಮೇಶ್ವರನು ಪ್ರಸನ್ನನಾಗಿ ನಂದ ನಂದರಾಯನಿಗೆ ಸೋಮೇಶ್ವರನ ಬಳಿಯಲ್ಲಿ ಜಯಂತಿಕಾ ನಗರವೆಂಬ ಪಟ್ಟಣವನ್ನು ನಿರ್ಮಾಣ ಮಾಡಿ, ಅಲ್ಲಿ 'ಗೋವಳ' ಎಂಬ ಸಿಂಹಾಸನವನ್ನು ಸ್ಥಾಪನೆಮಾಡಿ, ಅದಕ್ಕೆ 'ಆನಂದ' ಸಿಂಹಾಸನವೆಂಬ ಹೆಸರಿಟ್ಟು ಗೋವಳನಿಗೆ ಪಟ್ಟ ಕಟ್ಟಿದ್ದರಿಂದ ನಂದ ನಂದನರಾಯನೆಂಬ ಹೆಸರಾಯಿತು" ಇದರಲ್ಲಿರುವ ಗೋವಳರ ಉಲ್ಲೇಖವು ಬಹಳ ಗಣನೀಯವಾಗಿದ್ದು, ನಮ್ಮ ವಾದವನ್ನು ಪುಷ್ಟೀಕರಿಸುತ್ತದೆ.

(vii) ಅದೇ ಭೂತಾಳ ಪಾಂಡ್ಯರಾಯನ ಚರಿತ್ರೆಯಲ್ಲಿ ಕಟ್ಟುಕಟ್ಟಳೆಗಳ ವಿವರ ಇದೆ. ಜಾತಿಗಳ ವಿವರದಲ್ಲಿ 42 ಜಾತಿಗಳನ್ನು ಕೊಟ್ಟಿದೆ. ಇವುಗಳಲ್ಲಿ 'ತುಳುವರು' ಒಂದು ಜಾತಿ 'ಮಲವರ' ಹೆಸರೂ ಇದೆ. ಇದರಲ್ಲಿ ತಿಳಿಯ ತಕ್ಕ ವಿಷಯ

ವೆಂದರೆ ತುಳುವರು ಎಂಬವರು ಒಂದು ನಿರ್ದಿಷ್ಟವಾದ ಸಂಗಡಕ್ಕೆ ಸೇರಿದವರೆಂಬುದು. ಈಗ ನಾವು ಅನ್ನುವಂತೆ ಸಮಸ್ತರಿಗೂ ತುಳುವರೆಂದು ಆಗ ಕರೆಯುತ್ತಿರಲಿಲ್ಲವೆಂದು ಅರ್ಥವಾಗುತ್ತದೆ. ಉಳಿದ ಎಲ್ಲಾ ಸಂಗತಿಗಳು ನಂಬಲಾತೀತವಾದುವುಗಳೆಂದು ವಿಸರ್ಜಿಸಲ್ಪಟ್ಟರೂ, ತುಳುವರೆಂಬ ಸಂಗಡವಿತ್ತೆಂದೂ, ಅದು ಪ್ರಬಲವಾದುದರಿಂದ ಈ ನಾಡಿಗೆ ತುಳುವವೆಂದು ಹೆಸರು ಬಂದಿರಬೇಕೆಂದೂ ತೀರ್ಮಾನಿಸಲು ಸಾಧ್ಯವಿದೆ.

(viii) 'ಬಾರಕೂರು' ಈ ಶಬ್ದದ ನಿಷ್ಪತ್ತಿಯನ್ನೇ ಸ್ವಲ್ಪ ಆಳವಾಗಿ ನೋಡಿದಲ್ಲಿ ಇಲ್ಲಿ ಯದು ವಂಶದ ಆಳ್ವಿಕೆ ಇದ್ದಿರಬಹುದೆಂದು ತಿಳಿಯುತ್ತದೆ. ಬಾರಕೂರೆಂಬುದು ದ್ವಾರಕಾಪುರವೆಂಬ ಶಬ್ದದ ತದ್ಭವವಾಗದೇಕೆ? ದ್ವಾರಕ–ಬಾರಕ (ತ್ಭ), ಪೂರ್–ಊರ್ (ತ್ಭ) ಎಂಬೆರಡು ಶಬ್ದಗಳು ಸಂಧಿಯಿಂದ ಬಾರಕೂರೆಂದಾಗುವುದು. (ಇವಕ್ಕೆ ಶಬ್ದಮಣಿದರ್ಪಣದ ತದ್ಭವ ಪ್ರಕರಣವನ್ನು ನೋಡುವುದು) ಈ ಬಾರಕೂರು ಉಪದ್ವಾರಕೆಯಾಗಿದ್ದಿರಬಹುದು. ಕೃಷ್ಣನ ನಂತರದಲ್ಲಿ ಯದುವಂಶದವರು ದಕ್ಷಿಣಕ್ಕೆ ಬಂದರೆಂದು ಮಹಾಭಾರತದಲ್ಲಿ ಹೇಳಿದೆ. ಕರಾವಳಿಯಲ್ಲೇ ಅವರು ದಕ್ಷಿಣಕ್ಕೆ ಪಯಣ ಬೆಳೆಸಿ, ಬಾರಕೂರಿನಲ್ಲಿ ನೆಲೆಸಿ ರಾಜ್ಯವನ್ನು ಕಟ್ಟಿದ್ದಿರಬಹುದು. ತುಳುನಾಡಿನಲ್ಲಿ ಸುರ್ಯೋಪಾಸನೆಯೂ ಈ ಯದು ವಂಶದವರಿಂದ ಬಂದಿರಬೇಕು (ಭವಿಷ್ಯೋತ್ತರ ಪುರಾಣ) ಇದರ ವಿವರ ಮುಂದಿನ ಲೇಖನಗಳಲ್ಲಿ ಬರುವುದು.

(ix) ಶಂ. ಭಾ. ಜೋಶಿಯವರ 'ಕನ್ನಾಡಕತೆ'ಯಲ್ಲಿ ಪಾಡಿಯ ಪೂರ್ವಕತೆ ಎಂಬ ಅಧ್ಯಾಯವು ಇಲ್ಲಿ ನಮಗೆ ಉಪಯುಕ್ತವಾಗುತ್ತದೆ. 'ಪಾಡಿ' ಎಂಬಶಬ್ದವು 'A Settlement, a village hamlet' ಎಂಬ ಬಹಳ ಹಳೆಅರ್ಥವನ್ನೀಯುತ್ತದೆ. ಈ 'ಪಾಡಿ'ಯಿಂದಲೇ 'ಪಟ್ಟಿ' 'ಹಟ್ಟಿ' ಎಂಬುವುಗಳು ಹುಟ್ಟುತ್ತವೆ. ಮೂಲಾರ್ಥದಲ್ಲಿ ಪಾಡಿಎಂಬುದು ದನಗಾರಿಕೆಯ ಕುರುವನ್ನೂ ದನಗಾರರ ವಸತಿಯನ್ನೂ ಸೂಚಿಸುತ್ತದೆ. ಆದರೆ ಇಂದು ಕಾಣಿಸಿಕೊಳ್ಳುವ ಹಟ್ಟಿ, ಹಾಡಿ, ಪಾಡಿ, ಪಟ್ಟಿಗಳೆಲ್ಲವೂ ಹಿಂದಣ ದನಗಾರಿಕೆಯ ಮಟ್ಟದಲ್ಲಿಯೇ ತಲೆದೋರಿದುವೆಂದರೆ ಅದು ಅಸಂಭವವೇ ಸರಿ. ಆದರೂ ಈ ಪಾಡಿ ಎಂಬುದು ಈ ನಾಡಿನ ತೀರಾ ಆರಂಭ ಕಾಲದ ದನಗಾರಿಕೆಯ ಮಟ್ಟದ ಬಿಡಾರವೆಂಬುದು ನಿಶ್ಚಿತ. ನಮ್ಮ ನಾಡಿನಲ್ಲಿ ಇಂತಹ 'ಪಾಡಿ' ಉತ್ತರ ಪದವಾಗಿ ಉಳ್ಳ ಊರ ಹೆಸರುಗಳು ಹಲವಿದ್ದು ತುರುಕಾರರ

ಪ್ರಾಬಲ್ಯವನ್ನೇ ಪುಷ್ಟೀಕರಿಸುತ್ತವೆ. (ಗೋಪಾಡಿ, ಆದ್ಯಪಾಡಿ, ತೋಳ್ಪಾಡಿ, ಅಂಬಲಪಾಡಿ, ಪಾಡಿಗಾರ್, ಕನ್ನರಪಾಡಿ, ಕೊರಂಕ್ರಪಾಡಿ, ಪಾಡಿ ಇತ್ಯಾದಿ)

ಶ್ರೀ ಜೋಶಿಯವರ ತುಳುನಾಡಿನ ಕುರಿತಾದ ಅಭಿಪ್ರಾಯವು ಇಂತಿದೆ. "ತುಳುನಾಡಿನ ಹೆಸರಿನಲ್ಲಿಯೂ ತುಂಬಾ ಸ್ವಾರಸ್ಯವಿದೆ. ತುಳು ನಾಡಿಗೂ ಗೋಪರಾಷ್ಟ್ರವೆಂಬ ಇನ್ನೊಂದು ಹೆಸರಿದೆ. ತುಳು ಮನೆತನದ ವಿಜಯ ನಗರದ ಅರಸರು ತುರ್ವಸುವಿನ ವಂಶಜರಂತೆ ಎಂದರೆ ಗೋವಳರೆಂದರ್ಥ. ಆದುದರಿಂದ ತುಳುವರೆಂದರೆ ಗೋವಳರು. ಇದರಿಂದ ತುಳು ಶಬ್ದದ ಮೂಲವು 'ತುರು' ಎಂದಿರಬೇಕೆಂದು ನನ್ನ ಮತ. 'ತುರು' ಇದುವೇ "ತುಳು"ವಾಗಿದೆ. ಇದರಿಂದ ತುಳುವರೆಂದರೆ ತುರುವರು ಕಂನಾಡ ಹಟ್ಟಿಕಾರರೇ ಆಗಿರುವರೆಂದು ಸಿದ್ಧವಾಗುತ್ತದೆ. ಕಂನುಡಿಗೆ ತುಳು ನುಡಿಗೂ ಇರುವ ನಿಕಟ ಸಂಬಂಧವು ಇದನ್ನೇ ದೃಢಪಡಿಸುತ್ತದೆ. ಗೋಪಾಡಿ ಮೊದಲಾದ ತುಳುನಾಡಿನಲ್ಲಿರುವ ಪಾಡಿಗಳು ಹಟ್ಟಿಗಳಂತೆ ತುರುಕಾರರ ಕುರುಹುಗಳೇ ಆಗಿವೆ."

(x) ನಮ್ಮ ನಾಡಿನಲ್ಲಿ ಕೋಟವೆಂಬ ಊರು ಕುಂದಾಪುರ ತಾಲೂಕಿನಲ್ಲಿದೆ. ಈ ಹೆಸರು ಹೇಗೆ ಬಂದಿತೆಂದು ಸ್ವಲ್ಪ ಹೆಚ್ಚು ವಿಚಾರ ಮಾಡಿದರೆ, ಹಾಗೂ ಭಾಷಾ ಶಾಸ್ತ್ರದ ಸಹಾಯದಿಂದ ವಿಮರ್ಶಿಸಿದರೆ ತಿಳಿಯಲು ಸಾಧ್ಯವಿದೆ. ನನ್ನ ಅರ್ಥ ಸರಣಿಯು ಸಂಪ್ರದಾಯವಾದಿಗಳಿಗೆ ತೀರ ಬೇಸರವನ್ನುಂಟು ಮಾಡಲೂ ಬಹುದು. ಆದರೂ ನನ್ನ ಅಭಿಪ್ರಾಯವನ್ನು ತಿಳಿಸುತ್ತೇನೆ. ಕೋಟ ವೆಂದರೂ ಗೋರಾಷ್ಟ್ರವನ್ನೇ ಸೂಚಿಸುತ್ತದೆ. ಕೋ ಮತ್ತು ಗೋ ಅಭೇದವಾಗಿವೆ. ಹೀಗಾಗಿ ಕೋ (ಗೋ)+ಅಟ=ಕೋಟ (ಗೋಟ) ವೆಂದಾಗುವುದು ಸಹಜ. ಕೋ ಎಂಬ ಶಬ್ದಕ್ಕೆ ಗೋವೆಂಬ ಅರ್ಥವಿರುವುದರಿಂದ ಕೋಟವೆಂದರೆ ಗೋರಾಷ್ಟ್ರವೆಂದೇ ಅರ್ಥವಾಗುವುದು, ಅಟವೆಂದರೆ ಸಂಚರಿಸುವ ಸ್ಥಳವೆಂದು ರೂಢವಾಗಿ ದೇಶಾದ್ಯರ್ಥ ಈ ಶಬ್ದವಾಯಿತು. ಹೇಗೆ ಕೋಟ ಎಂದರೆ ಗೋ+ಅಟ--ಗೋನಾಡು (ರಾಷ್ಟ್ರ) ಕೋಟದ ಈಶ್ವರನು ಕೋಟೇಶ್ವರನು. ಕೋಟೇಶ್ವರನಲ್ಲ, ಈ ಕೋಟೇಶ್ವರನು ಕೋಟೇಶ್ವರನಾದುದು ಹೇಗೆ? [Kittel Dict. Pages 495 & 569]

(xi) ತುರುನಾಡು ಗೋಕರ್ಣದ ವರೆಗೆ ವಿಸ್ತೃತವಾಗಿತ್ತು ಎಂಬುದಕ್ಕೆ ಚರಿತ್ರೆಯು ಬೆಂಬಲವನ್ನೀಯುತ್ತದೆ. ಉತ್ತರ ಕನ್ನಡಕ್ಕೆ ಪಶುಕವೆಂಬ ಹೆಸರಿದ್ದು ಅದೂ ಗೋ ರಾಷ್ಟ್ರವನ್ನೇ ಸೂಚಿಸುತ್ತದೆ. ಈ ಪಶುಕ ಶಬ್ದವು ಹೈಗವೆಂಬ ರೂಪ

ನಂತರ ತಾಳಿತು. ಪಶುಕವೆಂದರೂ ಗೋನಾಡು. ಆವಿನಹಳ್ಳಿ, ಗೋಕರ್ಣ ಎಂಬ ಹೆಸರುಗಳಿರುವ ಊರುಗಳೂ ಇದಕ್ಕೆ ಸಾಕ್ಷಿ.

(xii) ತುಳುವರ ಪ್ರಾಮುಖ್ಯತೆಯು ಚಾರಿತ್ರಿಕವಾಗಿ ಮೈಸೂರಿನ ಗಂಗರೂ, ದ್ವಾರಸಮುದ್ರದ ಹೊಯ್ಸಳರೂ, ವಿಜಯ ನಗರದ ಅರಸರೂ ಪ್ರಕಾಶಕ್ಕೂ ಪ್ರಾಬಲ್ಯಕ್ಕೂ ಬಂದ ನಂತರ ಹೆಚ್ಚಾಗಿ ಕಂಡು ಬಂದುದೆಂದು ಹೇಳ ಬಹುದು. ಇವರೆಲ್ಲರೂ ಚಂದ್ರ ವಂಶೀಯರೆಂತಲೂ, ತುರ್ವಸುವಿನ ಸಂತತಿಯವರೆಂತಲೂ ಹೇಳಿಕೊಳ್ಳುತ್ತಿದ್ದರು. ವಿಜಯನಗರದಲ್ಲಿ ತುಳುವ ರಾಜವಂಶವು ಸ್ಥಾಪಿತವಾದ ಕಾಲದಿಂದಲಂತೂ, 'ತುಳುನಾಡು' ಹೆಚ್ಚು ಬೆಳಕಿಗೆಬಂತು.

ಮೇಲಕ್ಕೆ ಕೊಟ್ಟ ವಿವರದಲ್ಲಿ ಓದುಗರು ಒಂದು ತಪ್ಪು ಅರ್ಥಮಾಡಿಕೊಳ್ಳ ಬಾರದಾಗಿ ಅಪೇಕ್ಷಿಸುತ್ತೇನೆ. ಗೋವಳರು ಯಾ ತುರುಕಾರರು ನಮ್ಮ ನಾಡಿನಲ್ಲಿದ್ದ ವರು ಮಾತ್ರವೆಂಬುದು ನನ್ನ ಪ್ರತಿಪಾದನೆಯಲ್ಲ. ಈ ಮೊದಲೇ ಹೇಳಿದಂತೆ ಈ ಪಂಗಡವು ಕರ್ನಾಟಕದಲ್ಲಂತೂ ಸಾರ್ವತ್ರಿಕವಾಗಿತ್ತು. ಗೊಲ್ಲರೆಂಬವರು ಆಂಧ್ರದಲ್ಲಿ ಈಗಲೂ ಪ್ರಾಮುಖ್ಯರಿದ್ದಾರೆ. ಇಲ್ಲಿ ತಿಳಿಯ ಬೇಕಾದ ವಿಷಯವೆಂದರೆ ಬಹಳ ಹಿಂದಕ್ಕೆ ಈ ತುರುವರು ನಮ್ಮ ನಾಡಿಗೆ ಬಂದು ನೆಲೆಸಿದ್ದು ತುಳು (ರು) ನಾಡೆಂಬ ಹೆಸರನ್ನಿತ್ತರು. ಆ ತುರುವರೂ ನಮ್ಮಲ್ಲೇ ನಶಿಸಿಹೋಗಿದ್ದಾರೆ ಯಾ ನಾಡವರಾಗಿ ಪರಿವರ್ತನೆ ಹೊಂದಿದ್ದಾರೆ. ಈ ತುರುಕಾರರ ನಂತರದ ಹಂತವೇ ವ್ಯವಸಾಯದ ಹಂತ. ಈ ಕಸುಬನ್ನು ಒಕ್ಕಲಿಗರು ಎತ್ತಿ ಹಿಡಿವರು. ಇವರೇ 'ಒಕ್ಕಲ್ಮೆ' ಎಂದೆನಿಸಿ ಕೊಳ್ಳುವವರು. ಇವರೇ ನಾಡವರೂ ಬಂಟರೂ ಆಗಿದ್ದಾರೆ. ಇವರ ವಿಷಯ ಮುಂದಿನ ಲೇಖನದಲ್ಲಿ ಬರೆಯುತ್ತೇನೆ.

# ಸ್ಥಳನಾಮಗಳು ಹೇಳುವ ತುಳುನಾಡಿನ ಕತೆ

ಕಳೆದ ಲೇಖನದಲ್ಲಿ ತುಳುನಾಡಿನ ಹುಟ್ಟು ಹೇಗಾಯಿತೆಂಬುದರ ಕುರಿತಾದ ಬೇರೆ ಬೇರೆ ವಾದಗಳನ್ನೂ, ಅವುಗಳ ಅಸಮಂಜಸತೆಯನ್ನೂ, ಕೂಲಂಕಷವಾಗಿ ಚರ್ಚಿಸಿ, ತುಳುನಾಡು ನಿಜವಾಗಿಯೂ ತುರುನಾಡೆಂಬುದಾಗಿಯೂ, ತುರುವರ, ತುರುಕಾರರ ಹಾಗೂ ಗೋವಳರ ನಾಡೆಂಬುದಾಗಿಯೂ, ಆ ಹಳೆಗಾಲದ ದನಗಾರಿಕೆಯೇ ಪ್ರಧಾನವಾದ ಉದ್ಯೋಗವುಳ್ಳ ತುರುವರು ನಶಿಸಿ ಹೋದರೂ ಅಥವಾ ಕಾಲವು ಉರುಳಿದಂತೆ ಒಕ್ಕಲುತನಕ್ಕೆ ಮಾರ್ಪಾಡಾದರೂ, ಅವರಿಂದ ಪಡೆದ ಈ ನಾಡಿನ ಹೆಸರು ಅಳಿಯದೆ ಇಂದಿಗೂ ಉಳಿದು ಬಂತು ಎಂಬುದರ ನಿಷ್ಕರ್ಷೆಯನ್ನು ಮಾಡಿದ್ದಾಯಿತು. ಈಗ ಈ 'ತುರು' ಎಂಬ ಶಬ್ದವೇ 'ತುಳು' ಎಂದು ರೂಪಾಂತರ ಹೊಂದುವುದು ಭಾಷಾಶಾಸ್ತ್ರಕ್ಕೂ ಸಮ್ಮತವೇ ಎಂಬುದನ್ನು ಅಲ್ಲಗಳೆಯುವಂತಿಲ್ಲ. ಈ ತುರುಕಾರರು ಕಂನಾಡಿನಲ್ಲಿ ಸಾರ್ವತ್ರಿಕವಾಗಿದ್ದ ಹಟ್ಟಿಗಾರರ (ದನಗಾರರ) ಒಂದು ಪ್ರಭೇದವೇ ಸರಿ. ಈ ಹಟ್ಟಿಗಾರರು ವೇದಕಾಲದ 'ಪತ್ತಿಗಳೇ' (ರುದ್ರಾಧ್ಯಾಯದಲ್ಲಿ ಬರುವ) ಆಗಿರುವರೆಂದು ಸಂಶೋಧಕರ ಅಭಿಪ್ರಾಯ. ಇವರು ಮೊದಲು ಆರ್ಯರ ವಿರೋಧಿಗಳಾಗಿದ್ದು ನಂತರದಲ್ಲಿ ಶರೀರ ಸಂಬಂಧದ ಮೂಲಕವೊ, ರಾಜಕಾರಣದಿಂದಲೂ ಆರ್ಯ, ಹಟ್ಟಿಕಾರರ ಸಂಸ್ಕೃತಿಯ ಸಂಗಮಕ್ಕೆ ಪ್ರಾರಂಭವಾಯಿತು. ಪುರಾಣ ಕಾಲದಲ್ಲಂತೂ ಇದು ಪೂರ್ಣತೆಯನ್ನು ಹೊಂದಿತೆನ್ನಬಹುದು. ವೇದದಲ್ಲಿ ಕಾಣಿಸಿಕೊಳ್ಳುವ, ತುರುಕಾರರ ಮೂಲಿಗರೆನ್ನಿಸಿಕೊಳ್ಳುವ ಯದು-ತುರ್ವರು ಒಂದು ಜನಾಂಗವೇ ಆಗಿದ್ದಿರಬೇಕಲ್ಲದೆ ಯದುವಾಗಲೀ ತುರ್ವಸುವಾಗಲೀ ವ್ಯಕ್ತಿಗಳ ಹೆಸರಲ್ಲವೆಂಬುದನ್ನು ತಿಳಿಯುವುದು ವಿಷಯದ ಸ್ಪಷ್ಟತೆಗೆ ಹೆಚ್ಚಿನ ಬೆಳಕನ್ನೀಯುತ್ತದೆ. ಅನುಲೋಮ ವಿವಾಹಗಳು ಪ್ರಾರಂಭವಾಗಿ ಶಾಸ್ತ್ರಸಮ್ಮತವಾದ ನಂತರದಲ್ಲಿ, ಪ್ರತಿಲೋಮ ವಿವಾಹಗಳು ಅಶಾಸ್ತ್ರೀಯವೆಂದು ಖಂಡಿಸಲ್ಪಟ್ಟರೂ ಆಚರಣೆಯಲ್ಲಿ ಬಂದ ನಂತರದಿಂದ ಯದು– ತುರ್ವರು ವ್ಯಕ್ತಿಗಳೆಂಬ ಕಲ್ಪನೆ ಬಂದು ಪುರಾಣಗಳಲ್ಲಿ ಅಡಕವಾಯಿತು ಎನ್ನಬಹುದು.

ತುಳುವರು ತುರ್ವಸುವಿನ ಸಂತತಿಯವರೆಂಬ ಪರಂಪರೆಯೂ ಅಭಿಮಾನವೂ ಇಂದಿಗೂ ಈ ನಾಡಿನಲ್ಲಿ ಜೀವಂತವಾಗಿ ಉಳಿದಿರುವುದು ನಮ್ಮ ಸಿದ್ಧಾಂತವನ್ನು ಪುಷ್ಟೀಕರಿಸುತ್ತದೆ. ಈ ತುರುಕಾರರು ಬಂದು ನಮ್ಮ ನಾಡನ್ನು ನೆಲೆಯಾಗಿ ಮಾಡಿದ

ಕಾಲಮಾನವೂ ಅಂತೂ ಕ್ರಿಸ್ತಾಬ್ದಕ್ಕಿಂತ ಮೊದಲಾಗಿರಬೇಕೆಂಬುದರಲ್ಲಿ ಅನುಮಾನವಿರಲಾರದು. ದಾಖಲೆಯ ಅಭಾವದಿಂದ ಪಡುವ ಕಷ್ಟವನ್ನು ನೀಗಿಸಲು ಒಮ್ಮೊಮ್ಮೆ ಪರಂಪರೆಯನ್ನೆ ಮರೆಹೊಕ್ಕಬೇಕಾಗುತ್ತದೆ. ನಮ್ಮ ಈ ಸಿದ್ಧಾಂತಕ್ಕಂತೂ ಸ್ಥಳನಾಮಗಳು ತುಂಬಾ ಉಪಯುಕ್ತವಾಗಿವೆ. ಶಂ. ಭಾ. ಜೋಶಿಯವರು ಅವರ 'ಕನ್ನಡಕತೆ' ಮತ್ತು 'ಕನ್ನಡದ ನೆಲೆ' ಎಂಬ ಗ್ರಂಥಗಳಲ್ಲಿ ಮನಒಪ್ಪುವ ರೀತಿಯಲ್ಲಿ ಪ್ರತಿಪಾದಿಸುವಂತೆ ಪಾಡಿಗಳು, ನಂದಗ್ರಾಮಗಳು, ಗೋಪಾಡಿಗಳು, ಕುರಿಗ್ರಾಮಗಳು ಮೊದಲಾದುವು ನಮ್ಮ ನಾಡಿಗರ, ಹಟ್ಟಿಕಾರರ, ದನಗಾರಿಕೆಯ ಸೂಚಕವಾಗಿದೆ ಎಂಬುದರಲ್ಲಿನ ಅನುಮಾನ ನಿರಾಧಾರವೆಂದು ನನಗನಿಸುತ್ತದೆ. ನಂದರವಳ್ಳಿ, ನಂದಳಿಕೆ, ಮೂಡಗೋಪಾಡಿ, ನಂದಿಹಾಡೆ, ಕುದಿಪಾಡಿ, ಕುರಿಯಾಳ, ಕುರಾಡಿ, ಕುರಿಯ, ಕೊಳಲಗಿರಿ ಎಂಬ ಸ್ಥಳಗಳು ಈ ತುರುಕಾರರ ಇರವನ್ನು ಇನ್ನು ಪುಷ್ಟೀಕರಿಸದಿರಲಾರವು.

ನಮ್ಮ ನಾಡಿನ ಪಾಡಿಯ ಕತೆಯನ್ನು ಊರ ಹೆಸರುಗಳೇ ಹೇಳಲಿ. ಈ ಹೆಸರುಗಳ ಪೂರ್ಣಯಾದಿಯನ್ನು ವಿಷಯ ಸಮರ್ಥನೆಗೆ ಕೊಟ್ಟಿದ್ದೇನೆ. ಪಾಡಿ:— ಗೋಪಾಡಿ, ಮೂಡಗೋಪಾಡಿ, ಬೆಳ್ಳರಪಾಡಿ, ಕುತ್ತಪಾಡಿ, ಅಂಬಲಪಾಡಿ, ಕೊರಂಕ್ರಪಾಡಿ, ಕಟ್ಟಪಾಡಿ, ಎರ್ಲಪಾಡಿ, ವಾಲಪಾಡಿ, ತಲಪಾಡಿ, ಬೈಕಂಪಾಡಿ, ಎಳೆಪಾಡಿ, ತೆಂಕೌಳಿಪಾಡಿ, ಎಳಿಪಾಡಿ, ಮಾನಂಪಾಡಿ, ತಾಳಿಪಾಡಿ, ಕುಕ್ಕಿಪಾಡಿ, ಕುಟಿಪಾಡಿ, ಕರಪಾಡಿ, ಕ್ಯೊಪಾಡಿ, ಅದ್ಯ(ಅಡ್ಯ)ಪಾಡಿ, ಪಳ್ಳಿಪಾಡಿ, ಪುಚ್ಚಪಾಡಿ, ಮುನ್ನಿಪಾಡಿ, ಸುಂಟಿಪಾಡಿ, ಕ್ಯೊಕುಳಿ ಬೆಟಂಪಾಡಿ, ಕುಟ್ರಪಾಡಿ, ಮತ್ಪಾಡಿ, ದೇಲಂಪಾಡಿ, ಕರೋಪಾಡಿ, ಪುಣಚಪಾಡಿ, ತಂಟೆಪಾಡಿ, ಕುಂಪಾಡಿ, ಕುಕ್ಕೆಪಾಡಿ, ಬೆಳ್ಳಿಪಾಡಿ, ಬೆಟ್ಟಂಪಾಡಿ, ಪುಂಚಪಾಡಿ, ಇಚ್ಚಲಂಪಾಡಿ, ಕೊತ್ರಪಾಡಿ, ದೋಲ್ಪಾಡಿ, ಮಡಪ್ಪಾಡಿ, ಕಿಲ್ಪಾಡಿ, ಪೆರ್ಲಬೈಪಾಡಿ, ಶ್ರೀಪಾಡಿ, ತೊಟ್ಟಪಾಡಿ, ಮಂಗಲಪಾಡಿ. ಈ ತಖ್ತೆಯಲ್ಲಿ ಪಾಡಿಯು ವಾಡಿ, ಬಾಡಿಯಾಗಿ ರೂಪಾಂತರ ಹೊಂದಿದ ಸ್ಥಳನಾಮಗಳು ಸೇರುವುದು ಯುಕ್ತವೆ.—ಗುಲ್ವಾಡಿ, ಹೊಂಬಾಡಿ, ಅಲಪಾಡಿ, ಕೆಡಂಬಾಡಿ, ಕೊಡಿಂಬಾಡಿ. ಇಲ್ಲಿ ಎರಡು ಮೂಲತತ್ವಗಳನ್ನು ಸರಿಯಾಗಿ ನೆನಪಿನಲ್ಲಿಡಬೇಕು. ಮೊದಲನೆಯದು ಪಾಡಿಯಿಂದ ಅಂತ್ಯವಾಗುವ ಎಲ್ಲಾ ಹೆಸರುಗಳೂ 'ಹಟ್ಟಿಕಾರರ ವಾಸ್ತವ್ಯದ ಎಡೆಗಳು' ಎಂಬ ಮೂಲಾರ್ಥದಿಂದಲೇ ಬಂದ ಹೆಸರುಗಳಲ್ಲವೆಂಬುದು. ಅರ್ಥಾತ್ ಕಾಲಾಂತರದಲ್ಲಿ ಮೂಲಾರ್ಥವು 'ಊರು-ಹಳ್ಳಿ' ಎಂಬ ಸಾಮಾನ್ಯ ಅರ್ಥವನ್ನೊಳಗೊಂಡು ಬಳಕೆಗೆ ಬಂದಿರಬೇಕು. ಈ ಹೆಸರುಗಳಲ್ಲಿ ಬರೇ 'ಪಾಡಿ' ಎಂಬುದು ಬಹಳ ಪುರಾತನ ಹೆಸರಾಗಿದ್ದಿರಬೇಕು. ಈ ಹೆಸರು ಒಂದು ಮಾಗಣೆಗೇನೇ

ಬಂದುದು ವಿಚಾರಣೀಯವಾಗಿದೆ. (ಪಾಡಿ ಮಾಗಣೆ—ಕಾಸರಗೋಡು ತಾಲೂಕು) ಎರಡನೇಯದು ಈ ಪಾಡಿಯು ಹಾಡಿ (An underwood) ಎಂಬುದನ್ನು ನಿರ್ದೇಶಿಸುವುದೆಂದು ಅಭಿಪ್ರಾಯ ಪಡಬಾರದು. ಕಾರಣ ಮೇಲೆ ಕಾಣಿಸಿದ ಸ್ಥಳಗಳಲ್ಲಿ ಮಾತ್ರ ಹಾಡಿಗಳಿದ್ದುದು ಅಲ್ಲವೆಂಬುದನ್ನು ತಿಳಿಯತಕ್ಕದ್ದು. ಒಂದೇ ಮಾತಿನಲ್ಲಿ ಹೇಳುವುದಾದರೆ ನಮ್ಮ ನಾಡಿನ ಎಲ್ಲೆಡೆಗಳಲ್ಲೂ ಇರುವ ಈ ಪಾಡಿಗಳ ಒಂದು ಕಾಲದಲ್ಲಿ ಇಲ್ಲಿ ನೆಲೆಮಾಡಿಕೊಂಡಿದ್ದ ಕಂನಾಡಿನ ಹಟ್ಟಿಗಾರರ ಪಂಗಡವಾದ ತುರುಕಾರರ ಪ್ರಾಧಾನ್ಯವನ್ನೇ ಎತ್ತಿ ತೋರಿಸುತ್ತವೆ. ಅಂತೂ ತುಳುನಾಡು ತುರುನಾಡು, ಅದೇ ಗೋರಾಷ್ಟ್ರವೆಂಬುದನ್ನು ನಿರಾಕರಿಸಲು ಕಾರಣಗಳನ್ನು ಕೊಡುವ ವರೆಗೆ ಅಲ್ಲಗೆಳೆಯುವಂತಿಲ್ಲ.

ಈ ನಮ್ಮ ತುಳುನಾಡಿನಲ್ಲಿ ಪ್ರಾಕ್ಕಾಲದಿಂದ ಯಾವ ಯಾವ ಜನರು ಬಂದು ಬಾಳ್ವೆ ಮಾಡಿ ಕೊಂಡಿದ್ದರು. ಎಂಬ ವಿಷಯವನ್ನು ಮಥಿಸಿ, ವಿಮರ್ಶಿಸುವುದು ಅಗತ್ಯವಿದೆ. ಈ ವಿಮರ್ಶೆ ಇಲ್ಲಿಯ ಸಂಸ್ಕೃತಿಯ ರೂಪ ನಿರೂಪಣೆಗೆ ಅಗತ್ಯವಿದೆ. ತೌಳವ ಸಂಸ್ಕೃತಿ ಎಂಬುದು ವಿಶಿಷ್ಟವಾದ ಒಂದು ಸಂಸ್ಕೃತಿಯೋ, ಅದೊಂದು ಪೂರ್ಣತೆಯನ್ನು ಪಡೆದ ದೇಶೀಯ ಸಂಸ್ಕೃತಿಯೋ, ಅಥವಾ ಅದು ಅಖಂಡ ಕರ್ನಾಟಕ ಸಂಸ್ಕೃತಿಯೊಳಗಣ ಒಂದು ಅಂಶವೋ ಎಂಬೀ ವಿಷಯವನ್ನು ಸತ್ಯದ ಒರೆಗಲ್ಲಿಗೆ ತಿಕ್ಕಿ, ಸತ್ಯವಾದುದನ್ನು ಬಯಲಿಗೆಳೆದು, ಈ ಸತ್ಯಸಂಗತಿಯು ನಮ್ಮ ನಾಡಿನ ಪ್ರತಿಯೋರ್ವನಿಗೂ ತಿಳಿಯುವಂತೆ ಮಾಡುವುದು ಸಂಶೋಧಕನ ಕರ್ತವ್ಯ. ಅಂತೂ ಈ ಕುರಿತಾದ ವಿಮರ್ಶೆಮಾಡದಿದ್ದಲ್ಲಿ ತಪ್ಪು ತಿಳುವಳಿಕೆಯ ಅಡಿಪಾಯದ ಮೇಲೆಯೇ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಕಟ್ಟಡವನ್ನು ನಿರ್ಮಿಸಿ ಅಂಧಕಾರದಲ್ಲಿ ಬೆಳೆಯುವಂತಾಗುವುದೆಂಬುದು ನಿರ್ವಿವಾದ.

ಪ್ರಕೃತಕ್ಕೆ ಈ ಲೇಖನದಲ್ಲಿ ತುಳುನಾಡಿನಲ್ಲಿ ಕಾಲಕಾಲಕ್ಕೆ ಯಾವ ಯಾವ ಪಂಗಡಗಳು ನೆಲೆಸಿದ್ದು, ಅದರ ಚರಿತ್ರೆಯನ್ನು ರೂಪುಗೊಳಿಸಿದುವು ಎಂಬುದನ್ನು ಒಂದು ಮುಖದಿಂದ ತೀರ್ಮಾನಿಸಲಿಕ್ಕೆ ಪ್ರಯತ್ನಿಸುತ್ತೇನೆ. ನಮ್ಮ ನಾಡಿನ ಸ್ಥಳನಾಮಗಳು ವೈಜ್ಞಾನಿಕ ರೀತಿಯಲ್ಲಿ ಪರಿಶೀಲಿಸಲ್ಪಟ್ಟು, ವಿಮರ್ಶೆಗೊಳಪಟ್ಟಲ್ಲಿ ಎತ್ತಿಕೊಂಡ ಈ ಚರಿತ್ರೆಯ ವಿವರದ ಮೇಲೆ ಯಾವ ಬೆಳಕನ್ನು ಚೆಲ್ಲುತ್ತದೆ ಎಂದು ನೋಡೋಣ. ನಾನು ಅವಲಂಬಿಸುವ ಮಾರ್ಗ ತೀರಾ ಹೊಸತಲ್ಲದಿದ್ದರೂ, ನವೀನತೆಯನ್ನು ಒಳಗೊಂಡ ಮಾರ್ಗವದು. ಈ ಮಾರ್ಗದಲ್ಲಿ ವಿಶ್ವವಿದ್ಯಾನಿಲಯದ ಹಂತದಲ್ಲಿ ತುಂಬಾ ಪರಿಶೋಧನೆಯಾಗಬೇಕು. ಈ ಪರಿಶೋಧನೆಯಾಗದೆ ಒಂದು ಪ್ರದೇಶದ ನಿಜವಾದ ಸಂಸ್ಕೃತಿಯ ರೂಪರೇಖೆಯು ವ್ಯಕ್ತವಾಗದೆಂಬುದನ್ನು ಎಲ್ಲರೂ ಮನಗಾಣಬೇಕು.

ನಾವೀನ್ಯವನ್ನು ಪಡೆದ ಈ ಹಾದಿಯನ್ನು ಅವಲಂಬಿಸಲು ಕಾರಣವೇನೆಂದು ಓದುಗರು ಕೇಳಬಹುದು. ನಮ್ಮ ನಾಡಿನ ಜನಜೀವನ, ಸಂಪ್ರದಾಯ, ಪದ್ಧತಿಗಳು, ನಂಬಿಕೆ, ಧಾರ್ಮಿಕ ನೆಲೆ ಮತ್ತು ಜನ ಪ್ರಭೇದ—ಇವುಗಳ ಮೇಲಿನ ವಿಮರ್ಶಾಗ್ರಂಥಗಳು ತೀರಾ ವಿರಳ. ಇದ್ದವುಗಳೂ ನೇರಾಗಿ ಮತ್ತು ಮೂಲವನ್ನು ಪರಿಶೋಧಿಸಿ ವಿಷಯ ನಿರೂಪಣೆಯನ್ನು ಮಾಡುವುದಿಲ್ಲ. ಪರದೇಶೀಯರಿಂದ ಬರೆಯಲ್ಪಟ್ಟ ವರದಿ ವಿವರಗಳು ಹೆಚ್ಚಿನ ಉಪಕಾರಿಗಳಾದರೂ ಸತ್ಯಾನ್ವೇಷಣಾ ಕಾರ್ಯದಲ್ಲಿ ಪೂರ್ಣತೃಪ್ತಿಯನ್ನು ಅವು ಕೊಡಲಾರವು. ಇವುಗಳು ಪೂರಕಗಳ ಸ್ಥಾನವನ್ನೇ ಪಡೆಯುವುವು ಹೊರತು ಅಖಂಡ ಮೂಲಧಾರಗಳಾಗಲಾರವೆಂಬುದನ್ನು ತಿಳಿಯಬೇಕು. ಈ ಸ್ಥಳನಾಮಗಳ ಪರಿಶೋಧನೆಯನ್ನು ಪರಿಶ್ರಮದಿಂದ ಬೊಂಬ್ಯಾ, ಕಲ್ಕತ್ತಾ ಯುನಿವರ್ಸಿಟಿಗಳ ಕೆಲವು ಪ್ರಾಧ್ಯಾಪಕರು ತಕ್ಕಮಟ್ಟಿಗೆ ಮಾಡಿದ್ದಾರೆ. ಆದರೂ ಕೆಲಸವು ಅಪೂರ್ಣವೆಂದೇ ತಿಳಿಯತಕ್ಕದ್ದು. ನಮ್ಮ ನಾಡಿನ ಎಡೆಗಳು ಹೇಳುವ ಕತೆಯನ್ನು ಈ ಕೆಳಗಿನಂತೆ ವಿವರಿಸಲು ಇಚ್ಛಿಸುತ್ತೇನೆ.

## ತುಳುನಾಡಿನ ಸ್ಥಳನಾಮಗಳ ವರ್ಗೀಕರಣ

ಯಾವುದೇ ಪ್ರದೇಶದ ಸ್ಥಳನಾಮಗಳಲ್ಲಿ ತುಂಬಾ ಅರ್ಥವು ಅಡಕವಾಗಿದೆ. ಅಂತೆಯೇ ಜನರ ಕುಟುಂಬದ ಹೆಸರುಗಳು ಅರ್ಥಗರ್ಭಿತವಾಗಿವೆ. ಈ ಸ್ಥಳನಾಮಗಳು ಹೆಚ್ಚಾಗಿ ಅನ್ವರ್ಥನಾಮಗಳು. ಕಾರಣವಿಲ್ಲದೆ ಹೆಸರುಗಳು ಬರಲಾರವು. ಹೆಸರಿಡುವುದಕ್ಕೆ ಕಾರಣಗಳು ಅನೇಕವಿರಬಹುದು. ಹೆಚ್ಚಾಗಿ ಆಯಾ ಊರಿನ ಸಾಂಸ್ಕೃತಿಕ ಹಿನ್ನೆಲೆಯನ್ನು ಈ ಊರ ಹೆಸರುಗಳು ಸೂಚಿಸುತ್ತವೆ.

ಹಳೆ ಹೆಸರುಗಳು ನಾನಾ ವಿಧವಾದವುಗಳು. ಅವುಗಳನ್ನು ಅರ್ಥಮಾಡಿಕೊಂಡು, ಅವುಗಳಲ್ಲಿ ಅಡಕವಾಗಿರುವ ಗಂಭೀರತೆಯನ್ನು ಹೊರಗೆಳೆದು, ಪ್ರಕಾಶಕ್ಕೆ ತರುವುದು ಅಷ್ಟೊಂದು ಸುಲಭವಲ್ಲ. ಏಕೆಂದು ಪ್ರಶ್ನಿಸಿದರೆ ಅನೇಕ ಕಾರಣಗಳನ್ನು ಕೊಡಬೇಕಾಗುತ್ತದೆ: ಅನೇಕ ವೇಳೆ ತಲತಲಾಂತರದಲ್ಲಿ ಸ್ಥಳನಾಮಗಳು ಬದಲಾವಣೆಗಳನ್ನು ಹೊಂದಿವೆ. ಕೆಲವೊಮ್ಮೆ ಮೂಲ ಹೆಸರುಗಳೇ ಮರೆತು ಹೋಗುತ್ತವೆ. ಈ ಬದಲಾವಣೆಗಳು ರಾಜಕೀಯದಿಂದಲೂ, ಅನ್ಯಭಾಷಾ ಪ್ರಭಾವದಿಂದಲೂ, ಮನುಷ್ಯನ ಕಲ್ಪನಾ ಸಾಮರ್ಥ್ಯದಿಂದಲೂ ಉಂಟಾಗಿದ್ದಿರಬಹುದು. ಮನುಷ್ಯನ ಕಲ್ಪನಾ ಸಾಮರ್ಥ್ಯವು ಕುದುರಿದ ಹಾಗೆಲ್ಲಾ ಅನೇಕ ಹಳ್ಳಿ-ಪಳ್ಳಿಗಳ ಹೆಸರುಗಳ ಮೇಲೆ ಕಟ್ಟುಕತೆಗಳು ಚಿಗುರಿ, ಬೆಳೆದು ಅವುಗಳ ಹುಟ್ಟನ್ನು ಅಡಗಿಸುವಷ್ಟು ಹಬ್ಬಿಹೋಗಿವೆ. ನಮ್ಮೂರ ದೇವಸ್ಥಾನಗಳ ಚರಿತ್ರೆಯು ಇದಕ್ಕೆ ಹಿರಿದಾದ ದೃಷ್ಟಾಂತ. ಹೆಸರುಗಳ ಮೇಲೆ ಬೀಳುವ ತರಗೆಲೆಗಳನ್ನೂ, ಏಳುವ ಮುಳ್ಳು

ಪೊದೆಗಳನ್ನೂ ತೆಗೆದು ಬಿಸಾಡುವುದಕ್ಕೆ ನಮ್ಮ ಬುದ್ಧಿಯು ಪ್ರಯತ್ನಿಸುವುದೇ ಇಲ್ಲ ವೆನ್ನಬಹುದು. ಕಾರಣವೇನೆಂದರೆ ಕಲ್ಪನೆ ಮಾರ್ಗ ಸುಲಭ. ಕಡಿದಾದ ವಿಚಾರ ಮಾರ್ಗ ಕಷ್ಟ. ಊರ ಹೆಸರುಗಳನ್ನು ಅರ್ಥವಿಸುವುದಕ್ಕೆ ಸಂಪ್ರದಾಯವೂ ಅಡ್ಡಿ ಯಾಗಬಲ್ಲುದು. ಕೆಲವೊಮ್ಮೆ ಒಂದು ಊರಿನ ಹೆಸರಿಗೆ ಅನೇಕ ಅರ್ಥಕೊಡಲು ಸಾಧ್ಯವಿದೆ. ಇವುಗಳಲ್ಲೆಲ್ಲವೂ ಸರಿಯಾದುದೆಂದೇ ಅಂತಹ ಸಂದರ್ಭದಲ್ಲಿ ಸಂದಿಗ್ಧ ಪರಿಸ್ಥಿತಿಯುಂಟಾಗಿ ಆಧಾರವಾಗಿ ಇಟ್ಟುಕೊಂಡ ಅರ್ಥವೇ ತಪ್ಪಿದರೆ ಕಾರ್ಯವಿಫಲ ವಾಗುವುದು ಖಂಡಿತ. ಶಾಸನಾದಿಗಳೂ, ಸಾಹಿತ್ಯವೂ ಊರುಗಳಿಗೆ ಸಂಬಂಧಿಸಿ ದುದು ಅತಿವಿರಳವಾದುದರಿಂದ ಮೂಲರೂಪದ ಬಗ್ಗೆ ಅನುಮಾನವೇ ಹೆಚ್ಚಾಗಲು ಕಾರಣವುಂಟು. ಹಲವು ಸಾರಿ ಮಾತಿನಿಂದ ಮಾತಿಗೆ ಊರಿಗೆ ಹೆಸರು ಬರುವುದೂ ಉಂಟು. ಇಲ್ಲಿ ಸರಳತೆಯೇ ಹೆಚ್ಚು. ಈ ಸಂದರ್ಭದಲ್ಲಿ ವಿಚಾರವನ್ನು ಆಳವಾಗಿ ಇಳಿಸಿ ಅರ್ಥಕಟ್ಟಿದರೆ ಹಾದಿ ತಪ್ಪುವುದು. ಒಂದೊಂದು ಕಡೆ ನಮ್ಮ ವಿಚಾರವು ಬರಿಯ ಶಬ್ದಸಾದೃಶ್ಯದಿಂದ ಮೋಸಹೋಗುವುದುಂಟು. ಕೆಲವು ಸಂಶೋಧಕರು ತಮ್ಮ ವಿಷಯ ಪ್ರತಿಪಾದನೆಯ ಉದ್ದೇಶವನ್ನೇ ಇಟ್ಟುಕೊಂಡು ಸ್ಥಳನಾಮಗಳ ಮೇಲೆ ಕತ್ತಲು ಚೆಲ್ಲುವುದುಂಟು. ಅಂಥವರಿಗೆ ಸತ್ಯದ ಪ್ರತಿಪಾದನೆ ಮುಖ್ಯವಾಗಿದ್ದಂತೆ ಕಂಡುಬರುವುದಿಲ್ಲ.

ಒಟ್ಟಿನಲ್ಲಿ ಹೇಳುವುದಾದರೆ ಊರ ಹೆಸರುಗಳು ಜನರ ಮೂಲವನ್ನೂ, ಮಾತು ಗಳು ಹೇಗೆ ಬಂದುವೆಂಬುದನ್ನೂ, ಅಚ್ಚಳಿಯದೆ ನಿಂತ ಚರಿತ್ರಾಂಶಗಳನ್ನೂ, ಭೂಮಿಯ ಲಕ್ಷಣ ಮತ್ತು ಜನರ ಹಳೆಗಾಲದ ಜನಜೀವನದ ರೀತಿಯನ್ನೂ ಅನುಭವ ಮಾಡಿಕೊಳ್ಳುವರೆ ಸಹಾಯವಾಗುವುವು ಎಂಬುದರಲ್ಲಿ ಸಂದೇಹವಿಲ್ಲ. ಶೋಧದಲ್ಲಿ ಆಸಕ್ತನಾದವನಿಗೆ ಕಲ್ಪನಾ ಶಕ್ತಿಗಿಂತಲೂ ವಿಚಾರಶಕ್ತಿಯು ಅತ್ಯಗತ್ಯ. ಸತ್ಯವು ಅಪ್ರಿಯವಾದರೂ ಅದನ್ನೇ ಕಂಡುಹಿಡಿಯಬೇಕೆಂಬ ಹಟವಿರಬೇಕು. ಹೀಗೆ ಹೇಳಿ ದುದರಿಂದ ಹುಡುಕುವವನು ಸ್ಥಳಗಳ ವಿಷಯವಾದ ಆಕಾಶಪುರಾಣಗಳನ್ನು ಓದಲೇ ಬಾರದೆಂದು ಅರ್ಥವಲ್ಲ. ಅವುಗಳಲ್ಲಿ ಜೊಳ್ಳು ಎಷ್ಟು, ಕಾಳು ಎಷ್ಟು ಎಂದು ತೂರುವ ಮೊದಲು ಸ್ಥಳಗಳ ಹೆಸರನ್ನು ಮುಚ್ಚಿದ್ದ ಗಿಡಗಂಟೆಗಳನ್ನು ಕತ್ತರಿಸುವ ಪ್ರಯತ್ನ ಮಾಡಬೇಕು. ಹೀಗೆ ಕತ್ತರಿಸಿದರೆ ಆ ಹೆಸರುಗಳ ಹುಟ್ಟು, ಬಿಡವನ್ನು ನಿರ್ಧರಿಸುವುದಕ್ಕೆ ಕಷ್ಟವಾದರೂ ಅವುಗಳ ಬಂಧು ಬಳಗ, ಕುಲಗೋತ್ರ, ಜೋಡು- ಕೂಡು ಮೊದಲಾದುವನ್ನು ತಿಳಿಯಲು ಸಾಧ್ಯವಿದೆ.

ಈ ಊರ ಹೆಸರುಗಳು ಸಾಧಾರಣವಾಗಿ ಎರಡು ಶಬ್ದಗಳಿಂದಾದ ಕೂಡುನುಡಿ ಯಾಗಿರುವುದು ಅಧಿಕ. (ಮಂಗಳೂರು, ಕಾರ್ಕಳ, ಬ್ರಹ್ಮಾವರ) ಇವುಗಳಲ್ಲಿ ಮೊದ ಲನೆಯ ನುಡಿಯು ವಿಶಿಷ್ಟಾರ್ಥವನ್ನೂ, ಎರಡನೆಯದು ಆಯಾವರ್ಗದ ಸಾಮಾನ್ಯ

ಅರ್ಥವನ್ನೂ ಸೂಚಿಸುತ್ತವೆ. (ಮಂಗಳ+ಊರು, ಕಾರ+ಕಳ, ಪಾಲ್+ಕಳ ಇತ್ಯಾದಿ) ಕೆಲವೆಡೆ ಈ ಕೂಡ ನುಡಿಗಳು ಸ್ಪಷ್ಟವಿರುವುದಿಲ್ಲ. (ಕುಡಲ, ಕೋಟ, ಕುಡುಮ ಇತ್ಯಾದಿ) ಹೆಸರಿನ ಎರಡೂ ಪದಗಳು ಹಲವೆಡೆಗಳಲ್ಲಿ ಸ್ಪಷ್ಟವಾಗಿರುವುದಾದರೂ ಎಷ್ಟೋ ಕಡೆಗಳಲ್ಲಿ ಅವುಗಳಿಂದ ಇಂದು ಅರ್ಥವು ಸರಿಯಾಗಿ ತಿಳಿಯದಂತಾಗಿದೆ. ಇದಕ್ಕೆ ಕಾರಣ ಪ್ರಾಚೀನ ಕಾಲದ ಆಪದ ಪ್ರಯೋಗಕ್ಕೆ ಇದ್ದ ಅರ್ಥದಲ್ಲಾದ ಬದಲಾವಣೆ ಒಂದು. ಇನ್ನೊಂದು ಕಾರಣ, ಶಬ್ದ ರೂಪದಲ್ಲಾದ ವ್ಯತ್ಯಾಸಗಳು. ಪಳ್ಳಿಯು ಓಳ್ಳಿಯಾಗಿ ಮುಂದೆ ಒಳಿ, ಳಿ ಲಿ, ಳೆ ಯವರೆಗೆ ಪಲ್ಲಟವಾಗಿದೆ. (ಕಡೆಹಳ್ಳಿಯು ಈಗ ಕಡಿಯಾಳಿಯಾಗಿದೆ. ಮರಹಳ್ಳಿಯು ಮರೋಳಿಯಾಗಿದೆ. ಮಳಹಳ್ಳಿಯು ಮಳಲಿ ಎಂದೆನಿಸಿದೆ, ಇತ್ಯಾದಿ) ಸೀರ್‌ಪುರವು ಈಗ ಶಿವಪುರವೆಂದೆನಿದೆ. ಇಲ್ಲಿ ಎಷ್ಟು ರೂಪಾಂತರವಿದೆ ಎಂಬುದು ಆಶ್ಚರ್ಯವನ್ನುಂಟುಮಾಡುತ್ತದೆ!

ನಮ್ಮ ನಾಡಿನ ಸ್ಥಳನಾಮಗಳನ್ನು ಎರಡು ರೀತಿಯಾಗಿ ವರ್ಗೀಕರಣ ಮಾಡಬಹುದು. 1) ಸಂಯುಕ್ತ ನುಡಿ ಇರುವ ಹೆಸರುಗಳಲ್ಲಿ ಮೊದಲಿನ ಪದವನ್ನು ಅವಲಂಬಿಸಿ ಅದರಿಂದ ಸೂಚಿತವಾಗುವ ಕೆಲವು ಗುಂಪುಗಳು. 2) ಹೆಸರುಗಳ ಉತ್ತರಭಾಗದಿಂದ ತೋರಿ ಬರುವ ಕೆಲವು ಗುಂಪುಗಳು. (ಊರ ಹೆಸರುಗಳನ್ನು ಉದಾಹರಣಾರ್ಥವಾಗಿ ಕೊಡುವಾಗ ಎಡೆಗಳ ಎಲ್ಲಾ ಹೆಸರುಗಳನ್ನೂ ಈ ಲೇಖನದಲ್ಲಿ ಆದ್ಯಂತವಾಗಿ ಸೇರಿಸಲು ಅಸಾಧ್ಯವಾದುದರಿಂದ ಕೆಲವನ್ನೇ ಆಯ್ದುಕೊಂಡಿದ್ದೇನೆ)

**ಮೊದಲ ಭಾಗದಿಂದ ಸೂಚಿತವಾಗುವ ಕೆಲವು ಗುಂಪುಗಳು—**

1) ಪ್ರಾಣಿಗಳಿಂದ ಬಂದುವು:—ನರಿಕೊಂಬು, ನಂದಿಕೂರು, ಹಂದಾಡಿ. ಗಿಳಿಯಾರ, ಕೊರಂಕ್ರಪಾಡಿ, ತುಳು (ತುರು) ನಾಡು.

2) ಗಿಡ, ಮರ, ಗಂಟಿಗಳಿಂದ:–ಪೆಲತ್ತೂರು, ಬಿದರೆ (ಮೂಡ ಮತ್ತು ಪಡು) ಗೋಳಿತಟ್ಟು, ನೆಲ್ಲಿಕಾರು, ಹೂವಿನ ಕೆರೆ, ತಾಳಿಪಾಡಿ, ಬನ್ನಂಜೆ.

3) ದೇಹಾಂಗಗಳಿಂದ:–ಕಾಲ್ತೋಡು, ಕೈಯಾರ, ಮೊಳಹಳ್ಳಿ, ಕೈಮನ, ಕೈರಂಗಳ.

4) ದೀನಸುಗಳ ಹೆಸರುಗಳಿಂದ:—ಗುಲ್ವಾಡಿ, ಹಾಲಾಡಿ ಬೆಲ್ಲಾಡಿ, ಹಾಲುವಳ್ಳಿ, ಉಪ್ಪಿನಂಗಡಿ, ಉಪ್ಪೂರು.

5) ಬಳಗದವರಿಂದ:– ಕಾಂತಾವರ, ನೀರೆ, ಅಜ್ಜಾವರ, ಅಜ್ಜಿಬೆಟ್ಟು.

6) ಬಣ್ಣಗಳಿಂದ:– ಕೆಂಜೂರು, ಕರ್ನೀರೆ, ಕಪ್ಪಾಡಿ, ಬಿಳಿಯಾರು, ಪಚ್ಚನಾಡಿ, ಕರಿಯಂಗಳ, ಕೆಮ್ಮಣ್ಣು, ಬೆಳ್ಮಣ್ಣು.

7) ಅಂಕೆಗಳಿಂದ:-ನಾಲ್ಕೂರು, ಆಠೂರು, ಐವತ್ತೊಕ್ಲು, ಐದೂರು, ಷಡಂಗಡಿ, ಮುನ್ನೂರು, ಐವರ್ನಾಡು.

8) ದಿಕ್ಕುಗಳಿಂದ:—ಮೂಡೂರು, ತೆಂಕಗ್ರಾಮ, ಬಡಗು ಮಿಜಾರ, ಮಿತ್ತಬಾಗಿಲು, ಪಡೂರು, ಕಡೆಕಾರ್, ಬಡಗನ್ನೂರು ಇತ್ಯಾದಿ.

9) ದೇವತಾದಿಗಳಿಂದ:-ಅಂಬಲಪಾಡಿ, ಶಂಕರ ನಾರಾಯಣ, ಸುಬ್ರಹ್ಮಣ್ಯ, ರಾಮಕುಂಜ, ಶಂಬೂರು, ಚಾಂತಾರು, ಶಿವಳ್ಳಿ, ಸೋಮೇಶ್ವರ, ವಿಟ್ಲ, ಇತ್ಯಾದಿ.

10) ಜನಗಳಿಂದ:—ರಟ್ಪಾಡಿ, ಕನ್ನರ್ಪಾಡಿ, ಪಣಿಯೂರು, ಕುಡುಪು, ಬಿಲ್ಲಾಡಿ, ಕುಂಡ್ಮೂರು, ಮುಂಡೂರು, ಬೆಳ್ಳರಪಾಡಿ.

11) ನೆಲದಿಂದ:—ಕೋಟತಟ್ಟು, ಕುದುರು, ಬೈಲೂರು, ಹಳ್ಳಿಹೊಳೆ, ಕುಂಜಾಲ್, ಕೋಟ ತಡಿ, ಗುಂಡಿಬೈಲು, ಗುರಿಗುಂಡಿ.

12) ವ್ಯವಸಾಯ, ಉದ್ಯೋಗ, ಅಧಿಕಾರಿಗಳಿಂದ: —ಪಾವೂರು, ಅಧಿಕಾರ ಬೆಟ್ಟು, ಬಂಟಾಲ, ಕಬ್ಬಿನಾಲೆ, ಮಂತ್ರಾಡಿ

13) ಮಳೆ, ಮಿಂಚು, ಮುಂತಾದುವುಗಳಿಂದ:—ಕಾರ್ಕಳ, ಕಾರ್ನಾಡು, ಅಮಾಶೆ ಬೈಲು.

14) ಚಿಕ್ಕ, ಹಿರೆ, ಸಣ್ಣ, ದೊಡ್ಡ:- ಪೆರಿಯ, ಹಿರಿಯಡ್ಕ, ಹಿರಿಅಂಗಡಿ, ಹೆಮ್ಮಾಡಿ, ಕಿನ್ನಿಕಂಬಳ, ಪೆರ್ಡೂರು, ಹೆಗ್ಗುಂಜೆ, ಕಿರಿ ಮಂಜೇಶ್ವರ, ಹೆಬ್ರಿ.

15) ಕಾಲದಿಂದ:-ಮುಕ್ತೂರು, ಹೊಸೂರು, ಹೊಸದುರ್ಗ, ಹೊಸಳ,ಹೊಸ ಅಂಗಡಿ,ಹಳೆಯಂಗಡಿ, ಹೊಸಬೆಟ್ಟು ಆದ್ಯಪಾಡಿ, ಆದಿ ಉಡುಪಿ, ಕಡಿರುದ್ಯಾವರ.

16) ವ್ಯಕ್ತಿಗಳಿಂದ: ಶಂಕರಪುರ (ಶಂಕರಪು) ಮುದರಂಗಡಿ, ಗುರುವಾಯನಕೆರೆ, ಹಂಪನಕಟ್ಟೆ, ಅನಂತಾಡಿ, ಜಾಕ್ರಿಬೆಟ್ಟು, ಸೇವಂತೂರು.

**ಹೆಸರುಗಳ ಉತ್ತರಭಾಗದಿಂದ ಸೂಚಿತವಾಗುವ ಗುಂಪುಗಳು—**

ಇವುಗಳಲ್ಲಿ ಸರ್ವ ಸಾಮಾನ್ಯವಾಗಿ ಎರಡು ದೊಡ್ಡ ಗುಂಪುಗಳನ್ನು ಮಾಡಬಹುದು. 1) ಊರ ಇತಿಹಾಸವನ್ನು ಸೂಚಿಸುವ ಪದಗಳು (ಇವುಗಳಲ್ಲಿ ವಸತಿ, ಕ್ರಮ ಮತ್ತು ಸಂಸ್ಕೃತಿಯ ಹಿನ್ನೆಲೆ ಕಂಡು ಬರುವುವು.)

2) ಊರ ಸ್ವಭಾವವನ್ನು ತೋರಿಸುವ ಪದಗಳು (ಇವುಗಳು ಭೂವಿವರಣೆಯಲ್ಲಿ ನೆಲ ಜಲ ಭಾಗಗಳನ್ನು ಸಂಬಂಧಿಸಿದ ನುಡಿಗಳು.)

**ಮೊದಲ ಭಾಗ**

1) ಪಾಡಿ, ವಾಡಿ,ಭಾಡಿ, ಪಳ್ಳಿ, ಹಳ್ಳಿ:-ಬೆಳ್ಳಿಪಾಡಿ,ಗುಲ್ವಾಡಿ, ಹೊಂಬಾಡಿ, ಪಳ್ಳಿ?, ಪಳ್ಳಿಪಾಡಿ, ಪಾರಂಪಳ್ಳಿ, ನಿಡಪಳ್ಳಿ, ಕುಕ್ಕೆಹಳ್ಳಿ, ಹೆಂಗವಳ್ಳಿ, ಬುಡೋಳಿ, ಮಳಲಿ, ಹಾನೆಹಳ್ಳಿ, ಆನೆಗಳ್ಳಿ.

2) ಊರು, ಪುರ, ವರ (ಅವರ) ಪಟ್ಟಣ, ನಾಡು, ಈಶ್ವರ, ನಟ್ಟ:— ಪಾದೂರು, ಎಲ್ಲೂರು, ಗುರುಪುರ, ಮಣಿಪುರ, ಅಜ್ಜಾವರ, ಕಾಂತಾವರ, ಕಾಶಿಪಟ್ನ, ಬಕ್ಕಪಟ್ನ, ಐವರ್ನಾಡು, ಕಾರ್ನಾಡು, ನೀಲೇಶ್ವರ, ಸೋಮೇಶ್ವರ.

3) ಕೋಟೆ, ದುರ್ಗ, ಗಡ, ಬಾಯಿ, ಬಾಗಿಲ:—ಕೋಟೆ, ಕಿಳ್ಯಾಕೋಟೆ, ದುರ್ಗ, ಹೊಸದುರ್ಗ, ಬಾದ್ರಗಡ, ಪೆರುವಾಯಿ, ಬೆಳ್ವಾಯಿ, ಶಿರಿಬಾಗಿಲು, ಮಿತ್ತಬಾಗಿಲು.

4) ಕೋಣೆ (ಕೋಣಿ, ಕೋಣು?) ಮನೆ, ಮಾಡ, ಅಂಗಡಿ, ಗ್ರಾಮ:— ಕಂಬದಕೋಣೆ, ಪಡುಕೋಣೆ, ಶೇಡಿಮನೆ, ಹೆಮ್ಮಾಡಿ, ಚಾವರ್ಾಡಿ, ಗ್ರಾಮ, ನಂದಿಗ್ರಾಮ, ಕುದಿಗ್ರಾಮ, ಹಟ್ಟಿಯಂಗಡಿ, ಬೆಳ್ತಂಗಡಿ, ಉಪ್ಪಿನಂಗಡಿ, ಅಳದಂಗಡಿ.

## ಎರಡನೆಯ ಭಾಗ

5) ಕಲ್ಲು, ಶಿಲೆ, ಕೊಂಬು, ಕೋಡು:-ಸೂರತ್ಕಲ್ಲು, ಮಂಚಕಲ್ಲು, ಬೇಕಲ, ಕಮಲಶಿಲೆ, ನರಿಕೊಂಬು, ಕುಮ್ರಗೋಡು, ಬಲ್ಗೋಡು, ನಡುಗೋಡು, ಬಲಿಕೋಡು.

6) ತೋಟ, ಗದ್ದೆ, ಮಕ್ಕಿ, ಮಜಲು:-ಸಸಿಹಿತ್ಲು, ಕದಳಿತೋಟ, ತೋಟದಡಿ, ಕೆಸರುಗದ್ದೆ, ಮಂಡಗದ್ದೆ, ಹಾಲುಮಕ್ಕಿ, ಮದಮಕ್ಕಿ, ಗೋಳಿತಮಜಲು, ನೇರಮಜಲು, ಕನಕಮಜಲು, ತೋಟದಮಠ.

7) ಮಾಳ, ಮಲೆ, ಗುಡ್ಡ, ಬೆಟ್ಟ, ಪರ್ವತ:-ಮಾಳ, ಎಮರ್ಾಳ, ಪೆಮರ್ಾಲೆ, ಆನೆಗುಡ್ಡೆ, ಏಣಗುಡ್ಡೆ, ದರೆಗುಡ್ಡೆ, ಕೆರೆಬೆಟ್ಟು, ಸಂಗಬೆಟ್ಟು, ಮಲಂತಬೆಟ್ಟು, ಕುಂಜಬೆಟ್ಟು, ನರಹರಿಪರ್ವತ, ಕುಮಾರಪರ್ವತ, ಭಾಗಿಮಲೆ, ಪಿದಮಲೆ.

8) ಬಯಲು, ಕಾಡು, ಕಳ, ಅಂಗಳ:- ಪಾರ್ಕಳ, ಜಾರ್ಕಳ, ಹರೇಕಳ, ಐಕಳ, ಶಿರುಬೈಲು, ದೇರೆಬೈಲು, ಸೂರಂಬೈಲು, ಇರ್ವೈಲು, ಅಮಾಸೆಬೈಲು, ಕೊಳಕೆಬೈಲು, ಮಿತ್ತಬೈಲು, ಕೊಡಿಯಾಲಬೈಲು, ನೆಲ್ಲಿಕಾರು, ಕೋಟೆಕಾರು, ಅಜೆಕಾರು, ಕಡೆಕಾರು, ಎಕ್ಕಾರು, ಕರಿಅಂಗಳ, ಕೈರಂಗಳ, ಅಂಗಳ.

9) ಕೋಡಿ, ಕಟ್ಟೆ, ಬಾವಿ, ಹಳ್ಳ, ಹೊಳೆ, ತೋಡು, ಸಮುದ್ರ:- ಪಡುಕೋಡಿ. ಕೋಡಿ, ಸಿದ್ಧಕಟ್ಟೆ, ತೆಕ್ಕಟ್ಟೆ, ಕುಕ್ಕೆಕಟ್ಟೆ, ತಣ್ಣೀರಬಾವಿ, ಪೀಪಳ್ಳ, ಪಳ್ಳತಡ್ಕ, ಗೋಳಿಹೊಳೆ, ಕಾಲ್ತೋಡು, ಅರಂತೋಡು, ಗುರುವಾಯನಕೆರೆ, ಆನೆಕೆರೆ, ರಾಮಸಮುದ್ರ, ಒಡಕೆರೆ, ಕಟ್ಪಂಗೆರೆ?, ಹಳ್ಳಿಹೊಳೆ.

10) ಜೆ, ಅಜೆ, ಅಂಜೆ, ಅಜೆ:-ಕೋಣಜೆ, ಕುಕ್ಕುಜೆ, ಕಾಣಜೆ, ಪೆರಜೆ, ಪಾನಜೆ, ಪೆರ್ವಾಜೆ, ಕುಳಂಜೆ, ಮುಂಡಾಜೆ, ಪಾವಂಜೆ, ಹಾವಂಜೆ, ಕೆದಿಂಜೆ, ಕಾರಂಜೆ, ಮಾನಂಜೆ, ಬೆಳಂಜೆ.

11) ಕುಂಜ, ಮುಗರು:-ಬೆಳ್ಕುಂಜ, ಕುಕ್ಕುಂಜ, ಕುತುಕುಂಜ, ಕರ್ಕುಂಜೆ, ರಾಮಕುಂಜ, ಮೊಗರು, ಮೊಗ್ರು, ಕೊಲ್ಲಮೊಗರು, ಪಂಜಿಮೊಗರು, ಜೆಪ್ಪಿನ ಮೊಗರು.

12) ಅಡಿ, ಅಡಿ, ಅಡ್ಕ:-ತೋಟದಡಿ, ಗಾರ್ಡಡಿ, ಪಂಚೆತಡಿ, ಹಂದಾಡಿ, ಕಪ್ಪಾಡಿ, ಮುದ್ರಾಡಿ, ಗುಜ್ಜಾಡಿ, ಅತ್ರಾಡಿ, ಕೆರಾಡಿ, ಹಾಲಾಡಿ, ಬದಿಯಡ್ಕ, ಮುಲ್ಲಡ್ಕ, ಹರಿಹರಪಲ್ಲತಡ್ಕ, ಹತ್ಯಡ್ಕ, ಅರಿಯಡ್ಕ, ಕಲ್ಮಡ್ಕ

13) ಅಲ. ಆಲ, ಆರು:-ಕೆಂಚಾರು, ಅಂಡಾರು, ಕುಂಜಾರು, ಕುತ್ಯಾರು, ಅಡ್ಯಾರು, ಕೈರಾರು, ಮಿಜಾರು, ಕುಂಜಾಲ, ಉಳ್ಳಾಲ, ರೆಂಜಾಲ, ಕೆಮ್ರಾಲ, ಪುರಾಲ, ಹವರಾಲ, ಶಿರ್ಲಾಲ, ಆಯುಂಗಾಲ.

14) ಮಣ್ಣು, ಕಾನ, ಮಂಗಲ, ಪದವು:-ಕೊಡಮಣ್ಣು, ಬೆಳ್ಮಣ್ಣು, ಕೆಮ್ಮಣ್ಣು, ಹೆಮ್ಮಣ್ಣು, ತೊಡ್ಕಿಕಾನ, ಪಿಲಾರಕಾನ, ಹಿರಿಗಾನ, ಕಾನ, ಈಶ್ವರ ಮಂಗಲ, ಕಾಂತುಮಂಗಲ, ಬೀರಮಂಗಲ, ಹದವು, ಎಡಪ್ಪದವು, ಕುಪ್ಪೆಪದವು, ಕೊಂಪದವು, ಮುಳ್ಯಕಾಂತ ಮಂಗಲ.

15) ಕುಳ, ಇಲ:-ಕುಳ್ಯಾ, ಕುಳ, ಅರ್ಕುಳ, ಬಿಜಂಕಿಲ, ಪಿರಂಕಿಲ, ಉಚ್ಚಿಲ, ಐಲ, ಕಟಿಲ, ತೆಕ್ಕಿಲ, ಪೆರ್ನಂಕಿಲ, ನೆಟ್ಟಿಲ, ಮಾಣಿಲ. ಇಳಂತಿಲ, ಬಲ್ತಿಲ, ಕೆದಿಲ, ಪುತ್ತಿಲ, ಸುದಪಿಲ, ನಾಣಿಲ.

ಮೇಲಿನ ರೀತಿಯಲ್ಲಿ ವರ್ಗೀಕರಣಕ್ಕೆ ಸಿಕ್ಕದ ಅನೇಕ ಸ್ಥಳ ನಾಮಗಳಿವೆ. ಅವುಗಳ ಪಟ್ಟಿಯನ್ನು ಸ್ಥಳ ಅಭಾವದಿಂದ ಕೊಡುವುದು ಅಸಾಧ್ಯವಾಗಿದೆ. ಕೆಲವು ಹೆಸರುಗಳು ಹೇಗೆ ಬಂದಿರಬಹುದೆಂಬುದನ್ನು ಊಹಿಸುವುದು ಸಹ ಕಷ್ಟವಾಗಿದೆ. ಅನುಮಾನ ಮಾತ್ರದಿಂದ ಅವುಗಳ ಹುಟ್ಟನ್ನು ವಿಮರ್ಶಿಸಬೇಕಷ್ಟೆ.

ಈ ಸ್ಥಳನಾಮಗಳಿಂದ ಸೂಚಿತವಾಗುವ ಜನರ ಚರಿತ್ರೆಯನ್ನು ಈಗ ಪರಿಶೀಲಿಸೋಣ. ಈ ಲೇಖನದ ಮುಖ್ಯ ಉದ್ದೇಶವೇ ಈ ಪರಿಶೀಲನೆಯಾಗಿದೆ. [ಬಿಲ್ಲರು (ಬಿಲ್ಲವರು) ಕೋಲರು, ಮುಂಡರು, ಕೋಳಿಗಳು, ಬೇಡರು, ಕಳವರು, ಪಣಿಗಳು, ಹಣಬರು, ಕೊರಗರು, ಕುಡುಗಳು, ಕಣ್ಣರು (ಕರಣರು), ಮಲವರು (ಮಲ್ಲರು), ಅರಿಯರು, ಬೆಳ್ಳಾರರು (ವೆಲ್ಲಾಲರು), ರಟ್ಟರು, ಸಿದ್ಧರೂ, ಗುಜ್ಜರರು, ಶರಣರು, ನಾಡವರು— ಇವರ ಚರಿತ್ರೆ]

ಭೂಮಿಯನ್ನು ಅಗೆದು ಚಾರಿತ್ರಿಕ ವಿಷಯಗಳನ್ನು ಬೆಳಕಿಗೆ ತರುವ ಯಾವತ್ತೂ ಕಾರ್ಯವು ನಮ್ಮ ನಾಡಿನಲ್ಲಿ ಇಷ್ಟರತನಕ ನಡೆಯಲಿಲ್ಲ. (Archaeological excavations) ಹಳೆ ಬಾರಕೂರು ಮತ್ತು ಬಸರೂರು ಸ್ಥಳಗಳಲ್ಲಿ ಭೂಶೋಧನೆ ಮಾಡಿದಲ್ಲಿ ಅನೇಕ ಆಶ್ಚರ್ಯಕರವಾದ ವಿಷಯಗಳು ನಮಗೆ ಸಿಗದಿರಲಾರವು.

**1) ಕೋಲರೂ, ಮುಂಡರೂ, ಕೋಳಿಗಳೂ, ಬಿಲ್ಲರೂ:—**

ಪುರಾತನದ ಜನಗಳಲ್ಲಿ ಕೋಲರೆಂಬವರು ನಮ್ಮ ನಾಡಿನಲ್ಲಿದ್ದುದು ಕುಂದಾಪುರದ ತಾಲೂಕಿನ ಕೊಲ್ಲೂರು ಮತ್ತು ಮಂಗಳೂರು ತಾಲೂಕಿನ ಕೊಲ್ಲೂರು, ಕೋಲ್ನಾಡುಗಳ ಮೂಲಕವೂ, ಕೊಲ್ಯವೆಂಬ ಹೆಸರುಳ್ಳ ಊರಿನಿಂದಲೂ ಸೂಚಿತವಾಗುವುದು. ಅಂತೆಯೇ ಕೋಳಿಗಳೆಂಬ ಜನರ ಇರವು ಕೋಳಿಯೂರು, ಕೂಳೂರುಗಳ ಮೂಲಕವೂ, ಬಿಲ್ಲರ (ಬಿಲ್ಲವರ) ಅಸ್ತಿತ್ವವು ಬಿಲ್ಲಾಡಿ, ಬಿಲ್ಲಕೋಡಿಗಳ ಮೂಲಕವೂ (ಈ ಬಿಲ್ಲರು ಮುಂದಕ್ಕೆ ಬಿಲ್ಲವರೆನಿಸಿ ನಮ್ಮ ನಾಡಿನ ಪ್ರಧಾನ ಸಾಮಾಜಿಕ ಪದರಾಗಿದ್ದರು), ಮುಂಡರ ಹೆಸರಿನ ಸಂಬಂಧವುಳ್ಳ ಹೆಸರುಗಳು—ಮುಂಡಕೂರು, ಮುಂಡೂರು(ಈ ಹೆಸರಿನ ಎರಡು ಊರುಗಳು)ಮುಂಡಾಡಿ,ಪೆರ್ಮುಂಡೆ,ಮುಂಡಾಜೆ, ಮುಂಡಗರು, ಮುಂಡಡ್ಕ, ಮುಂಡಾಲ, ಮುಂಡತಾರು, ಮುಂಡಣಜೆ,—ಪ್ರಾಗೈತಿಹಾಸಿಕ ಜನರಾದ ಮುಂಡರ ವಾಸ್ತವ್ಯವನ್ನೂ ಸೂಚಿಸದಿರಲಾರವು. ಮಂಗಳೂರು ತಾಲೂಕಿನ ಪೊಳಲಿ (ಪುರಾಲ) ಎಂಬಲ್ಲಿ ರಾಜರಾಜೇಶ್ವರಿಯ ಪ್ರಾಮುಖ್ಯ ದೇವಾಲಯವಿದೆ. ಸ್ಥಳೀಯ ಪುರಾಣದ ಪ್ರಕಾರ ದೇವಿಯು ಚಂಡ,ಮುಂಡರ ವಧೆಯನ್ನು ಅಲ್ಲಿ ಮಾಡಿದ್ದೆಂದು ಐತಿಹ್ಯ. ಇದನ್ನು ಒಪ್ಪಬೇಕಾದರೆ ಅಖಿಲಭಾರತದಲ್ಲಿ ಪ್ರಚಾರವಿರುವ ಮಾರ್ಕಂಡೇಯ ಪುರಾಣದ ಪ್ರಕಾರ ಈ ದೇವಿಯ ಕಾರ್ಯರಂಗವು ಎಲ್ಲಿ ಎಂದು ನಿರ್ಧರಿಸುವವರೆಗೆ ತಾಳ್ಮೆಯಿಂದಿರಬೇಕಾಗುತ್ತದೆ. ಈ ಐತಿಹ್ಯವು ಸರಿಯಾಗಿದ್ದರೆ ಪೊಳಲಿಯು ಭಾರತದಾದ್ಯಂತ ಖ್ಯಾತಿಯನ್ನು ಹೊಂದಿದ ಕ್ಷೇತ್ರ ಸ್ಥಳವಾಗಬೇಕಿತ್ತು. ಅದು ಏನೇ ಇರಲಿ. ನಮ್ಮ ನಾಡಿನಲ್ಲಿ ಮುಂಡರೆಂಬ ಇತಿಹಾಸದ ಪೂರ್ವದ ಜನರಿದ್ದರೆಂದೂ, ಅವರನ್ನು ಮುರಿಯಲು ತುರುವರು ಪರಾಕ್ರಮದಿಂದ ಹೋರಾಡಬೇಕಿತ್ತೆಂದೂ, ಆ ಪ್ರಯುಕ್ತ ಅವರು ದೇವಿಯನ್ನು ಆರಾಧಿಸಿದ್ದಿರಬಹುದೆಂದೂ (ತುರುಕಾರರ ಕುಲದೈವತಾ) ಅನುಮಾನದಿಂದ ತಿಳಕೊಳ್ಳಬಹುದು. ಅಂತೂ ಪ್ರಕೃತಕ್ಕೆ ಈ ವಿಷಯ ಮುಖ್ಯವಲ್ಲ. ನಮ್ಮನಾಡಿನ ಆದಿವಾಸಿಗಳಲ್ಲಿ ಬೇಡರೂ, ಕೊರವರೂ (ಕೊರಗರೂ) ಆಗಿದ್ದರು. ಬೇಡಡ್ಕ, ಕೊರವಾಡಿ ಊರುಗಳು ಅವರ ಬಾಳ್ವೆಯ ಕುರುಹುಗಳೇ ಆಗಿವೆ. ಅಂತೂ ಈ ಕೋಲರೂ, ಬಿಲ್ಲರೂ, ಬೇಡರೂ ಒಂದೇ ಗುಂಪಿಗೆ ಸೇರಿದವರೆಂದು ತೀರ್ಮಾನಿಸಬಹುದು.

**2) ಪಣಿಗಳೂ, ಮಲ್ಲರೂ, (ಮಲವರೂ, ಮಾಲರೂ)**

ಪಣಿಗಳೆಂಬ ಜನರು ಬಹಳ ಪ್ರಾಕ್ಕಾಲದವರು. ಯದುತುರ್ವಸರಂತೆ ಇವರು ಋಗ್ವೇದದಲ್ಲಿ ಆಗಿಂದಾಗ್ಯೆ ಕಾಣಿಸಿಕೊಳ್ಳುವ ಜನ. ಆರ್ಯರ ಪರಮ ಶತ್ರುಗಳಾಗಿದ್ದು, ಅವರ ದನಗಳನ್ನು ಒಯ್ದುಕೊಂಡು ಹೋಗುವ ಇವರು ಅವರಲ್ಲಿ ಯಾವ ಸಂಧಾನಕ್ಕೂ ಎಡೆಗೊಡದವರಂತೆ. ಪಂಜಾಬದತ್ತ ಇವರು ಋಗ್ವೇದ ಕಾಲದಲ್ಲಿ ವಾಸವಾಗಿದ್ದುದು ಕಂಡುಬರುತ್ತದೆ. ಬೆಳಗಾವ್ ಜಿಲ್ಲೆಯಲ್ಲಿ ತರುಕಾರರೂ, ಪಣಿಗಳೂ ಈಗಲೂ ಒಟ್ಟೊಟ್ಟಿಗೆ ಇರುವರಂತೆ. ದಕ್ಷಿಣ ಕನ್ನಡದಲ್ಲಿ ಈ ಪಣಿಗಳು ಇದ್ದ ಕುರುಹು ಪಣಿಯಾಡಿ, ಪಣಿಯಾಲ, ಪಣಪಿಲ, ಪಣಂಬೂರು, ಪನಿಮಾರು (ಪಾಣತ್ತಡಿ? ಪಾನಿತ್ತೂರು?, ಪಾನಜೆ?) ಎಂಬ ಸ್ಥಳನಾಮಗಳಿಂದ ಸೂಚಿತವಾಗುವುವು ಎಂಬುದು ವಿದ್ವಂಸರ ಅಭಿಪ್ರಾಯ. ಈ ಪಣಿಗಳು ಹಣಬರೆಂಬ ನಾಮಾಂಕಿತರೂ ಆಗಿದ್ದಾರೆ. ನಮ್ಮ ತುಳುನಾಡಿನಲ್ಲಿಯೂ ತುರುಕಾರರೂ, ಪಣಿಗಳೂ ಹಿಂದಕ್ಕೆ ಒಟ್ಟಿಗಿದ್ದುದು ಒಂದು ರಹಸ್ಯಪೂರ್ಣವಾಗಿದೆ.

ಮಲ್ಲರೆಂಬ ಪರಾಕ್ರಮಿ ಜನರ ಕೇಂದ್ರಗಳು ನಮ್ಮ ನಾಡಿನಲ್ಲಿವೆ. ಇವರು ಮೈಸೂರಿನ ಕಡೆಯಿಂದ ಬಂದಿರಬೇಕು. ಕೆಳದಿಯ ನಾಯ್ಕರ ಆಳ್ವಿಕೆಯಲ್ಲಿ ಇವರು ಯೋಧರಾಗಿದ್ದರು. ಅಂತೂ ಇವರ ಮೂಲವು ಬಹು ಪ್ರಾಚೀನ. ಇಂದಿಗೂ ಇವರ ಕುಟುಂಬಗಳು ನಮ್ಮ ನಾಡಿನ ಹೊಸ ದುರ್ಗದ ಕಡೆ ಕೆಲವಿವೆ. ಇವರ ಊರುಗಳು ಮಾಲಾಡಿ, ಮಾಳ, ಮಲವೂರು, ಮಲ್ಲಾರು, ಮಾಲೂರು, ಮಾಲಾಜೆ, ಮಾಲೇಶ್ವರ, ಮಾಲ್ಲ, ಮಾಲೋಡಿ, ಮಾಲಬೆಟ್ಟು.

**3) ಕುಡುವರೂ, ಕನ್ನರೂ, ಕಳ್ಳರೂ:** -

ದನಗಾರಿಕೆಯ ನಂತರದ ಹಂತವೇ ಬೇಸಾಯ. ಬೇಸಾಯವನ್ನು ಪ್ರಾರಂಭಿಸಿದವರೆಂದರೆ ಕುಡುವರು (ಕುಡಿಗಳು, ಕುಡುಗಳು) "ಪಟ್ಟಿ—ಪಾಡಿಯು ನಮ್ಮ ನಾಡಿನ ಮೊದಲಿಗರ ಆರಂಭದ ಪಾಡು ಸೂಚಿಸುವ ಪದವಾಗಿರುವಂತೆ ಕುಡಿ ಅಥವಾ ಕುಡು ಎಂಬುದು ಅವರ ಮುಂದಿನ ಮಟ್ಟವನ್ನು ನಿರ್ದೇಶಿಸುವ ಶಬ್ದವಾಗಿದೆ." ('ಕನ್ನಡ ಕತೆ'—ಶಂ. ಭಾ. ಜೋಶಿ) ಒಕ್ಕಲತನದ ಆರಂಭವನ್ನು ವ್ಯಕ್ತಪಡಿಸುವ ಅರ್ಥವು ಕುಡಿ ಅಥವಾ ಕುಡು ಎಂಬ ಪದದಲ್ಲಿ ಅಡಕವಾಗಿದೆ. ಆದುದರಿಂದಲೇ ಕುಡುವವೆಂದರೆ ಒಕ್ಕಲು. ನಮ್ಮ ನಾಡಿನ 'ಒಕ್ಕೆಲ್ಮೆ' (ನಾಡವರು) ಎಂಬವರು ಈ ಕುಡುವರೇ ಆಗಿದ್ದಾರೆ. 'ಕುಡು ಒಕ್ಕಲಿಗ' ಎಂದರೆ ಮೈಸೂರಿನತ್ತ ಉತ್ತಮ ಬೇಸಾಯಗಾರರು. ಈ ಮೊದಲು ವಿವರಿಸಿದಂತೆ ಪಾಡಿಗಳಿತ್ಯಾದಿ ದನಗಾರರ ನೆಲೆಯನ್ನೂ, ಸೂಚಿಸುವಂತೆ 'ಕುಡಿ—ಗುಡಿ'ಗಳು ನಮ್ಮ ಒಕ್ಕಲಿಗರ ಆರಂಭವನ್ನು

ಹೇಳುವ ಊರುಗಳಾಗಿವೆ. ಈ ಕುಡಿ ಕುಡು ಎಂಬ ಪದಗಳು ಕಾಲಾಂತರದಿಂದ ಕೊಡು, ಗೊಡು, ಕೋಡು, ಗೋಡು ಎಂಬ ರೂಪ ತಾಳಿದರೂ ಅವೆಲ್ಲ ಒಂದೇ ಬಳಗಕ್ಕೆ ಸೇರಿದ ಪದಗಳು ಎಂದು ತಿಳಿಯಬೇಕು. ಈ ಕೆಳಗಿನ ಊರುಗಳು ಈ ಕುಡಿಗಳ, ಕುಡುವರ ನೆಲೆವೀಡಾಗಿದ್ದುವು. ಕೊಡಿಯಾಲ (ಕುಡಲ—ಕೂಡಲವೆಂಬುದು ತಪ್ಪು)ಕುಡುಮ, ಕುಡುಪು, ಕೊಡಿಕಲ್, ಕೋಡು, ಕುಡುಂಬೂರು, ಕುಡಂಬೆಟ್ಟು, ಕೊಡಮಣ್ಣು, ಕುದಿ? ಕುದಿಗ್ರಾಮ?, ಕೊಡವೂರು, ಕೊಡ್ಲಾಡಿ, ಕುಡುಂಪುರ, ಕೊಡಗಲ, ಕೊಡಂಗಳ, ಕೊಡಕಾಟ, ಕೊಡೊತ್ತಲ, ಕುಡಂಬಾರ್, ಕೊಡಿಂಬಾಳ, ಕುಡಿಪಾಡಿ, ಕೊಡಿಯಾಲ (ಪುತ್ತೂರು ತಾಲೂಕು), ಕುಡಿಯಾಡಿ, ಕುಡೆಯಾಡಿ, ಕುಡುಕೊಲಿ, ಕುಡುಮುಂದೂರು. ಈ ಕುಡುವರು ಗೌಡಸಾರಸ್ವತರಲ್ಲಿ ಮೋಲ್ ಹೆಸರಿನಿಂದ ಪ್ರಸಿದ್ಧರಾಗಿರುವುದರ ವೈಶಿಷ್ಟ್ಯವು ಅವರು ಮೊತ್ತ ಮೊದಲು ಕೃಷಿಕರಾಗಿದ್ದುದನ್ನೇ ಸೂಚಿಸುತ್ತದೆ. ಉದ್ಯೋಗ ಪರವಾಗಿ ಬಂದ ಮೋಲ್ ಹೆಸರಿದು. ಬ್ರಾಹ್ಮಣ್ಯಕ್ಕೂ, ಇದಕ್ಕೂ ಪರಸ್ಪರ ಶತ್ರುತ್ವವಿಲ್ಲವೆಂದು ನನ್ನ ಅಭಿಪ್ರಾಯ.

ಇವರೆಲ್ಲರಿಗಿಂತಲೂ ಪ್ರಬಲರಾಗಿದ್ದವರೆಂದರೆ ಕನ್ನರು ಯಾ ಕರಣರು. ಕನ್ನರು (ಕಣ್ಣರು—ಕರಣರು) ಎಂದರೆ ಯಾರು, ಅವರ ಮೂಲವನ್ನು ಎಲ್ಲಿಯ ವರೆಗೆ ಕೊಂಡು ಹೋಗಬಹುದು ಎಂಬೀ ವಿಚಾರಗಳನ್ನು ಶ್ರೀ ಶಂ. ಭಾ. ಜೋಶಿಯವರು ಅವರ ಸಂಶೋಧನಾಗ್ರಂಥಗಳಾದ 'ಕಂನಾಡಕತೆ' ಮತ್ತು 'ಕನ್ನಡದ ನೆಲೆ' ಹಾಗೂ ಹಾಲು ಮತ ದರ್ಶನ—ಇವುಗಳಲ್ಲಿ ಕೂಲಂಕಷವಾಗಿ ವಿವೇಚಿಸಿದ್ದಾರೆ. ಪ್ರಕೃತಕ್ಕೆ ನನ್ನ ಕೆಲಸವೆಂದರೆ ಈ ಕನ್ನರು (ನಮ್ಮ ಇಡೀ ಕಂನಾಡಿಗೇನೇ ಹೆಸರನ್ನು ತಂದು ಕೊಟ್ಟವರು) ನಮ್ಮ ತುಳು ನಾಡಿನಲ್ಲಿ ಇದ್ದಿರಬೇಕು, ಇದ್ದರು, ಆ ಕಾರಣದಿಂದಾಗಿ ಕ್ರಿ. ಪೂ. ದಲ್ಲಿ ನಮ್ಮಾ ತುಳುನಾಡು ಕಂನಾಡಿನ ಭಾಗವಾಗಿಯೇ ಇತ್ತು ಎಂಬುದರ ಪ್ರತಿಪಾದನೆಯಷ್ಟೆ. ಮನುಸ್ಮೃತಿಯಲ್ಲಿ ಉಲ್ಲೇಖಿತರಾದ ಕರಣರೂ, ಮತ್ಸ್ಯ ಪುರಾಣದಲ್ಲಿ ಬರುವ ಕರ್ಣರೂ ನಮ್ಮ ಕಂನಾಡಿನ ಆದ್ಯಂತ ಪಸರಿಸಿದ್ದ ಕನ್ನರೇ ಆಗಿದ್ದಾರೆ. ಮತ್ಸ್ಯಪುರಾಣದಲ್ಲಿ ಇವರು ತುರ್ವಸುವಿನ ಪೀಳಿಗೆಯವರೆಂದು ಹೇಳಿದೆ. (ಮತ್ಸ್ಯ 45-5) ಆದುದರಿಂದ ಈ ಕನ್ನರು ಕಂನಾಡಿನ ಹಟ್ಟಿಕಾರರ ಒಂದು ಪ್ರಭೇದವೆಂದೇ ಹೇಳಬೇಕಾಗುತ್ತದೆ. ತುರುಕಾರರೊಡನೆ ಈ ಕನ್ನರು ನಮ್ಮ ಜಿಲ್ಲೆಯಲ್ಲಿರುವುದೂ ಸಹಜವೆ? ಈ ಕನ್ನರು ನಾಡವರಾದ ಕಾಲದಲ್ಲಿ (ಕ್ರಿ. ಶಕದ ಆದಿಯ ಶತಮಾನಗಳಲ್ಲಿ) ಕಂನಾಡು ಎಂಬ ಹೆಸರು ಬಳಕೆಯಲ್ಲಿ ಬಂದಂತೆ ಕಾಣುತ್ತದೆ.

ಕನ್ನರ ನಮ್ಮ ತುಳುನಾಡಿನ ಎಡೆಗಳಾವುವು? 1) ಕನ್ನರಪಾಡಿ 2) ಕನ್ನಾಡಿ 3) ಕನ್ಯಾನ (ಈ ಹೆಸರಿನ ಮೂರು ಊರುಗಳಿವೆ.) 4) ಕಣ್ಣೂರು (ಎರಡು ಊರು

ಗಳು) 5) ಕನ್ನಂಗಾರ 6) ಕನ್ನಂಗಾಡು 7) ಕನಂಜಾರ 8) ಕನಯಾಲ 9) ಕಣಿಯೂರು 10) ಕನಪಾಡಿ. ಮಾತ್ರವಲ್ಲದೆ ಕಂದೂರು, ಕಂದಾವರ, ಕಂಕನಾಡಿ, ಕಂಡಿಗ— ಈ ಹೆಸರುಗಳಲ್ಲಿ ಇರುವ 'ಕನ್' ಎಂಬ ಮೂಲಪದವು ಕನ್ನರ ಕುರುಹನ್ನೇ ತಿಳಿಸುವುವುಗಳೆಂದು ನನಗನಿಸುತ್ತದೆ. ಕನ್ನರ'ಒಂದು ಊರು 'ಕಣ್ವತೀರ್ಥ' ವಾಯಿತೋ ಏನೋ? ಈ ಊರುಗಳು ನಮ್ಮ ತುಳುನಾಡಿನಲ್ಲಿ ಎಲ್ಲಾ ಕಡೆಯಲ್ಲಿ ಪಸರಿಸಿಕೊಂಡಿವೆ. ಹೀಗಾದುದರಿಂದ ನಮ್ಮ ನಾಡು ತುರುಕಾರರ ನಾಡು ಎಂದಿರುವಂತೆ,ಅದು ಕಂನಾಡೂ ಆಗಿದೆಯೆಂದು ಧಾರಾಳವಾಗಿ ಹೇಳಬಹುದು.

ಈ ಕನ್ನರೊಡನೆ ವಿವೇಚಿಸಲ್ಪಡುವ ಇನ್ನೊಂದು ಜನ ಕಳವರು ಯಾ ಕಳ್ಳರು. ಈ ಕಳವರೆಂದರೆ ದ್ರಾವಿಡ ಶಾಖೆಯ ಅತಿ ಪ್ರಾಚೀನ ಜನಾಂಗಗಳಲ್ಲೊಂದು. ಈ ಕಳವರು ಕನ್ನರಿಗಿಂತ ಮೊದಲಿನವರೆಂದೇ ಹೇಳಬಹುದು. ಇವರೂ ಗೋವಳರೇ, ತುರುಕಾರರೇ. ದನಗಳೇ ಇವರ ಸಂಪತ್ತು. ಪರಾಕ್ರಮ ಇವರೊಡನೆ ಆದರ್ಶವನ್ನು ಪಡೆದಿತ್ತು. ಅತಿ ಪುರಾತನಕಾಲದಲ್ಲಿ ಪರರನ್ನು ಧಾಳಿಮಾಡಿ ಅವರ ಗೋ ಸಂಪತ್ತನ್ನು ಕೊಂಡೊಯ್ಯುವುದರಲ್ಲಿ ಆ ಜನ ಸಮುದಾಯಕ್ಕೆ ಹೆಮ್ಮೆಯ ಸಂಗತಿಯಾಗಿತ್ತು. ಅತಿ ಪುರಾತನ ತಮಿಳು ಸಾಹಿತ್ಯದಲ್ಲಿ 'ಕಳವರ' ಉಲ್ಲೇಖವಿದೆ. ಥರ್ಸಟನ್— ಇವರು ತಮ್ಮ ಸಂಗ್ರಹದಲ್ಲಿ ಕಳವರ 'ದನಗಳನ್ನು ಕೊಂಡುಹೋಗುವ ನೈಪುಣ್ಯ'ವನ್ನು ವಿವರಿಸಿದ್ದಾರೆ (Cattle-lifting skill) ಈ ಕಳವರು ಹಾಲು ಮತದವರು. 'ಕಳ್' ಎಂಬ ಪದಕ್ಕೆ'ಹಾಲು'ಎಂಬ ಅರ್ಥವೇ ಮೂಲಾರ್ಥ. ಇವರ ದೈವತವು ಈಶ್ವರ. ಆದುದರಿಂದಲೇ ಈಶ್ವರನಿಗೆ ಕಲ್ಲೇಶ್ವರ, ಕಳ್ಳೇಶ್ವರ ಎಂಬ ಹೆಸರು ಬಂದಿವೆ. ಕಳ್ಳರಿಗೂ, ಕನ್ನರಿಗೂ ಸಗೋತ್ರವೆಂದೇ ಹೇಳಬಹುದು. ಕನ್ನರ ಆರಾಧ್ಯ ದೈವವೂ ಈಶ್ವರ (ಕನ್ನೇಶ್ವರ) ಈ ಕೆಳಗಿನ ಊರ ಹೆಸರುಗಳು ಹೇಗೆ ಬಂದುವೆಂಬುದನ್ನು ವಿಮರ್ಶೆ ಮಾಡಿದರೆ ಈ ಕಳವರು ನಮ್ಮ ನಾಡಿನಲ್ಲಿ ಹಿಂದಿನ ಕಾಲದಲ್ಲಿ ಇರಲಿಕ್ಕೆ ಬೇಕು ಎಂದು ತೀರ್ಮಾನಿಸ ಬಹುದು. (1) ಕಳವಾರ (2) ಕಳ್ವಾರ (3) ಕಾಳಾವರ (4) ಕಳನಾಡು (5) ಕಳತೂರು (6) ಕಳಂಜ. ಇನ್ನು ಕಲ್ಯ ಎಂಬ ಎರಡು ಊರುಗಳೂ, ಕಳಂದೂರು ಎಂಬ ಊರೂ ಈ ಕಳವರನೆಲೆಯ ಸೂಚನೆಯನ್ನೇ ಕೊಡುವುವು. ಈಗ ಕಳವರು ಎಂಬ ಶಬ್ದಕ್ಕೆ ನಿಂದಾಸ್ಪದವಾದ ಅರ್ಥವಿದ್ದರೂ, ಮೂಲದಲ್ಲಿ ಇದು ಜನಾಂಗವಾಚಕ ಪದವಾಗಿದ್ದು ಪರಾಕ್ರಮದಿಂದ ಜೀವಿಸುವ ನಿರ್ದೇಶವನ್ನು ಮಾಡುತ್ತಿತ್ತು. ತಮಿಳು ನಾಡಿನಲ್ಲಿ ಇವರ ಇರವನ್ನು ಸೂಚಿಸುವ ಹಲವು ಎಡೆಗಳಿವೆ. ಇವರ ಪಂಗಡವೇ ಜೀವಂತವಾಗಿ ಕೆಲವು ಕಡೆ ಇವೆ.

(4) **ಮೊಗೇರರೂ, ಬೆಳ್ಳಾರರೂ (ವೆಲ್ಲಾಲರೂ):—**

ಈ ಅಧ್ಯಾಯವನ್ನು ಅಂತ್ಯಗೊಳಿಸುವ ಮೊದಲು ಇನ್ನೆರಡು ಪ್ರಾಮುಖ್ಯ ಜನಕೂಟಗಳ ಕುರಿತಾಗಿ ಸ್ವಲ್ಪ ವಿವರವನ್ನು ಕೊಡಲಿಚ್ಛಿಸುತ್ತೇನೆ. ಬಹಳ ಹಿಂದಿನಿಂದ ಇಂದಿನವರೆಗೂ ಉಳಿದಿರುವ ವರ್ಗವು ಮೊಗೇರರದು. ಇವರು ಉದ್ಯೋಗದಲ್ಲಿ ಬೆಸ್ತರು. ಈ ಮೊಗೇರರೇ ಸಂಸ್ಕೃತೀಕರಿಸಲ್ಪಟ್ಟ ಹೆಸರಲ್ಲಿ 'ಮುದ್ಗರ'ರೆಂದು ಕರೆಯಲ್ಪಡುವರು. ಈ ಮೊಗೇರವೆಂಬ ಹೆಸರು ಬೇರೆಲ್ಲಿಯೂ ಕಂಡುಬರುವುದಿಲ್ಲ. ನಮ್ಮ ನಾಡಿನಲ್ಲಿ ಇವರು ಒಂದು ಮುಖ್ಯ ಪಂಗಡವಾಗಿದ್ದರು ಎಂಬುದು ಅವರ ಹೆಸರನ್ನು ಪಡೆದ ಹೆಸರುಗಳೇ ಸಾಕ್ಷಿಗಳು– ಮೊಗರು, ಮೊಗ್ರು, ಪಿಲಿಮೊಗರು, ಅಂಬ್ಲಮೊಗರು, ನರಿಮೊಗರು, ಕೊಲ್ಲಮೊಗರು, ಪಂಜಿಮೊಗರು, ಪುಚ್ಚಮೊಗರು, ಜೆಪ್ಪಿನಮೊಗರು, ಮೊಗ್ರಾಲ, ಮಡಿಮೊಗರು, ಮೊಗರುನಾಡು, ಪಟ್ಟದಮೊಗರು. ತುಳುಶಬ್ದ ಕೋಶದಲ್ಲಿ 'ಮೊಗರ್' ಎಂಬ ಪದಕ್ಕೆ ಹೊಯಿಗೆಯಿಂದ ಕೂಡಿದ (Sandy) ಎಂಬ ವಿಶೇಷಣದ ಅರ್ಥವನ್ನಿತ್ತರೂ, ಮೇಲೆ ನಮೂದಿಸಲ್ಪಟ್ಟ ಊರುಗಳು ನದಿತಟಾಕದಲ್ಲಿದ್ದು, ಮಳಲಿನಿಂದ ಆವರಿಸಲ್ಪಟ್ಟು ಈ ಗೌಣಾರ್ಥವನ್ನಿತ್ತರೂ ಆ ಪ್ರದೇಶಗಳಲ್ಲಿ ಮೀನು ಹಿಡಿಯುವ ವರ್ಗದವರು ಇರುವುದು ಸಹಜವಾದುದರಿಂದಲೂ, ಅವರ ಈ ಉದ್ಯೋಗದ ಹೆಚ್ಚಳದಿಂದಲೇ ಈ ಊರುಗಳಿಗೆ ಮೊಗರು ಎಂದು ಹೆಸರು ಬಂದಿರ ಬೇಕು.

ನಮ್ಮ ನಾಡಿನಲ್ಲಿ ಬೆಲ್ಲಾರರು (ಬೆಳ್ಳಾಳರು, ವೆಲ್ಲಾಲರು) ಒಂದು ಗಣ್ಯ ಜನ ಸಮುದಾಯವಾಗಿದ್ದುದು ದಾಖಲೆಯಲ್ಲಿ ಕಂಡುಬರುತ್ತದೆ. ಇವರು ವ್ಯವಸಾಯವೇ ಮುಖ್ಯ ಉದ್ದೇಶವಾಗಿರುವ ಜಾತಿಯವರು (A class of Agriculturists) ಮೈಸೂರತ್ತಣಿಂದ ಯಾ ತಮಿಳು ನಾಡಿನಿಂದ ಬಂದು ಇವರು ನಮ್ಮ ನಾಡಿನಲ್ಲಿ ನೆಲೆಮಾಡಿಕೊಂಡು ಅನೇಕ ಊರುಗಳಿಗೆ ತಮ್ಮ ಹೆಸರನ್ನಿತ್ತರು.

1) ಬೆಳ್ಳರಪಾಡಿ 2) ವಲ್ಲಾರ್ಪಟ್ನಂ (ನೀಲೇಶ್ವರು) 3) ವಳ್ಳಾಲ್ 4) ಬೆಳ್ಳಾರ 5) ಬೆಳ್ಳೂರಿ 6) ಬೆಳ್ಳಿಪಾಡಿ 7) ಬೆಳ್‌ವಾಯಿ 8) ಬೆಳಂಜೆ 9) ಬೆಳ್ಳಂಪಳ್ಳಿ 10) ಬೆಳ್ಳಾಪು. ಈ ಹೆಸರುಗಳಲ್ಲಿರುವ ಪೂರ್ವ ಪದವಾದ 'ಬೆಳ್'ಎಂಬುದನ್ನು ಪರಿಶೀಲಿಸಿದರೆ ವ್ಯವಸಾಯವೇಉದ್ಯೋಗವಾಗಿಜಾತಿಯಾಗಿರುವ ಬೆಳ್ಳಾಲರನೆಲೆಯನ್ನು ವ್ಯಕ್ತಪಡಿಸುವುದಲ್ಲವೇ?ಈ ಜನರು ಯಾವಂದಿನಿಂದ ನಮ್ಮಲ್ಲಿ ವಾಸಿಸುತ್ತಿದ್ದರೆಂದು ಹೇಳುವುದು ಸುಲಭವಲ್ಲ.ಅಂತೂ ಕೆಲ ಶತಮಾನಗಳಿಂದೀಚೆಗೆ ಇದ್ದಿರಬೇಕು.

5) **ಆರಿಯುರೂ, ಗುಜ್ಜರರೂ, ಭೈರವರೂ, ಸಿದ್ಧರೂ, ಶ್ರವಣರೂ, ಶರಣರೂ:**—"ಆರ್ಯರು ಹಟ್ಟಿಕಾರರ ಹೆಣ್ಣನ್ನು ಮದುವೆಯಾದುದರಿಂದಾಗಲೀ, ಹಟ್ಟಿಕಾರರು ಆರ್ಯರ ಕನ್ಯೆಯನ್ನು ಕೈ ಹಿಡಿಯುವುದರಿಂದಾಗಲೀ ಹುಟ್ಟಿದ ಸಂತತಿ

ಯಿಂದಲೇ ಮುಂದೆ ಆರಿಯರೆಂಬ ಜನವು ನಿರ್ಮಾಣವಾಯಿತು" (ಕಂನಾಡ ಕತೆ) ಮಹಾರಾಷ್ಟ್ರದ ಜನರು ಅರಿಯರು. ಇವರು ಸ್ವಲ್ಪ ಸಂಖ್ಯೆಯಲ್ಲಿ ನಮ್ಮ ನಾಡಿನಲ್ಲಿ ವಾಸಿಸುತ್ತಿದ್ದ ಕುರುಹು ಕೆಲವು ಊರುಗಳ ಹೆಸರುಗಳಿಂದ ತಿಳಿದುಬರುತ್ತದೆ. ಆರಿಕಾಡಿ, ಅರ್ಯಾಪು, ಅರ್ಯಾಲ, ಅರ್ಯಾಡಿ. ಅಂತೆಯೇ ಗುಜ್ಜಾಡಿಯು ಗುರ್ಜರರು ವ್ಯಾಪಾರಕ್ಕಾಗಲೀ, ಇತರ ಕಾರಣದಿಂದಾಗಲೀ, ಬಂದು ನೆಲೆಸಿದ ಎಡೆಯಾಗಿದೆ. ಈ ಗುಜ್ಜಾಡಿಯನ್ನು ಗುಜ್ಜೆ ಇರುವ ಪ್ರದೇಶವೆಂದು ಅರ್ಥವಿಸಿದಲ್ಲಿ ಸಮಂಜಸತೆ ಬರಲಾರದು". (ಗುಜ್ಜ-ಗುರ್ಜರ—ಗುಜ್ಜರ) ಇವರ ನೆಲೆಯ ಕುರಿತಾದ ದಾಖಲೆಯೂ ಇದೆ. 'ಭೈರಂಪಳ್ಳಿ' ಯು ಭೈರವರ ನಿವಾಸವನ್ನೂ ಸಿದ್ಧಕಟ್ಟೆ, ಸಿದ್ದಾಪುರ, ಸಿದ್ಧಬೈಲು, ಸಿದ್ಧೋಡಿ ಎಂಬೀ ಊರುಗಳು ಸಿದ್ಧರಿದ್ದ ಕುರುಹನ್ನೂ, ಅವರ ಕಡೆಗಿದ್ದ ಗೌರವವನ್ನೂ ಎತ್ತಿ ಹೇಳುವುವು. ಸಿದ್ಧರೆಂದರೆ ಸಾಲೋಕ್ಯ, ಸಾರೂಪ್ಯ, ಸಾಮಿಪ್ಯ, ಸಾಯುಜ್ಯ, ಮತ್ತು ಸಾಷ್ಟಿತ ಎಂಬ ತತ್ವಗಳಲ್ಲಿ (ಧ್ಯೇಯಗಳಲ್ಲಿ) ನಿಷ್ಣಾತರಾದ ಪವಿತ್ರ ಸಂತರು. ಈ ಭೈರವರ ಮತ್ತು ಸಿದ್ಧರ ಪ್ರಭಾವವು ನಮ್ಮ ನಾಡಿನ ಧರ್ಮದ ಮೇಲೆ ತುಂಬ ಬಿದ್ದಿದೆನ್ನಬೇಕು. (ಧರ್ಮದ ವಿಚಾರವು ಮುಂದಿನ ಲೇಖನಗಳಲ್ಲಿ ಬರುವುದು) ಅಂತೆಯೆ ಲಿಂಗವಂತರು ಇಕ್ಕೇರಿಯವರ ಕಾಲದಲ್ಲಿ ನಮ್ಮಲ್ಲಿ ಪ್ರಬಲರಾಗಿದ್ದು ವೀರಶೈವ ಧರ್ಮಕ್ಕೇ ಪ್ರಚಾರಕರಾದರು. ಶರಣವೆಂಬ ಊರು ಉಪ್ಪಿನಂಗಡಿ ತಾಲೂಕಿನಲ್ಲಿದೆ. ಇದು ವೀರಶೈವ ಪಂಥದ ನಂತರ ಸ್ಮಾರಕಕ್ಕಾಗಿಯಾಗಲೀ, ಅಲ್ಲಿ ಅವರು ಪ್ರಾಮುಖ್ಯರಾಗಿದ್ದುದರಿಂದಾಗಲೀ ಬಂದ ಹೆಸರಿರಬೇಕು.

ತುಳುನಾಡು ಜೈನರಿಗೆ ಕಾಶಿ. ಅವರ ಪ್ರಾಚೀನತೆಯನ್ನು ಪ್ರಾಚೀನ ವರ್ಚಸ್ಸನ್ನು ಸವಣಾಲ ಮತ್ತು ಸವಣೂರು (ಮತ್ತು ಸಾಣೂರು?) ಎಂಬ ಹಳೆ ಹೆಸರುಗಳು ತಿಳಿಸುತ್ತವೆ (ಸವಣ-ಶ್ರಮಣ)

ನಮ್ಮ ವಿಚಾರ ಸರಣಿಯಲ್ಲಿ ಸೇರಬೇಕಾದ ಪ್ರಾಮುಖ್ಯವಾದೊಂದು ಅಂಗವು ಉಳಿದಿದೆ. ಇದೇ ನಾಡವರ ವಿಮರ್ಶೆ. ನಾಡವರೆಂದರೆ ಯಾರು, ಅವರು ಹೇಗೆ ಅಸ್ತಿತ್ವಕ್ಕೆ ಬಂದು ಪ್ರಭಾವಶಾಲಿಗಳಾದರು, ಅವರಿಗೂ ಕಂನಾಡಿಗೂ ಏನು ಸಂಬಂಧ ಎಂಬೀ ವಿಷಯಗಳ ಚರ್ಚೆಯನ್ನು ಮುಂದಿನ ಭಾಗದಲ್ಲಿ ಮಾಡಲಿರುವೆನು. ತುಳುವರ ವಿಶಿಷ್ಟತೆ ಹಾಗೂ ಸಂಸ್ಕೃತಿಯ ರೂಪವೆಂತು ಎಂಬುದನ್ನು ನಾಡವರ ಕೂಲಂಕಷವಾದ ಸಂಶೋಧನೆಯಾಗದೆ ಉತ್ತರಿಸಲು ಸಾಧ್ಯವಿಲ್ಲ. ಇಷ್ಟರಲ್ಲೇ ಒಂದು ಸತ್ಯ ಸಂಗತಿಯು ಓದುಗರಿಗೆ ಮನವರಿಕೆಯಾಗಿದ್ದಿರಬಹುದು. ತೌಳವ

ಸಂಸ್ಕೃತಿಯು ಅಖಂಡ ಕಂನಾಡಿನ ಸಂಸ್ಕೃತಿಯ ಒಂದು ಅಂಗವೇ ಹೊರತು ಪ್ರತ್ಯೇಕವಾದ, ತನ್ನದೇ ಆದ ವಿಶಿಷ್ಟತೆಯನ್ನೊಳಗೊಂಡ ಸಂಸ್ಕೃತಿಯಲ್ಲವೆಂದು. ಇದರ ಸಂಪೂರ್ಣ ವಿಮರ್ಶೆಯು ಮುಂದಕ್ಕೆ ಬರುವುದು.

ವಿ. ಸೂ:—ಮೇಲೆ ಕೊಟ್ಟ ಸ್ಥಳನಾಮಗಳನ್ನು ಅರ್ಥಮಾಡಿಕೊಳ್ಳುವರೆ ಈ ಕೆಳಗಿನ ಸೂಚಕ ಪಟ್ಟಿಯನ್ನಿತ್ತಿದ್ದೇನೆ. ಕೆಳಗೆ ಕೊಟ್ಟ ಅರ್ಥಗಳು ಸಂದರ್ಭೋಚಿತವಾದುವುಗಳೇ ಹೊರತು ತೀರ್ಮಾನಗಳಲ್ಲ.

1) ಪುರ– ಊರು (Dwelling Place) ಪಟ್ಟಣವೆಂಬರ್ಥ ಗೌಣ.

2) ಕೋಣಿ (ಕೋಣೆ)–ಮೂಲೆಯಲ್ಲಿರುವ ಸ್ಥಳ (ಜಾಗ)

3) ಮಾಳ— ಏರಾಗಿದ್ದು ಸಮತಟ್ಟಾದ ಪ್ರದೇಶ; ಒಂದು ವಿಶಿಷ್ಟ ವರ್ಗದ ಜನರ ಹೆಸರೂ ಆಗಬಹುದು.

4) ಕೋಡಿ—ಮೂಲೆಯಲ್ಲಿರುವ ಊರು (ಮೂಲೆ) ಕೋಟದ ಇನ್ನೊಂದು ರೂಪವೆಂದೂ ಹೇಳಬಹುದು.

5) ಅಜೆ –(ಅಂಜೆ)–ಕಾಲಗುರುತು; ಹಾದಿ; ಹೋದದಾರಿ; ಕುರುಹು(Foot print, track, trace)

6) ಕುಂಜ–ಗಿಡ, ಬಳ್ಳಿ, ಬಲ್ಲೆಗಳಿಂದ ಕೂಡಿದ ಗುಡ್ಡಪ್ರದೇಶ (Hillock)

7) ಅಡ್ಕ (ಅಡಕ)—ಹೂಳಿಡುವ ಪ್ರದೇಶ, ಕೊಳಕು ಪ್ರದೇಶ.

8. ಅಡಿ— ತಳ, ಕೆಳಗಿನ ಜಾಗ

9. ಆಲ—ಆಲಯದ ತದ್ಭವವಾಗಬಹುದು; 'ಅಂತರಾಲ' ಎಂಬುದರಲ್ಲಿಯ ಅರ್ಥ ವಿಶೇಷವೂ ಹೊಂದಿಕೆಯಾಗಬಹುದು.

10. ಆರ—ಸ್ಥಳ; ಪ್ರದೇಶ; ವಾಸ್ತವ್ಯದ ಜಾಗವೆಂಬರ್ಥದಲ್ಲಿ ಉಪಯೋಗಿಸುವ ಪದ (ಆಗಾರ?) (A dwelling place)

11. ಮಂಗಲ— ವಾಸ್ತು ಶಾಸ್ತ್ರದಲ್ಲಿ ಕೋಟೆ ಎಂಬರ್ಥ.

12. ಕುಳ— ಸರೋವರ; ಕೆರೆ; ಕುಲ (family)

13. ಇಲ ನಾಮಪದದ ಅಂತ್ಯದಲ್ಲಿ ಉಂಟು ಎಂಬ ಅರ್ಥದಲ್ಲಿ ಉಪಯೋಗಿಸುವ ಪ್ರತ್ಯಯ.

14. ಕಾರು ಪೂರ್ವಪದವಾಗಿ 'ಮಳೆ'ಯನ್ನೂ ಪರಪದವಾಗಿ 'ಕಾಡ' ನ್ನೂ ನಿರ್ದೇಶಿಸುವುದು.

# ನಾಡವರ (ಬಂಟರ) ಮೂಲ

"ಬಂಟರು ದಕ್ಷಿಣ ಕನ್ನಡ ಜಿಲ್ಲೆಯ ದಕ್ಷಿಣ ಭಾಗದಲ್ಲಿ ಪಯಸ್ವಿನಿ ನದಿಯಿಂದ ಉತ್ತರ ದಿಕ್ಕಿನಲ್ಲಿ ಉಡುಪಿಯ ವರೆಗೂ, ನಾಡವರು ಉಡುಪಿಯಿಂದ ಉತ್ತರಕ್ಕೆ ಬೈಂದೂರಿನ ವರೆಗೂ ವ್ಯಾಪಿಸುತ್ತಾರೆ. ಇವರು ಬಹಳ ಪುರಾತನ ಕಾಲದಿಂದ, ಎಂದರೆ ಬ್ರಾಹ್ಮಣರು ದಕ್ಷಿಣ ಜಿಲ್ಲೆಗೆ ಬರುವ ಮೊದಲೇ ಇಲ್ಲಿ ಬಂದು ನೆಲೆ ನಿಂತ ಒಂದು ವಂಶದವರು. ಇವರು ಈ ಜಿಲ್ಲೆಯಲ್ಲಿ ಪುರಾತನ ಕಾಲದಿಂದಲೇ ಇದ್ದರೋ ಅಥವಾ ಉತ್ತರ ದೇಶದಿಂದ ಇಲ್ಲಿಗೆ ಬಂದ ದ್ರಾವಿಡರ ಒಂದು ಶಾಖೆಯವರೋ ಎಂಬುದು ಸರಿಯಾಗಿ ತಿಳಿದು ಬರುವದಿಲ್ಲ. ಆದರೆ ಇವರ ಪದ್ಧತಿಗಳನ್ನು, ದೇಹ,ಆಕೃತಿ ಮೊದಲಾದುವನ್ನು ನೋಡಿದರೆ ಇವರು ದ್ರಾವಿಡ ವಂಶಕ್ಕೆ ಸೇರಿದ ಒಂದು ಕುಟುಂಬದವರೆಂದು ಎಣಿಸಬಹುದು. ಇವರು ಅಲ್ಲಲ್ಲಿ ಸಣ್ಣ ಸಣ್ಣ ರಾಜ್ಯಗಳನ್ನು ಸ್ಥಾಪಿಸಿ ಆಳಿಕೊಂಡಿದ್ದರು. ಮಹಾಧೈರ್ಯ ಶಾಲಿಗಳು; ಕಾಯಶಕ್ತಿಯುಳ್ಳವರು; ರಾಜ್ಯಭಾರವನ್ನು ಮಾಡಲಿಕ್ಕೆ ಯೋಗ್ಯತೆಯುಳ್ಳವರು; ಆದುದರಿಂದ ಇವರು ಈ ಜಿಲ್ಲೆಯಲ್ಲಿರುವ ಬೇರೆ ದ್ರಾವಿಡ ವಂಶದವರನ್ನು ತಮ್ಮ ಕೈಕೆಳಗೆ ಇಟ್ಟುಕೊಂಡು ಆಳುತ್ತಿದ್ದರು. ಈಗಲೂ ಎಲ್ಲಾ ಶೂದ್ರ ಜಾತಿಯವರು ಇವರನ್ನು ಮರ್ಯಾದೆಯಿಂದ ಕಾಣುತ್ತಾರೆ.

ಕ್ರಿ.ಪೂ.ಮೂರನೇ ಶತಮಾನದಲ್ಲಿ ಜೈನ ಮತವು ಈ ಜಿಲ್ಲೆಯಲ್ಲಿ ಎಂದರೆತುಳು ರಾಜ್ಯದಲ್ಲಿ, ಜೈನಮತ ಬೋಧಕರಿಂದ ಬೋಧಿಸಲ್ಪಟ್ಟಾಗ ಅನೇಕರು ತಮ್ಮ ಮತವನ್ನು ಬಿಟ್ಟು ಜೈನ ಮತಸ್ಥರಾದರು.[1] ಅಂದಿನಿಂದ ಜೈನ ಮತವನ್ನು ಅವಲಂಬಿಸಿದವರಿಗೆ 'ಮಾಸಾಡಿ'ಕ ಜೈನರೆಂದೂ ಹೆಸರಾಯಿತು. ಕಿ.ಪೂ.200ರಿಂದ ಕ್ರಿ.ಶ.600 ವರೆಗೆ ಆಳಿದ ಕದಂಬ ಅರಸರ ಕಾಲದಲ್ಲಿಯೂ,[2] ಕ್ರಿ. ಶ. 578ರಿಂದ 757ರ ವರೆಗೆ ಆಳುತ್ತಿದ್ದ ಚಾಳುಕ್ಯರ ಕೈಕೆಳಗೂ, ಕ್ರಿ. ಶ. 754ರಿಂದ 973ರ ವರೆಗೆ ಆಳಿದ ರಾಷ್ಟ್ರಕೂಟ ಅರಸರ ಕಾಲದಲ್ಲಿಯೂ, ಕ್ರಿ. ಶ. 1047ರಿಂದ 1336ರ ವರೆಗೆ ಆಳುತ್ತಿದ್ದ ಹೊಯ್ಸಳ ಬಲ್ಲಾಳರ ಕಾಲದಲ್ಲಿಯೂ, ಕ್ರಿ. ಶ. 1336ರಿಂದ 1565ರ ವರೆಗೆ ಆಳಿದ ವಿಜಯನಗರದ ಅರಸುಗಳ ಕಾಲದಲ್ಲಿಯೂ, (ಇವರು) ದೊಡ್ಡ ದೊಡ್ಡ ಸೇನಾಧಿಪತಿಗಳಾಗಿಯೂ ಸೈನಿಕರಾಗಿಯೂ ಇದ್ದರು. ಈಗ ಇರುವ ಗುತ್ತುಗಳ ಯಜಮಾನರ ಹಿರಿಯಲ್ಲಿ ಪ್ರತಿಯೊಬ್ಬರು ಜೈನರಾಜರ ಸೇನಾಧಿಪತಿಗಳಾಗಿದ್ದರು. ಈಗಲೂ ಜೈನರಾಜರೂ ವಿಟ್ಲದ ಅರಸನೂ, ಕುಂಬಳೆಯ ಅರಸನೂ ರಾಜ್ಯವನ್ನು ಕಳಕೊಂ

ಡರೂ ಶಾಸ್ತ್ರಪ್ರಕಾರ ಪಟ್ಟವನ್ನೇರುವಸಮಯ ಅಯಾಯಸೇನಾಧಿಪತಿಗಳ ವಂಶದ ಗುತ್ತಿನವರು ಬರುವ ಪದ್ಧತಿಯಿದೆ. ಕೆಲವು ಕುಟುಂಬದವರಿಗೆ ರಾಜನ ಕೈಯಲ್ಲಿ ಪಟ್ಟದ ಕತ್ತಿಯನ್ನು ಕೊಡುವ ಹಕ್ಕೂ ಕೆಲವು ಕುಟುಂಬದವರಿಗೆ ಪಟ್ಟದ ಉಂಗುರವನ್ನು ಹಾಕಿ ಪಟ್ಟದ ಹೆಸರಿನಿಂದ ಕರೆಯುವ ಹಕ್ಕೂ, ಈಗಲೂ ಇವೆ. ಆ ಸಮಯದಲ್ಲಿ ಅರಸರು ಉಚಿತವಾಗಿ ಬಿಟ್ಟ ಮಾನ್ಯದ ಭೂಮಿಗಳನ್ನು ಈಗಲೂ ಅವರ ಸಂತತಿಯವರು ಅನುಭವಿಸಿಕೊಂಡು ಬರುತ್ತಾರೆ. ಕ್ರಿ. ಶ. 1560ರಿಂದ 1763ರ ವರೆಗೆ ಈ ಜಿಲ್ಲೆಯನ್ನು ಆಳಿದ ಇಕ್ಕೇರಿ ಅರಸರ ಕಾಲದಲ್ಲಿ ಇವರು ಹೆಚ್ಚಾಗಿ ಸೈನದಲ್ಲಿರಲಿಲ್ಲ. ಜೈನರೂ ಅವರ ಸೇನಾಧಿಪತಿಗಳಾದ ನಾಡವರೂ, ಬಂಟರೂ ತಮ್ಮ ಮೇಲೆ ಒಳಸಂಚನ್ನು ನಡೆಸಲಿಕ್ಕೆ ಸಾಕೆಂಬ ಭಯದಿಂದ ಇವರು ದೂರದೇಶದಿಂದ ರಾಮರಾಜಕ್ಷತ್ರಿಯರನ್ನು ತಂದು ಸೈನಿಕರಾಗಿ ನೇಮಿಸಿದರು. ಅಂದಿನಿಂದ(ಇವರು) ಬೇಸಾಯದ ಕಸುಬನ್ನೇ ಅನುಸರಿಸಿಕೊಂಡಿರುತ್ತಾರೆ. ತುಳು ರಾಜ್ಯದಲ್ಲಿ ಬ್ರಾಹ್ಮಣರ ಅನಂತರ 2ನೇ ಮರ್ಯಾದೆಯು ಎಲ್ಲಾ ದೇವಸ್ಥಾನಗಳಲ್ಲಿಯೂ ಭೂತಸ್ಥಾನಗಳಲ್ಲಿಯೂ ಇವರಿಗೆ ಸಲ್ಲುತ್ತದೆ ಇವರಲ್ಲಿ ಉತ್ತರದಲ್ಲಿರುವ ನಾಡವರೂ ದಕ್ಷಿಣದಲ್ಲಿರುವ ಬಂಟರೂ ಅಳಿಯ ಸಂತಾನ ಕಟ್ಟನ್ನೇ ಅನುಸರಿಸುತ್ತಾರೆ. ಪರಿವಾರ ಬಂಟರಿಗೆ ಮಕ್ಕಳ ಸಂತಾನ ಕಟ್ಟು. ಈಗಲೂ ಬಂಟರು ಬಹಳ ಐಶ್ವರ್ಯವಂತರಾಗಿರತ್ತಾರೆ" (ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ- ಯಂ. ಗಣಪತಿ ರಾವ್- Publish ed in 1923)

ooo ooo ooo ooo ooo ooo ooo

"ಬಂಟರು, ಅವರ ಈ ಹೆಸರೇ ತಿಳಿಯಪಡಿಸುವಂತೆ, ಮಲಬಾರಿನ ನಾಯರರಂತೆ, ಮೂಲತಃ ಸೈನಿಕ ವರ್ಗಕ್ಕೇ ಸೇರಿದವರಾಗಿರುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಉತ್ತರ ಭಾಗದಲ್ಲಿ ಇವರಿಗೆ, ಬಂಟರು ಎಂಬುದರ ಬದಲಿಗೆ ನಾಡವರು ಎಂಬ ನಾಮವಾಚಕವು ಉಪಯೋಗಿಸಲ್ಪಡುವುದರಿಂದ, ಲೋಗಾನರು ತಮ್ಮ ಗ್ರಂಥದಲ್ಲಿ ಮಲಬಾರಿನ ಪದ್ಧತಿಯನ್ನು ಸೂಚಿಸುವ ರೀತಿಯಲ್ಲಿ, ಇವರು ಪ್ರಾದೇಶಿಕ ವ್ಯವಸ್ಥೆಯನ್ನು 'ನಾಡು'ಗಳ ಮೂಲಕವಾಗಿ ಮಾಡುತ್ತಿದ್ದರೆಂದೂ ತಿಳಿಯಬಹುದಾಗಿದೆ. ಆದರೆ ಈ ತೆರನಾದ ಅವರ ಸಂಸ್ಥಾಪಕ ವ್ಯವಸ್ಥೆಯ ಕುರುಹುಗಳು ದೊರೆಯುವುದು ಈಗ ದುರ್ಬಲ. ಕಾರಣ ಈ ಜಿಲ್ಲೆಯು ವಿಜಯನಗರದ ಆಡಳಿತೆಗೆ ಒಳಪಟ್ಟಾಗ ಅನೇಕಾನೇಕ ಬದಲಾವಣೆಗಳಾಗಿ ಜನರ ಸಂಪರ್ಕ ಸಂಬಂಧಗಳಲ್ಲಿ ಇಲ್ಲಿಯ ಜೈನ ಸ್ಥಳೀಯ ಅಧಿಕಾರಿಗಳು ಬಂಟರಿಗಿಂತ ಹೆಚ್ಚಿನ ಸ್ವಾತಂತ್ರ್ಯವನ್ನೂ, ಪ್ರಭಾವವನ್ನೂ ಹೊಂದಿದವರಾದರೂ ಬಿದನೂರು ಅರಸರ ಕೈಕೆಳಗೂ ಮೈಸೂರು ಆಡಳಿತೆಯಕಾಲ

ದಲ್ಲಿಯೂ, ಈ ಸ್ಥಳೀಯ ಅಧಿಕಾರಿಗಳು ಸಂಪೂರ್ಣವಾಗಿ ಅಸ್ತಿತ್ವವನ್ನು ಕಳಕೊಂಡರೂ ಹಳೆಗಾಲದ ಬಂಟರ ರಾಜ್ಯ ವ್ಯವಸ್ಥೆಯು ಪುನರುತ್ಥಾನವನ್ನು ಹೊಂದಲಿಲ್ಲ.

ಈಗ ಬಂಟರು ಪ್ರಧಾನವಾಗಿ ಬೇಸಾಯಗಾರರಾಗಿರುವರು. ಆಸ್ತಿವಂತರಲ್ಲಿ (ಭೂಮಾಲಿಕರಲ್ಲಿ) ಪ್ರಾಮುಖ್ಯರಾಗಿದ್ದಾರೆ. ಬಿಲ್ಲವರನ್ನು ಹೊರತು ಸಮಾಜದಲ್ಲಿ ಬಹುಸಂಖ್ಯಾಕರಾಗಿದ್ದಾರೆ. ಆದರೆ ಅವರಲ್ಲಿ ಹತ್ತು ಸಾವಿರ ಮಂದಿ ಜೈನರಾಗಿರುವರು. ಈ ಜೈನರಿಗೂ ಮತ್ತು ಇತರ ಸಾಮಾನ್ಯ ಬಂಟರಿಗೂ (ಮಾಸಾದಿಕ ಬಂಟರು) ಇರುವ ವ್ಯತ್ಯಾಸವನ್ನು ಜೈನರ ಕುರಿತಾದ ವಿವರದಲ್ಲಿ ಕೊಟ್ಟಿದೆ. ಜೈನರ ಪ್ರಭುತ್ವಕಾಲದಲ್ಲಿ ಬಂಟರಲ್ಲಿ ಹೆಚ್ಚಿನವರು ಜೈನಧರ್ಮನಲ್ಲಿ ವಿಶ್ವಾಸಭಕ್ತಿಗಳನ್ನು ಈಗ ಇರುವುದಕ್ಕಿಂತ ಹೆಚ್ಚು ತೋರಿಸುತ್ತಿದ್ದಿರಬಹುದು. ಇವರು ಹಿಂದೂ ಮತ್ತು ಜೈನಧರ್ಮಗಳನ್ನಲ್ಲದೆ ಪ್ರಾಚೀನದ್ರಾವಿಡರ ಔಪಾಸನೆಯಾದ ಭೂತಾರಾಧನೆಯನ್ನೂ ಮಾಡುತಿದ್ದಾರೆ ಈಗ ಹಿಂದೂ ಧರ್ಮದಲ್ಲೇ ಭೂತಾರಾಧನೆಯು ಅಡಕವಾಗಿದೆ. ಈ ಜಾತಿಯಲ್ಲಿ ಈಗನಾಲ್ಕು ಒಳವಿಭಾಗಗಳಿವೆ.

1) ಮಾಸಾದಿಕ ಬಂಟರು—ತುಳುನಾಡಿನ ಸಾಮಾನ್ಯ ಬಂಟರು.

2) ನಾಡವರು ಯಾ ನಾಡ ಬಂಟರು—ಜಿಲ್ಲೆಯ ಉತ್ತರಭಾಗದಲ್ಲಿದ್ದು ಕನ್ನಡ ಮಾತನಾಡುವವರು.

3) ಪರಿವಾರ ಬಂಟರು--ಅಳಿಯಸಂತಾನ ಪದ್ಧತಿಯನ್ನು ಅವಲಂಭಿಸದಿರುವವರು.

4) ಜೈನ ಬಂಟರು—ಬಂಟರ ಮೂಲದ ಕುರಿತಾಗಿ ಒಂದು ನಿಶ್ಚಿತತೆ ಇನ್ನೂ ಬಂದಿಲ್ಲ. ಆದರೆ ಕ್ರಿ. ಶ.ದ ಆದಿಯಲ್ಲಿ ತುಳುವರಿಗೆ ಕೆಲವೊಮ್ಮೆ ಸ್ವತಂತ್ರರಾದ ಅರಸರಿದ್ದರೆಂದೂ, ಕೆಲವೊಮ್ಮೆ ಇವರು ಪಲ್ಲವರೂ, ಕದಂಬರೂ, ಚಾಲುಕ್ಯರೂ, ಕಲಚೂರಿಯರೂ ಮತ್ತು ಹೊಯ್ಸಳರೂ ಆದ ರಾಜರ ಪ್ರಭುತ್ವದ ಒಳಗೆ ಮಾಂಡಲಿಕರಾಗಿದ್ದರೆಂದೂ ತಿಳಿದುಬಂದಿದೆ. ಈ ಪರಿಸ್ಥಿತಿಯಲ್ಲಿ ಆಗಿಂದಾಗ್ಗೆ ಹೋರಾಟಗಳು ನಡೆಯುತ್ತಿದ್ದುವೆಂದೂ ಅವುಗಳಿಂದಾಗಿ ಈ ನಾಡವರಿಗೆ ಬಂಟರು (ಯೋಧರು) ಎಂಬ ಹೆಸರು ಬರಲು ಕಾರಣವಾಯಿತೆಂದೂ ತಿಳಿಯಬಹುದು. ಸಮಯ ಉರುಳಿದಂತೆ ಇವರು ಭೂಮಿಯ ಮಾಲಿಕರಾಗ ವುದರಲ್ಲಿ ಯಶಸ್ವಿಗಳಾದರು.................... ಬಂಟರು ದೃಢಕಾಯರಾದ, ಕಟ್ಟಾಳುಗಳಾದ, ಧೀರರಾದ ವಂಶಕ್ಕೆ (Race) ಸೇರಿದವರಾಗಿದ್ದು, ಪತನೆಯಲ್ಲಿ ಧೈರ್ಯವನ್ನು ಸ್ವತಂತ್ರತೆಯ ಲಕ್ಷಣಗಳನ್ನು ತೋರ್ಪಡಿಸುವವರೂ" ದೇಹ ಸೌಂದರ್ಯವನ್ನು ಹೊಂದಿದವರೂ

ಆಗಿರುತ್ತಾರೆ." (Madras Distirct Mannals—South Canara-by J·Storrock I C S. ಪುಟಗಳು 157ರಿಂದ 159ರವರೆಗಿನಭಾಷಾಂತರ)

ooo ooo ooo ooo

"ನಾಡವರು ಈಗಲೂ ತಮ್ಮ ವರ್ತನೆಯಲ್ಲಿ ಮಾನುಷತ್ವವನ್ನೂ, ಸ್ವಾತಂತ್ರ್ಯವನ್ನೂ ಉಳಿಸಿಕೊಂಡಿದ್ದಾರೆ. ಅವರು ದೇಹಬಲವನ್ನು ಹೊಂದಿದವರಿದ್ದಾರೆ. ದೃಢ ಕಾಯರಾಗಿದ್ದಾರೆ. ಅವರು, ಅವರ ಪೂರ್ವಜರು ಕದನಕಾಲದ ದಿನಗಳಲ್ಲಿ ತೋರ್ಪಡಿಸಿದಂತೆ, ತಮ್ಮ ಕತ್ತಿಗಳನ್ನೆತ್ತಿ ಹಿಡಿದು ನಡೆಯುವವರಾಗಿದ್ದಾರೆ. 'ಮಡಿದವನು ವಧಿಸಿದವನ ಅಂಗಳದಲ್ಲಿ ವಿಶ್ರಾಂತಿಸಿದನು' ಎಂಬ ನಾಣ್ಣುಡಿಯಂತೆ ಗಂಭೀರತೆಯನ್ನು ತೋರಿಸುತ್ತಾರೆ. ಹಿಂದಿನ ದಿನಗಳಲ್ಲಿ ಪ್ರತಿಯೊಬ್ಬ ಯೋಧನೂ ಖಡ್ಗ ಮತ್ತು ಗುರಾಣಿಗಳನ್ನು ಹೊತ್ತುಕೊಂಡಿರುವ ಸಮಯದ ಚಿತ್ರ ನೆನವರಿಸುವಂತೆ ಈಗಲೂ ತೋರಿಸುವಂತೆ ಕಂಡುಬರುತ್ತದೆ. ಬಂಟ ಸಮಾಜದ ಸ್ತ್ರೀಪುರುಷ ಈರ್ವರೂ ಆಸ್ಯಾಖಂಡದ ವಂಶಗಳಲ್ಲಿ ಅತ್ಯಂತ ಸುಂದರ ವ್ಯಕ್ತಿಗಳೂ, ಅಂದಚಂದದವರೂ, ಸೊಗಸಾದವರೂ, ಸುರೇಖಿಗಳೂ ಆಗಿದ್ದಾರೆ. (Castes and Tribes of South India by Thurston Vol. 1. ಪುಟ 149—ಭಾಷಾಂತರ)

ooo ooo ooo ooo

"ದೊರೆಯಾದ ಲೋಕಾದಿತ್ಯ ಮಯೂರವರ್ಮನು ಆ ಋಷಿವರ್ಯರಿಂದ ಧರ್ಮನೀತಿಗಳನ್ನು ಸರಿಯಾಗಿ ತಿಳಿದು ಜಾಣರಾದ ಮಂತ್ರಿಗಳನ್ನಿಟ್ಟು ಕೊಂಡು ಋಷಿವರರ ಮತದಂತೆ ಪ್ರಜೆಗಳನ್ನು ಪಾಲಿಸುತ್ತಿದ್ದನು. (ಬಾರಕೂರಿನಲ್ಲಿ) ಆಗ ಜಿನ ಮತಸ್ಥರಾಜನು ಹಿಂಸಾಪರನಾದ್ದರಿಂದ ಈ ರಾಜ್ಯದಲ್ಲಿರುವುದು ನಮಗೊಂದೂ ಸಲ್ಲದು. "ಯಥಾ ರಾಜಾ ತಥಾತಥಾ ಪ್ರಜಾ" ಎಂಬ ನ್ಯಾಯವಿರುವುದರಿಂದ ನಾವು ಇಲ್ಲಿಂದ ಬೇಗನೆ ಅನ್ಯದೇಶವನ್ನು ಸೇರುವುದು ಲೇಸೆನ್ನುತ್ತಿದ್ದರಲ್ಲದೆ, ಇವನು ರಾಜಸ್ಥಾನಕ್ಕೆ ಅಯೋಗ್ಯನೆಂತಲೂ ಗುಣುಗುಟ್ಟುತ್ತಿದ್ದರು. ಇದನ್ನು ರಾಜನು ತಿಳಿದು ಮನಸ್ಸಿನಲ್ಲಿ ವ್ಯಸನ ಪಟ್ಟು ಒಂದು ಮಹಾ ಸಭೆ ಮಾಡಿ ಆ ಸಭಾ ಸದಸ್ಯರ ಮುಂದೆ ಹೇಳಿದ್ದೇನೆಂದರೆ 'ಎಲ್ಲಾ ಸಾಮಂತ ರಾಜರೂ ಸಕಲ ಪ್ರಜೆಗಳೂ ಕೂಡಾ ನನ್ನ ಮಾತಿನ ಕಡೆಗೆ ಸ್ವಲ್ಪ ಲಕ್ಷ್ಯ ಕೊಡಬೇಕು. ನಾನು ಆಚರಿಸುತ್ತಿದ್ದ ಜಿನ ಕುಲ ಧರ್ಮಕ್ಕೆ ನಿಜವಾಗಿ ವಿರೋಧ ಮಾಡಿರುತ್ತೇನೆ. ಆದರೆ ನಾನು ಹಿಂಸೆ ಮಾಡಿದ್ದು ಜಿನಧರ್ಮಕ್ಕೆ ವಿರೋಧವಾದರೂ, ರಾಜಧರ್ಮಕ್ಕೆ ವಿರೋಧನಲ್ಲ. ಆದ್ದರಿಂದ ಈಗ ಹೊಸತಾಗಿ ನನ್ನ ಮತಕ್ಕೆ ಸೇರಲು ಮನಸ್ಸುಳ್ಳವರು ಬರಬಹುದು.

ಬಂದವರು ಜೈನ ಮತಕ್ಕೆ ವಿರೋಧವಾಗಿ ನಡೆಯಬೇಕೆಂತ ನಾನು ಹೇಳುವುದಿಲ್ಲ. ಆತ್ಮ ಸಂತೋಷದಿಂದ ನವೀನ ಮತಕ್ಕೆ ಬಂದಲ್ಲಿ ಅವರನ್ನು ಮತ್ತು ಜಿನ ಮತಸ್ಥರನ್ನು ಏಕ ರೀತಿಯಿಂದಲೇ ನಡೆಸುವೆನು........'ಆಗ ಆ ಊರಿನ ಮಾನ್ಯ ಕೆಲವು ಜನ ಗೃಹಸ್ಥರು 'ರಾಜ ಮತವೇ ಶ್ರೇಷ್ಠ ಮತ'ವೆಂದು ಹೇಳಿ ನಾವು ಸದಾ ರಾಜ ಮತವನ್ನು ಸಂತೋಷದಿಂದ ಸ್ವೀಕರಿಸುವೆವೆಂದು ಕಂಠೋಕ್ತವಾಗಿ ಹೇಳಿದರು. ಆಗ ರಾಜನು ಈ ಜನರಿಗೆ ನವ ಒಡನಾಡಿಗಳು ಅಂದರೆ ಹೊಸತಾದ ಸ್ನೇಹಿತರೆಂತಲೂ ಆ ನಾಡಿನವರೇ (ಊರಿನವರೇ) ಪ್ರಥಮವಾಗಿ ರಾಜಮತವನ್ನು ಸೇರಿದ ಕಾರಣ ಆ ಜಾತಿಗೆ ನಾಡವರೆಂತಲೂ ಹೆಸರಿಟ್ಟರು. ಆ ಮೇಲೆ ಆ ಹೊಸ ಮತದವರು ರಾಜಪ್ರಿಯರಾಗಿಯೂ, ವೀರರಾಗಿಯೂ ಇರುವುದನ್ನು ನೋಡಿ ಅವರನ್ನು ರಾಜಪ್ರತಿನಿಧಿಗಳಾಗಿ ದಕ್ಷಿಣ ದೇಶಕ್ಕೆ ಕಳುಹಿಸಿ ಅಲ್ಲಿ ಅವರಿಗೆ ದೊಡ್ಡ ದೊಡ್ಡ ರಾಜ ಕಾರ್ಯಗಳನ್ನು ಕೊಟ್ಟು, ಸೇನೆಗೆ ಮುಂದಾಳುಗಳಾಗಿ ನೇಮಿಸಿ ಭಟರು ಎಂದರೆ ಪರಾಕ್ರಮಿಗಳೆಂತಲೂ, ಬಂಟರು ಅಂದರೆ ಸಹಾಯಕರೆಂತಲೂ ಕರೆಯಲ್ಪಟ್ಟರು. ಈ ಕಾರಣದಿಂದಲೇ ಉತ್ತರ ದಿಕ್ಕಿನಲ್ಲಿರುವವರಿಗೆ ನಾಡವರೆಂತಲೂ, ದಕ್ಷಿಣದಲ್ಲಿರುವವರಿಗೆ ಬಂಟರೆಂತಲೂ ಹೆಸರಾಯಿತು. (ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯ ರಾಯನ ಅಳಿಯ ಕಟ್ಟು— ಯನ್. ಎ. ಶ್ರೀನಿವಾಸ ಹೆಗ್ಗಡೆ, ಪುಟಗಳು 81ರಿಂದ 83 Published in 1915)

oo oo oo ooo oo

"ತುಳುನಾಡಿನಲ್ಲಿ ಹಳ್ಳಿಗಳಲ್ಲಿ ಮೂಲದ ಹೊಲೆಯರೆಂಬ ಹರಿಜನರು, ಹೆಂಡ ಕುಡಿದು ವಿನೋದಕ್ಕಾಗಿ ಹಾಡುವ ಪಾಡ್ದನಗಳಲ್ಲಿನ ಅಭಿಪ್ರಾಯಯವನ್ನು 'ಪ್ರಾಚೀನ 'ತುಳುನಾಡು' ಎಂಬ ಪುಸ್ತಕದಲ್ಲಿ ಹೀಗೆ ಕೊಟ್ಟಿದೆ (ಪುಟಗಳು 34—35)

1. ಶ್ರೀಮಂತರಾದ ಬಂಟರು. ಮೊಗೇರರ ತಂಗಿ ಮಕ್ಕಳು. ಬಿಲ್ಲವರ ಅಕ್ಕನ ಮಕ್ಕಳು.

2. ಆರು ಮೊಳ (ಕಾಂಗ್) ಕಪ್ಪುವಸ್ತ್ರ ಉಟ್ಟು ಮೂರು ಮೊಳ ಎದುರು ಸೆರಗು (ಮುನ್ನಿ) ಬಿಟ್ಟರು.

3. (ಕಡಲೇರ್) ಮೊಗೇಯರು (ಮಡಲೇರ್) ಬಿಲ್ಲವರು ಪಾಲು ಕೇಳಿ ಪಾಲು ತಕ್ಕೊಂಡವರು.

4. ಹುಣಿಯಿಲ್ಲದ ಉಪ್ಪು 'ನೀರಿನ ಕಡಲಿನ ಪಾಲನ್ನು ಮೊಗೆಯರು ಪಡಕೊಂಡರು.

5. ಸೀ ನೀರಿನ ಹುಣಿಯಿದ್ದ ಗದ್ದೆಗಳನ್ನು (ಬಾರೆಗರು) ಬಂಟರು ಪಡಕೊಂಡರು.

6. ಗದ್ದೆಯ ಸಮುದ್ರದ ಬದಿಯಲ್ಲಿರುವ ಮರಗಳನ್ನು ಮೂರ್ತೆ ಮಾಡಿದರು. ಬಿಲ್ಲವರು.

7. ಕಾಟು—ಕರ್ಬಾಸು ಎಂದರೆ ಘಟ್ಟದ ಮೇಲಿನ ಕೋಣ ಎತ್ತುಗಳು. ಎರು—ಬೋರಿ—ಊರಿನ ಕೋಣ ಮತ್ತು ಎತ್ತು ಇವುಗಳಿಂದ ಗದ್ದೆ ಹೂಡಿದರು.

8. ಮೂರು ಸೇರು ಬೀಜ ಬಿತ್ತಿ ಮುವತ್ತು ಕೊಯ್ಲು ಕೊಯ್ದರು.

9. ಮೂಡು ದಿಕ್ಕಿಗೆ ನೋಡಿ ಪಡು ದಿಕ್ಕಿಗೆ ಬಲೆ ಬೀಸಿ ದೋಣಿ ತುಂಬಿಸಿದರು.

10. ಬಲದಿಂದ ಎಡಕ್ಕೆ ಕೊಯ್ದು ಗಡಿಗೆ ಕಟ್ಟಿ ಹೆಂಡ ತೆಗೆದು ಕಾಲಕಳೆದರು.

11. ವರ್ಷ ವರ್ಷ ದೈವಗಳಿಗೆ ಕೋಲವೆಂಬ ಉತ್ಸವ ಮಾಡ್ಯಾರು ಕೋಲಕ್ಕೆ ಗಡಿಗೆ ತುಂಬಾ ಹೆಂಡಕೊಟ್ಟಾರು"

ಎಂಬ ಪಾಡ್ದನದ ಪ್ರಕಾರ ಇವರಲ್ಲಿ ಜಾತಿ ಭೇದಗಳು ಇರಲಿಲ್ಲ. ಮರಕಾಲರಲ್ಲಿ ಹಲವರು ಪಾಂಡಿಗಳಲ್ಲಿ ಪರದೇಶದ ವ್ಯಾಪಾರ ಮಾಡಿ ಪಾಂಡಿ ಎಂಬ ಹೆಸರನ್ನು ಗಳಿಸಿಕೊಂಡಿದ್ದರು. ಬಂಟರಲ್ಲಿ ಕೆಲವರು ಆಳುವರೆಂತಲೂ, ಪೆರ್ಗಡೆ ಎಂತಲೂ ಆಡಳಿತೆ ನೋಡಿಕೊಂಡಿದ್ದರು. ಬಿಲ್ಲವರಲ್ಲಿ ಸೈನಿಕರಾಗಿ ನಾಯಕರೆಂತಲೂ ಗುರಿಕಾರರೆಂತಲೂ ಎಲ್ಲವರೂ ಬೇರೆ ಬೇರೆ ಹೆಸರುಗಳಿಂದ ತುಳುನಾಡಿನ ಸಂರಕ್ಷಣೆ ಮಾಡುತ್ತಾ, ಒಗ್ಗಟ್ಟಾಗಿ ತಮ್ಮ ಸಮಾಜದ ಕಟ್ಟುಕಟ್ಟಳೆಗಳಂತೆ, ದೈವದೇವರುಗಳನ್ನು ಆರಾಧಿಸುತ್ತಾ, ತಮ್ಮ ಜನರನ್ನು ರಕ್ಷಣೆ ಮಾಡಿಕೊಂಡು, ತಮ್ಮ ತಮ್ಮ ವೃತ್ತಿಗಳಿಂದಲೇ ಶ್ರೀಮಂತರಾಗಿ ಹಲವು ಕಾಲ ಮೆರೆದುಕೊಂಡಿದ್ದರು.

oo oo oo oo oo

"ಪ್ರಾಚೀನ ತುಳುವದಲ್ಲಿದ್ದವರು ಮೂರೇ ವಂಶ ಯಾ ವರ್ಣದವರೆಂದು ಹೇಳಬಹುದು. ಮೊನ್ನೆ ತನಕ ನಾವು ಹೊಲೆಯ ಕೊರಗರೆಂದು ಕರೆಯುತ್ತಿದ್ದ ಹರಿಜನರ ಹಿರಿಯರು ಇಲ್ಲಿಯ ಮೂಲ ನಿವಾಸಿಗಳು. ಶಿವಬ್ರಾಹ್ಮಣರ ಹಿರಿಯರೂ ಶಿವಳ್ಳಿ, ಕೋಟ ಬ್ರಾಹ್ಮಣರ ಹಿರಿಯರೂ ತುಳುವಕ್ಕೆ ಪ್ರಾಚೀನ ಕಾಲದಲ್ಲಿ ಬಂದು ಸೇರಿದ ಆರ್ಯವಂಶಜರು.[3] ಬಂಟ, ನಾಡವ, ಬಿಲ್ಲವ, ಹಳೇಪೈಕ, ಮೊಗೇರ, ದೇವಾಡಿಗ, ಗಾಣಿಗ, ಕೆಲಸಿ—ಮೊದಲಾದ ತುಳು ಮತ್ತು ಕನ್ನಡ ಭಾಷೆಯನ್ನಾಡುವ ಬ್ರಾಹ್ಮಣೇತರ, ಸವರ್ಣ ಹಿಂದುಗಳ ಹಿರಿಯರು ತುಳುವಕ್ಕೆ ಆರ್ಯ ವಂಶಜರ ಮೊದಲು ಬಂದು ಸೇರಿಕೊಂಡ ದ್ರಾವಿಡ ವಂಶಜರು. ಈ ಆರ್ಯ ದ್ರಾವಿಡರ ಮತ್ತು

ಮೂಲ ನಿವಾಸಿಗಳ ಚರಿತ್ರೆಯೇ ತುಳುವದ ಪ್ರಾಚೀನ ಇತಿಹಾಸ" (ದಕ್ಷಿಣ ಕನ್ನಡ ಇತಿಹಾಸ-ತುಳುವ ಚರಿತ್ರೆ-ಕೇಶವ ಕೃಷ್ಣ ಕುಡುವ, B.A.,L.L.B., ಕಾರ್ಕಳ-ಪುಟ ೬)

೦೦ ೦೦ ೦೦ ೦೦ ೦೦

"ಪದನರಿದು ನುಡಿಯಲುಂ ನುಡಿ |
ದುದರ ನಾರಯಲುಂ ಆರ್ಪರಾ ನಾಡವರ್ಗಳ್ ||
ಚದುರರ್ ನಿಜದಿಂ ಕುರಿತೋ |
ದದೆಯುಂ ಕಾವ್ಯ ಪರಿಣತಮತಿಗಳ್ ||

"ಸುಭಟರ್ಕಳ್, ಕವಿಗಳ್, ಸು |
ಪ್ರಭುಗಳ್ ಚೆಲ್ವರ್ಕಳಭಿಜನರ್ಕಳ್ ಗುಣಿಗಳ್ ||
ಅಭಿಮಾನಿಗಳತ್ಯುಗ್ರರ್ |
ಗಭೀರ ಚಿತ್ತರ್ ವಿವೇಕಿಗಳ್ ನಾಡವರ್ಗಳ್ ||"

—ನೃಪತುಂಗನ ಕವಿರಾಜಮಾರ್ಗ.

೦೦ ೦೦ ೦೦ ೦೦ ೦೦

"ಇಲ್ಲಿ ನಾಡವರೆಂದರೆ ಕನ್ನಡದಲ್ಲಿ ನೆಲೆಯಾದ ಎಲ್ಲಾ ಜನರೆಂದು ಅರ್ಥ ಮಾಡುವ ಮೋಹವುಂಟಾಗುವಂತಿದೆ. ಆದರೆ ಕರ್ನಾಟದೊಳಗಿನ ಎಲ್ಲಾ ಜನರೂ 'ಕುರಿತು ಓದದ' ಉಳಿ ಮುಟ್ಟದ ಲಿಂಗವೆಂದು ಹೇಳುವ ಅಚಾತುರ್ಯವು ಸ್ವತಃ ಕುರಿತೋದಿ ವಿದ್ವಾಂಸನೆನಿಸಿದ ವಿಜಯ ಮಹಾಕವಿಯಿಂದ ಆಗುವುದು ಸರ್ವಥಾ ಶಕ್ಯವಿಲ್ಲ. ಕುರಿತೋದದೆ ಹುಟ್ಟು ಜಾಣರಾದ ಸಾಮಾನ್ಯ ಜನ (ಜನ ಸಾಮಾನ್ಯರಲ್ಲ) ಕೆಲವು ಉಂಟು. ಅವರೇ ನಾಡವರು-ಒಂದು ವಿಶಿಷ್ಟ ಜನ ಎಂಬುದು ಅಲ್ಲಿ ಅಭಿವ್ಯಕ್ತವಾಗುತ್ತಿದೆ.

೧೧೦೦ ವರ್ಷಗಳ ಹಿಂದಿನ ನಾಡವರ ವರ್ಣನೆಯನ್ನೋದಿ ಅದನ್ನೇ ಇಂಗ್ಲಿಷಿನಲ್ಲಿ ಭಾಷಾಂತರಿಸಿದಂತಿದೆ. ಅಂದಿನ ಗುಣಗಳು ಇಂದಿಗೂ ಅಚ್ಚಳಿಯದೆ ಉಳಿದಿವೆ. ಇವರು ಒಂದು–ಸು–ಭಟರ್ಕಳ್; ಅಭಿಮಾನಿಗಳ್; ಅತ್ಯುಗ್ರರ್, ಗಭೀರ ಚಿತ್ತರ್; ಚೆಲ್ವರ್ಕಳ್, ಅಭಿಜನರ್ಕಳ್, ಗುಣಿಗಳ್, ವಿವೇಕಿಗಳ್; ಇವರು ಒಬ್ಬರಿಗೆ ತಲೆವಾಗಿ ಜೀ ಯೆಂದು ಎಂದೂ ಬಾಳಿದವರಲ್ಲ. ಸಾರಿಯುಂ, ಕೇರಿಯುಂ ಬಾಳುವವರು. 'ಎಂದುದನೆ ಎಂದು' ಎಂತು ಬದುಕಿಕೊಂಡಿರುವವರಲ್ಲ. ಯಕ್ಷಗಾನ ಸಂಗೀತ ಪ್ರೀತಿ ಇಂದಿನ ನಾಡವರಿಗೂ ವಿಶೇಷ. ಆದುದರಿಂದ ಇವರಿಗೆ–ಅಭಿಜನರ್ಕಳ್, ಗುಣಿಗಳ್, ಕುರಿತೋದದೆಯುಂ ಪರಿಣತಮತಿಗಳ್—

ಎಂದು ನೃಪತುಂಗನು ಅಂದು ವರ್ಣಿಸಿದುದು ಇಂದಿಗೂ ಸಮರ್ಪಕವಾಗಿದೆ.”
(ಕನ್ನಡದ ನೆಲೆ-ಶಂ ಭಾ. ಜೋಶಿ- ಪುಟಗಳು ೧೦೩ ಮತ್ತು ೦೦೭)

೦೦ ೦೦ ೦ ೦ ೦೦ ೦೦

[ಮೇಲಿನ ಉದ್ಧರಣೆಗಳು ನಾಡವರ ಯಾನೆ ಬಂಟರ ಕುರಿತಾಗಿ ಒಂದಲ್ಲ ಒಂದು ರೀತಿಯಲ್ಲಿ ಅಭಿಪ್ರಾಯಗಳನ್ನು ಕೊಡುವುದರಿಂದ, ಅವುಗಳಲ್ಲಿ ಸತ್ಯದೆಳೆ ಕಂಡುಬರುವುದರಿಂದ, ಅವುಗಳಲ್ಲಿ ಉಲ್ಲೇಖಿತವಾದ ವಸ್ತು ವಿಮರ್ಶೆಗೆ ಸರಿಯಾಗಿ ಓದುಗರಿಗೆ ದೊರೆಯಬೇಕೆಂಬ ಉದ್ದೇಶದಿಂದ ಅವುಗಳನ್ನು ಇದ್ದಕ್ಕಿದ್ದಂತೆ ಕೊಟ್ಟಿದ್ದೇನೆ. ಅವುಗಳಲ್ಲಿ ಅಡಕವಾದ ವಿಷಯ ಸಾಮಗ್ರಿ ಎಲ್ಲವೂ ‘ವೇದವಾಕ್ಯದಂತೆ’ ಸ್ವೀಕೃತವಾದುವುಗಳಲ್ಲವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ನನ್ನ ವಿಮರ್ಶೆಯಲ್ಲಿ ಈ ನನ್ನ ಲೇಖನಕ್ಕೆ ಸಂಬಂಧಿಸಿದ ವಿಷಯವನ್ನಷ್ಟೆ ಅಳವಡಿಸಿಕೊಂಡಿದ್ದೇನೆ.]

ಮೇಲಣ ಅಭಿಪ್ರಾಯಗಳಿಂದ ಈ ಕೆಳಗಿನ ಹಲವೊಂದು ನಿರ್ಧಾರಗಳನ್ನು ನಾಡವರ ವಿಷಯವಾಗಿ ಮಾಡಬಹುದು.

1. ಬಂಟರೂ, ನಾಡವರೂ ಒಂದೇ ಪಂಗಡಕ್ಕೆ ಸೇರಿದವರು.

2. ಇವರು ದ್ರಾವಿಡ ಶಾಖೆಗೇ ಸೇರಿದ ಜನ.

3. ಅವರ ಪೂರ್ವಜರು ಬಹಳ ಹಳೆಗಾಲದಲ್ಲಿ ನಮ್ಮ ನಾಡಿಗೆ ಬಂದು ನೆಲೆಸಿ ಇಲ್ಲಿಯ ಯಜಮಾನರಾದರು.

4. ಇವರ ಪಂಗಡ ಬೇರೆ ಕಡೆಗಳಲ್ಲಿ ಇದ್ದಿರಬೇಕು.

5. ನಾಡವರು ನಮ್ಮ ನಾಡಿನ ಸಮಾಜದ ಪ್ರಧಾನ ಘಟಕವಾಗಿದ್ದುದಲ್ಲದೆ ಇಲ್ಲಿಯ ಆಡಳಿತೆದಾರರೂ ಆಗಿದ್ದರೆನ್ನಬಹುದು.

6. ಈ ನಾಡವರು ಇಲ್ಲಿಯ ಇತರ ಜನಪ್ರಭೇದಗಳೊಡನೆ ರಕ್ತ ಸಂಬಂಧವನ್ನು ಆದಿಯಲ್ಲಿಟ್ಟು ಕೊಂಡಿರಬೇಕು.

7. ಬಂಟರಲ್ಲಿ ಯಾ ನಾಡವರಲ್ಲಿ ಮತಾಂತರವಾಗಿದೆ.

8. ಇವರು ನ್ಯಾಯವಂತರೂ, ಧರ್ಮಶೀಲರೂ ಆಗಿದ್ದರು. ನಮ್ಮ ನಾಡಿನ ಪ್ರಾಚೀನ ಕಾಲದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಚೌಕಟ್ಟು ಇವರಿಂದ ನಿರ್ಮಾಣವಾಗಿದ್ದಿರಬೇಕು.

9. ವ್ಯವಸಾಯವೂ, ಅದರ ಮೇಲ್ತನಿಕೆಯೂ ಇವರ ಪ್ರಾಮುಖ್ಯ ಕಸುಬಾಗಿದೆ. (ಒಕ್ಕಲ್ ಮತ್ತು ಒಕ್ಕಲ್ಮೆ)

10. ಇವರು ಸುಂದರ ಪುರುಷರೂ, ಕಲಾಪ್ರೇಮಿಗಳೂ ಆಗಿದ್ದರು

**ವಿಚಾರ— ವಿಮರ್ಶೆ**

ನಾಡವರ ಪರವಾದ ವೈಚಾರಿಕ ವಿಮರ್ಶೆಯು ಈ ಕೆಳಗಿನ ಪ್ರಶ್ನೆಗಳಿಗುತ್ತರವನ್ನು ಕೊಡುವುದವಶ್ಯ.

1) ನಾಡವರು ದ್ರಾವಿಡ ಶಾಖೆಯ ಯಾವ ಪಂಗಡಕ್ಕೆ ಸೇರಿದವರು?

2) ನಾಡವರ ಪೂರ್ವಜರು ಯಾರು? ಅವರು ಎಂದು ನಮ್ಮ ನಾಡಿಗೆ ಆಗಮಿಸಿದರು?

3) ಈ ನಾಡವರು ಕರ್ನಾಟಕದ ಇತರ ಭಾಗಗಳಲ್ಲಿದ್ದರೂ ಈಗ ನಮ್ಮ ನಾಡಿನಲ್ಲಿ ಮಾತ್ರ ಅವರು ಇರಲು ಕಾರಣವೇನು?

4) ಕವಿರಾಜ ಮಾರ್ಗದಲ್ಲಿ ನಾಡವರನ್ನು ಅಷ್ಟೊಂದು ಬಗೆಯಿಂದ ಗುಣಗಾನ ಮಾಡಲು ಕಾರಣವೇನು?

5) ನಾಡವರ ದೈವತವು ಯಾವುದು?

6) ನಾಡವರೆಂದರೆ ರಾಷ್ಟ್ರಕೂಟರೆ? ನಮ್ಮ ನಾಡಿನ ನಾಡವರಿಗೂ ನಮ್ಮ ನಾಡನ್ನು ಶತಮಾನಗಳ ತನಕ ಸ್ವತಂತ್ರವಾಗಿಯೂ ಮಾಂಡಲಿಕರಾಗಿಯೂ ಆಳಿದ 'ಆಳುವ'ರಿಗೂ (ಆಲುಪರು) ಏನಾದರೂ ಸಂಬಂಧವಿದೆಯೇ?

ಎತ್ತಿದ ಈ ವಿಷಯದ ಮೇಲೆ ಹೆಚ್ಚಿನ ಅಧಿಕೃತ ಸಂಶೋಧನೆ ನಡೆಯದುದರಿಂದ ನಾಡವರ ಮೂಲದ ಕುರಿತು ಇಷ್ಟರ ತನಕ ಅಷ್ಟೊಂದು ಬೆಳಕು ಹರಿಯಲಿಲ್ಲ. ಅಂತೂ ಹೊಸ ಬೆಳಕನ್ನು ಚೆಲ್ಲಿದವರಲ್ಲಿ ಶಂ. ಬಾ ಜೋಶಿಯವರೇ ಪ್ರಮುಖರು ಬೇರಾರೂ ಮೂಲ ಶೋಧನೆ ಮಾಡಿದವರಲ್ಲ. ಆದುದರಿಂದ ಅವರ ಅಭಿಪ್ರಾಯದ ಒಂದು ವಿಹಂಗಮ ನೋಟವನ್ನು, ಸ್ಥಳೀಯ ಉದಾಹರಣೆಗಳ ಸಹಿತ ಕೊಡಲು ಇಚ್ಛಿಸುತ್ತೇನೆ.

ದ್ರಾವಿಡ ಎಂಬ ಪದ ಪ್ರಯೋಗವು ಆರ್ಯೇತರರನ್ನು ಭಾರತದಲ್ಲಿ ಸಂಭೋಧಿಸುವ ಸ್ಥೂಲವಾದ ಒಂದು ಸಾಧನ. ಆದರೆ ಅದು ಅಷ್ಟೊಂದು ತೃಪ್ತಿಕರವೂ ಸಮಂಜಸವೂ, ಆದ ನಿರ್ದೇಶಿಕ ಪದವೆಂದು ಈಗ ವಿದ್ವಾಂಸರು ಒಪ್ಪುವುದಿಲ್ಲ. ಸ್ಮಿಥ್ ಚರಿತ್ರಕಾರರು ಈ ಪದವು ವಿಷಯನಿರೂಪಣಾರ್ಥದಲ್ಲಿ ಅತ್ಯಂತ ಅತೃಪ್ತಿಕರವೂ ತಪ್ಪು ಹಾದಿಗೆಳೆಯುವ ಪದಪ್ರಯೋಗವೂ ಆಗಿದೆ, ಎಂದು ಹೇಳುವಾಗ ಸತ್ಯವನ್ನೇ ಬೆಳಕಿಗೆತಂದಂತಾಗಿದೆ.

ದಕ್ಷಿಣ ಹಿಂದೂ ದೇಶದಲ್ಲಿ ಕಾಲಾನುಗತಿಕದಿಂದ ನೆಲೆಮಾಡಿ ಕೊಂಡ ದ್ರಾವಿಡ ಶಾಖೆಯವರಲ್ಲಿ ತುರುಕಾರರೂ, ಕಳವರೂ, ಕನ್ನರೂ, ಮರವರೂ, ನಾಡವರೂ, ಮಲ್ಲರೂ, ಬೆಳ್ಳರೂ, ದ್ರವಿಡರೂ, (ತಮಿಳರು), ಚೋಳರೂ, ಪಾಂಡ್ಯರೂ,

ಪ್ರಮುಖರಾಗಿರುವರೆಂದು ಹೇಳಬಹುದು. ತುರು, ಕನ್ನ, ಕಳ್ಳ, ನಾಡವ-ಪಂಗಡಗಳಂತೂ ಕರ್ನಾಟದಲ್ಲಿ ವಿಶೇಷವಾಗಿ ಖ್ಯಾತಿಯನ್ನು ಪಡೆದವರು. ಹಿಂದಿನ ಲೇಖನಗಳಲ್ಲಿ ಕಂನಾಡಿನಲ್ಲೇ ಖ್ಯಾತಿವೆತ್ತ ದನಗಾಹರ ಪಂಗಡವಾದ ತುರುವರು (ತುಳುವರು) ತಮ್ಮ ಪಯಣದಲ್ಲಿ ದಕ್ಷಿಣಕ್ಕೆ ಸರಿದು ಒಂದು ಕಾಲದಲ್ಲಿ ನಮ್ಮ ಪ್ರದೇಶದಲ್ಲಿ ತಳವೂರಿ ತುರುಕಾರರ ನಾಡು ತುಳುನಾಡು ಎಂದಾಗುವಂತೆ ವಿಶಿಷ್ಟತೆಯನ್ನು ಪಡೆದವರೆಂಬ ಸಂಗತಿಯನ್ನು ವಿಶದಪಡಿಸಿದ್ದಾಯಿತು. ಅಂತೆಯೇ ಕಳವರೂ ಕನ್ನರೂ ದ್ರಾವಿಡಪ್ರಧಾನ ಪಂಗಡವಾಗಿದ್ದು ನಮ್ಮ ನಾಡಿನಲ್ಲೂ ವಾಸ್ತವ್ಯಮಾಡಿದ್ದಿರಬೇಕಾದ 'ಪುರಾವೆ'ಯನ್ನು ಕೊಟ್ಟುದಾಯಿತು. ಈ ಕನ್ನರಿಂದಲೇ ನಾಡವರು ಆದುದೆಂಬ ಬಲವಾದ ಅನುಮಾನಗಳಿವೆ.

ನಾಡವರೆಂದರೆ 'ನಾಟರು' (ನಟರು). ಇವರೇ ಮನುಸ್ಮೃತಿಯಲ್ಲಿ ಉಲ್ಲೇಖಿತರಾದ 'ನಟ' ಪಂಗಡ. ಮನುಸ್ಮೃತಿಯರಚನಾಕಾಲವನ್ನು ವಿದ್ವಾಂಸರು ಕ್ರಿ.ಪೂ. 200—ಕ್ರಿ.ಶ. 200ರ ಅಂತರದಲ್ಲಿ ಇರಿಸಿದ್ದಾರೆ. ಈ ನಟ (ನಾಟ)ವೆಂಬ ಶಬ್ದವು ಸಂಸ್ಕೃತದ್ದಲ್ಲ. ಸಂಸ್ಕೃತಕ್ಕೆ ದ್ರಾವಿಡ ಭಾಷೆಯಿಂದ ಅದನ್ನು ಸೇರಿಸಿಕೊಂಡುದು ಎಂದು ತಿಳಿದು ಬರುತ್ತದೆ. ಆದುದರಿಂದಲೇ. ನಟ, ನಾಟವೆಂಬ ಎರಡು ರೂಪಗಳ ಪರಿಪಾಠಗಳು ಬಂದಿವೆ. ಮನುಸ್ಮೃತಿಯಲ್ಲಿ ಈ ರೀತಿ ಕೊಟ್ಟಿದೆ.

ಝಲ್ಲೋ ಮಲ್ಲಶ್ಚ ರಾಜನ್ಯಾದ್ವ್ರಾತ್ಯಾನ್ನಿಚ್ಛಿವಿರೇವಚ ।
ನಟಶ್ಚ ಕರಣಶ್ಚೈವ ಖಸೋ ದ್ರವಿಡ ಏವಚ ॥

(ಮನು—ಹತ್ತನೇ ಅಧ್ಯಾಯ—೨೨ನೇ ಶ್ಲೋಕ)

ತಾತ್ಪರ್ಯ:—ವ್ರಾತ್ಯನೆನಿಸಿದ ಕ್ಷತ್ರಿಯನಿಂದ ಸಮಾನ ಜಾತಿಯವಳಲ್ಲಿ ಝಲ್ಲನೆನಿಸುವವನು ಹುಟ್ಟುತ್ತಾನೆ. ಈತನಿಗೇನೆ ದೇಶಭೇದದಿಂದ ಮಲ್ಲ-ನಿಚ್ಛಿವಿ-ನಟ ಕರಣ—ಖಸ—ದ್ರವಿಡ ಎಂದು ನಾಮಭೇದಗಳು ಪ್ರಸಿದ್ಧವಾಗಿವೆ.

ಇಲ್ಲಿ ಕರಣರು ಎಂದರೆ ಕನ್ನರು, ನಟರು ಎಂದರೆ ನಾಡವರು ಒಂದೇ ಜನಾಂಗವೆಂದರ್ಥವಾಗುವುದು. ಈ ನಟರ ಉಲ್ಲೇಖವು ಯಮಪಿತಾಮಹಾದಿ ಗ್ರಂಥಗಳಲ್ಲಿ ಕಂಡುಬರುತ್ತದೆ. ಮತ್ಸ್ಯ ಪುರಾಣದಲ್ಲಿ 'ಕರ್ಣ' ಎಂಬ ಒಂದೇ ಜನಾಂಗದ ಹೆಸರು ಬರುತ್ತದೆ, ಆದುದರಿಂದ ಈ ನಟರೂ, ಕರ್ಣರೂ, ಒಂದೇ ಜನಾಂಗದ ಬೇರೆ ಬೇರೆ ಹೆಸರುಗಳೆಂದು ಅರ್ಥವಾಗುತ್ತದೆ. 12—13ನೇ ಶತಮಾನದ ಕಲ್ಲೂಕ ಭಟ್ಟನ ಟೀಕೆಯಲ್ಲಿಯೂ ಇದೇ ಧ್ವನಿಯು ಕೇಳಿಬರುತ್ತದೆ. "ಝಲ್ಲ ಮಲ್ಲ.......ನಟಕರಣ...... ದ್ರವಿಡಾಖ್ಯಾ.......ಏತಾನಿ ಅಪಿ ಏಕಸ್ಯ ಏವ ನಾಮಾನಿ" ಇವರು ದ್ರಾವಿಡ ವರ್ಗದವರೆಂದು ನಮೂದಿಸಲ್ಪಟ್ಟುದು ಮಹತ್ವದ್ದಾಗಿದೆ.

ನಮ್ಮ ನಾಡಿನಲ್ಲಿ ನೆಲೆನಿಂತ ಕನ್ನರೇ (ಕರ್ಣ–ಕರಣ) ನಾಡವರಾದರು. ತಮಿಳು ಶಬ್ದಕೋಶದಲ್ಲಿ ನಾಟ್ಟರ್ ಎಂದರೆ ದೇಶದ (ನಾಡಿನ) ಜನರು ಎಂದಿದೆ. ನಾಟ್ಟರು ಎಂಬುದು ತಮಿಳು ಉಚ್ಚಾರ. ನಾಟರು, ಇಲ್ಲವೆ ನಾಡವರೆಂದು ಉಚ್ಚರಿಸುವುದು ಕನ್ನಡದ ಪದ್ಧತಿ. ಸೇಲಂಜಿಲ್ಲೆಯ ಕನ್ನಡ ಒಕ್ಕಲಿಗರಿಗೆ ನಾಟ್ಟರೆಂಬ ವಾಡಿಕೆ ಇದೆ. ಹೀಗಾಗಿ ನಾಟರೆಂದರೆ ನಾಡವರೆಂದೂ, ಊರನ್ನು ನಾಡನ್ನಾಗಿ ಪರಿವರ್ತಿಸಿದವರೆಂದೂ, ಒಕ್ಕಲು ಮಕ್ಕಳೆಂದೂ ಅರ್ಥವಾಡುವುದು ಸಹಜವಿದೆ. ಮನುಸ್ಮೃತಿಯಲ್ಲಿ ವ್ರಾತ್ಯಕ್ಷತ್ರಿಯರ ಸಂತತಿಯವರು ನಟರು, ಕರಣರೆಂದುಹೇಳುವುದು ಸಹಜವೇ. ಕಾರಣ ಆರ್ಯರು ದ್ರಾವಿಡರನ್ನು ಅಹಿತದೃಷ್ಟಿಯಿಂದಲೂ, ಕಡೆಗಣ್ಣಿನಿಂದಲೂ ನೊಡುತ್ತಿದ್ದುದು ಅನೇಕ ಉದಾಹರಣೆಗಳಿಂದ ತಿಳಿದುಬರುತ್ತದೆ.

ಮೇಲಿನ ವಿವರದಿಂದ 'ನಾಡವರು'4 (ಬಂಟರು) ಮೊದಲಲ್ಲಿ ನಾಡನ್ನು ನಿರ್ಮಿಸಿ ಅದನ್ನು ಆಳುತ್ತಿದ್ದವರು ಎಂದು ತಿಳಿದು ಬರುತ್ತದೆ. ಅವರು ಪ್ರತ್ಯಕ್ಷ ಭೂಮಿಯ ಒಡೆರಾಗಿ ಒಕ್ಕಲುತನವನ್ನು ಸ್ವೀಕರಿಸಿದುದು ಅನಂತರದಲ್ಲಿ ಎಂಬುದನ್ನು ತಿಳಿಯ ಬಹುದು. ನಮ್ಮ ನಾಡಿನಲ್ಲಿ ನಾಡವರನ್ನು 'ಒಕ್ಕೆಲ್ಮೆ' ಎಂದು ಸಂಬೋಧಿಸುವುದರ ಔಚಿತ್ಯ ಇವರಿಂದ ತಿಳಿಯುತ್ತದೆ. ಅವರಿಗೂ, ಭೂಮಿಗೂ (ವ್ಯವಸಾಯಕ್ಕೂ) ಹಿಂದಿನಿಂದ ಇದ್ದ ನಿಕಟಸಂಬಂಧವನ್ನು ಇದು ವ್ಯಕ್ತಪಡಿಸುತ್ತದೆ.

'ಒಕ್ಕು' ಎಂದರೆ ಧಾನ್ಯವನ್ನು ಗಿಡದಿಂದ ಬೇರ್ಪಡಿಸುವುದು. (ಕೋಲಿನಿಂದ ಹೊಡೆದು ಎಂದು ತಿಳಿಯ ತಕ್ಕದು) ಹಾಗೆ ಮಾಡುವವನೇ ಒಕ್ಕಲು, ಬೇಸಾಯಗಾರ, ಒಕ್ಕಲಿಗ, ಒಕ್ಕೆಲ್ಮೆ. ತುಳುವಿನಲ್ಲಿರುವ 'ಒಕ್ಕು' ಎಂಬ ಶಬ್ದವು ಪ್ರಥಮದಲ್ಲಿ ಈ ಅರ್ಥದಲ್ಲಿಯೇ ಉಪಯೋಗಿಸಲ್ಪಟ್ಟು (ಬೈಹುಲ್ಲನ್ನು ಕೋಲಿನಿಂದ ಹೊಡೆದು ಒಕ್ಕಿ ಸರಿಗೊಳಿಸುವುದು) ಅನಂತರದಲ್ಲಿ ಸಾಮಾನ್ಯಾರ್ಥದಲ್ಲಿ ನೆಲವನ್ನು ಕೆದರುವುದಕ್ಕೆ ಉಪಯೋಗಿಸುವ ಅಭ್ಯಾಸವಾಯಿತೆಂದು ನನಗನಿಸುತ್ತದೆ. [ಒಕ್ಕೆಲ್ಮೆ- one of a cultivating class called the Bants, a Bant] ಉರಮುಳ್ಪುನಿ (ಉಳುವುದು) ಮತ್ತು ಒಕ್ಕುನಿ (ಧಾನ್ಯವನ್ನು ಪ್ರತ್ಯೇಕಿಸುವುದು) ಎಂಬ ಪ್ರಯೋಗಗಳು ತುಳುವಿನಲ್ಲಿ ಬಹಳ ಹಳೆಗಾಲದುವು ಎಂಬುದರಲ್ಲಿ ಸಂದೇಹವಿಲ್ಲ. ಈ ಮೂಲಾರ್ಥವು ಎಷ್ಟೊಂದು ಪ್ರಾಮುಖ್ಯವಾದುದೆಂದರೆ ಹೊಸತಾಗಿ ಗೃಹಪ್ರವೇಶ ಮಾಡುವ ಕಾರ್ಯವು ಅಥವಾ ಒಂದುಕಡೆ ವಾಸ್ತವ್ಯಕ್ಕೆ ಪ್ರಾರಂಭಿಸುವ ಕೆಲಸವು "ಒಕ್ಕಲಾಗುವುದು" ಎಂಬುದಾಗಿ ಕರೆಯಲ್ಪಡುವ ವಾಡಿಕೆ ಇಂದಿಗೂ ಉಳಿದಿದೆ.

ಕವಿರಾಜ ಮಾರ್ಗದಲ್ಲಿ ವಿವರಿಸಲ್ಪಟ್ಟ ನಾಡವರು ಯಾರು? ತುಳುನಾಡಿನ 'ನಾಡವರ'ನ್ನು ಉದ್ದೇಶಿಸಿ ಪ್ರಶಂಸಿಸಿ ಬರೆದ ಗ್ರಂಥವೋ? ಅಥವಾ ಈ ನಾಡವರು ನೃಪತುಂಗನಂತಹ ಕರ್ನಾಟಾಧೀಶನಿಂದ ಹೊಗಳಲ್ಪಡಬೇಕಾದರೆ ಆತನ ರಾಜ್ಯದಲ್ಲೆಲ್ಲಾ ಪಸರಿಸಿಕೊಂಡಿದ್ದ ಪ್ರಜೆಗಳೋ? ಪ್ರಜಾವರ್ಗವೋ? ಅವರು ನಿರ್ದಿಷ್ಟ ಜನಾಂಗವಾಗಿದ್ದು ಕಂನಾಡಿನಲ್ಲಿ ಎಲ್ಲಾ ಕಡೆಗಳಲ್ಲಿದ್ದರೆ ಈಗ ನಮ್ಮ ಜಿಲ್ಲೆಯಲ್ಲಿ ಮಾತ್ರ ಕಂಡು ಬಂದು ಇತರ ಕಡೆಗಳಲ್ಲಿ ಇಲ್ಲದಿರಲು ಯಾ ಬಹಳ ಅಪ್ರಾಮುಖ್ಯರಾಗಿರಲು ಬಲವಾದ ಕಾರಣಗಳೇನಾದರೂ ಇವೆಯೋ?-ಎಂಬೀ ಪ್ರಶ್ನೆಗಳನ್ನು ಉತ್ತರಿಸುವುದು ಅಗತ್ಯ.

ನಾಡವರೆಂದರೆ ನಾಡಿನಲ್ಲಿ ವಾಸಿಸುವ ಸರ್ವರೂ ಆಗಿರುವರು ಎಂಬ ಅಭಿಪ್ರಾಯವು ಸಮಂಜಸವಲ್ಲ ನೃಪತುಂಗನು ರಾಷ್ಟ್ರಕೂಟರಲ್ಲಿಶ್ರೇಷ್ಠ ಅರಸರಲ್ಲಿ ಮೇಲ್ಪಙ್ತಿಯವನು.⁴ ಈತನು ಅಭಿಮಾನದಿಂದ ನಾವಡರನ್ನುಮನಸಾರೆಹೊಗಳಬೇಕಾದರೆ ತಾನೂನಾಡವನಾಗಿಯೇ ಇರುವುದು ಸಹಜ. ಆಹಿಂದಿನ ಕಾಲದಲ್ಲಿದೇಶದ ಸರ್ವರೂ ದೇಶಾಭಿಮಾನಿಗಳಾಗಿದ್ದು ಅವರ ಐಕ್ಯವನ್ನೂ ಗುಣನಿರೂಪಣೆಯನ್ನೂ ನೃಪತುಂಗನು ಮಾಡಿದುದು ಎಂಬ ತೀರ್ಮಾನವನ್ನು ಮಾಡಿದರೆ ಅದು ಅಚಾರಿತ್ರಿಕವೇ ಆದೀತು. ಈ ದೇಶಾಭಿಮಾನ (National Patriotism) ಎಂಬುದು ಅರ್ವಾಚೀನ. ನಾಡವ ಕುಲಶ್ರೇಷ್ಠನು ನೃಪತುಂಗನು ತನ್ನ ಕುಲವನ್ನು ಶ್ಲಾಘನೆಮಾಡಿದ್ದಾನೆ. 'ನಾಡವ' (ಒಕ್ಕಲ್ಮ—ತುಳುವಿನಲ್ಲಿ) ಎಂಬ ಕನ್ನಡ ಶಬ್ದದ ಸಂಸ್ಕೃತಭಾಷಾಂತರವು 'ರಾಷ್ಟ್ರೀಕ'ವೆಂದಾಗಿದೆ. ರಾಷ್ಟ್ರಿಕರು ರಾಷ್ಟ್ರಕೂಟರು. ಅವರೇ ರಟ್ಟರು, ರೆಡ್ಡಿಗಳೂ, ಆಗಿರುವರು. ಈ ರಾಷ್ಟ್ರಿಕರಿಗೆ ಅಶೋಕನ ಶಿಲಾಲೇಖದಲ್ಲೂ ಉಲ್ಲೇಖವಿದೆ. ಆದುದರಿಂದ ಈ ನಾಡವರು ಅಂತೂ ಕ್ರಿ. ಪೂ. ಮೂರನೇ ಶತಮಾನದಿಂದ ಇದ್ದಿರಬೇಕೆಂಬುದನ್ನು ನಿಸ್ಸಂಶಯವಾಗಿ ಹೇಳಬಹುದು.ಮನುಸ್ಮೃತಿಯು ಕ್ರಿ. ಪೂ. 3ನೇ ಶತಮಾನದ ನಂತರದಲ್ಲಿ ಕ್ರೋಢೀಕರಣವಾದುದು. ನೃಪತುಂಗನು ತಾನೂ ನಾಡವನಾಗಿದ್ದು. ತನ್ನ ಜನಾಂಗದ ಪರಾಕ್ರಮ, ಆದರ ಗುಣ ವೈಶಾಲ್ಯ,ಲಕ್ಷಣಗಳ ಚಿತ್ರಣವನ್ನು ಕವಿರಾಜ ಮಾರ್ಗದಲ್ಲಿ ಮಾಡಿದುದು ಅತ್ಯಂತ ಸಹಜವಾಗಿದೆ.

ರಟ್ಟರೇ ರಾಷ್ಟ್ರಕೂಟರು ಎಂಬ ಬಗೆಗೆ ಯಾರೂ ಸಂದೇಹ ಪಡುವಂತಿಲ್ಲ. ಕಾರಣವೇನೆಂದರೆ ರಾಷ್ಟ್ರಕೂಟರು ತಮ್ಮ ಶಾಸನಗಳಲ್ಲಿ 'ರಟ್ಟವಂಶೋದ್ಭವಃ'ಎಂದು ತಾವೇ ಹೇಳಿಕೊಂಡಿದ್ದಾರೆ. ಸ್ಮಿತ್ ಚರಿತ್ರೆಕಾರನು, ಈ ರಾಷ್ಟ್ರಕೂಟರನ್ನು ಕುರಿತಾಗಿ ದೇಶೀಯ ಪಂಗಡದವರು (The Indigenous Tribes) ಎಂಬುದಾಗಿ ಹೇಳಿರುತ್ತಾನೆ.

ನಮ್ಮ ನಾಡಿನಲ್ಲಿ 'ರಟ್ಟಾಡಿ' ಎಂಬ ಊರೂ, ಬಂಟ್ವಾಳ (ಬಂಟವಾಳ), ಬಂಟ್ರ ಎಂಬ ಎರಡು ಊರುಗಳೂ, ಬಂಟಾರ ಎಂಬ ಸ್ಥಳವೂ ಗಮನವನ್ನು ಸೆಳೆಯುವಂತಹ ವಿಷಯವಾಗಿದೆ. ಬಂಟವೆಂಬ ಪದವು ಬಟ (ಭಟ) ಎಂದೇ ಆಗಿದೆ. ಯೋಧನು, ವೀರನು, ಪರಾಕ್ರಮಿಯು, ವೀರನಾದ ಸಹಾಯಕ ಎಂಬುದು ವಿದಿತ. (ದಂಡಿಗಂಜುವ ಬಂಟನ್ ಒಡಕು ಹರವಿಯ ಕಂಟ) ಬಂಟುತನವು ಎದೆಗಾರಿಕೆ, ಧೈರ್ಯ, ವೀರತ್ವವನ್ನು ತಿಳಿಯಪಡಿಸುತ್ತದೆ. (ಬಂಟು ತನವಿಲ್ಲದಲ್ಲಿ ವಿಕ್ರಮ ಹೀನ, ಕ್ಲೀವ ಎಂಬುದು) ಉತ್ತರದಲ್ಲಿದ್ದ ನಾಡವರು ಬಟರಾಗಿ ದಕ್ಷಿಣಕ್ಕೆ ಬಂದು ಬಂಟರಾದರು.

ನಮ್ಮ ಜಿಲ್ಲೆಯ 'ನಾಡು'ಗಳ ಪಟ್ಟಿ ಕೆಳಗಿನಂತಿವೆ:-ನಡ, ನಾಡ, ಕುರುನಾಡ, ಹಳನಾಡ, ಯಡನಾಡ, ಬಲನಾಡ, ಮೂರ್ನಾಡ, ಐವರ್ನಾಡ, ಬಪ್ಪನಾಡ, ಕಳನಾಡು, ಕೊಳನಾಡು, ಬನ್ನಾಡಿ, ಕಂಕನಾಡಿ, ಪಚ್ಚನಾಡಿ, ಮಂಜನಾಡಿ, ಲಾಡಿ, ಅಜಲಾಡಿ, ನೆಕ್ಕಿಲಾಡಿ. ರೆಂಜಲಾಡಿ, ಇವುಗಳಲ್ಲಿ ನಡ, ನಾಡ, ಲಾಡಿ, ಎಂಬ ಊರುಗಳುಬಹಳ ಪ್ರಾಚೀನವಾದುವುಗಳೆಂದು ನನಗನಿಸುತ್ತದೆ. ಕನ್ನಡ ಎಂದರೆ ಕಂನಾಡು 'ನಾಡಿ' ಎಂಬ ಪದವು 'ನಾಡ' ಎಂಬುದರ ರೂಪಾಂತರವೇ ಇರಬೇಕು. ಅಂತೆಯೇ 'ಲಾಡಿ' ಎಂಬುದು. ಆದರೆ ಇಲ್ಲಿ ವಿಚಾರ ಮಾಡತಕ್ಕ ಒಂದು ವಿಷಯವಿದೆ. ರಟ್ಟಾಡಿಯೊಡನೆ ರಾಜಾಡಿಯೂ ಇದೆ. 'ರಾಜ'ವೆಂಬುದು 'ಭೋಜ'ದ ಪರ್ಯಾಯ ಪದವಾಗಿ ಐತರೇಯ ಬ್ರಾಹ್ಮಣದಲ್ಲಿ ಉಪಯೋಗಿಸಿದೆ. ರಾಷ್ಟ್ರಕೂಟರೂ, ಭೋಜಕರೂ ನೆರೆ ರಾಷ್ಟ್ರಗಳಲ್ಲಿದ್ದುದು ಚಾರಿತ್ರಿಕ ವಿಷಯ. ಅಂತೆಯೇ ಲಾಟರೆಂದರೆ ರಾಷ್ಟ್ರಕೂಟರೇ ಆಗಿರುವರು. (ಲಾಟ-ರಾಟ.) ಈಗಿನ ಗುಜರಾತು ಹಿಂದಿನ ಲಾಟವೇ ಆಗಿದೆ. ಈ ರಾಷ್ಟ್ರಕೂಟರೂ, ಭೋಜಕರೂ, ಲಾಟರೂ ಪರಸ್ಪರ ಸ್ನೇಹದಿಂದ ಒಟ್ಟೊಟ್ಟಿಗೆ ಇದ್ದುದರ ಕುರುಹೋ ಎಂಬಂತೆ ನಮ್ಮ ನಾಡಿನಲ್ಲಿ ರಟ್ಟಾಡಿ, ರಾಜಾಡಿ, ಲಾಡಿ—ಗಳಿರುವುದು ಗಣನೀಯವಾಗಿದೆ. ಈ 'ಲಾಡಿ' ಎಂಬುದಕ್ಕೆ ಬೇರಾವ ಒಪ್ಪುವ ಅರ್ಥವನ್ನು ಕೊಡುವುದು ಉಚಿತವಾಗದೆಂದು ನನಗನಿಸುತ್ತದೆ. ಅಂತೂ ತುಳುನಾಡು, ಕರ್ನಾಟಕಗಳ ಪರಸ್ಪರ ಸಂಬಂಧವನ್ನು ಇವು ಸೂಚಿಸುವುವು.

ವಿಚಾರದ ತಿಳಿವಿಗೆ "ಕನ್ನಡದ ನೆಲೆ"ಯಿಂದ ಈ ಕೆಳಗಿನ ಪಾಠಗಳನ್ನು ಓದುಗರ ಮುಂದಿಡಲು ಬಯಸುತ್ತೇನೆ.

"ಇಂತಿದು ಕಂನಡದ ಮೂಲ ಜನಾಂಗ. ಕರ್ನಾಟರು ವೀರರು ಧೀರರೆಂದು ಹೆಸರು ಬಂದುದು ಈ ಜನಾಂಗದಿಂದ. ಈ ಜನಾಂಗವೇ ಈ ನಾಡಿನಜೀವಾಳ. ಇಂದು ಈ ಜನಾಂಗವು ಮಲೆನಾಡಿನಲ್ಲಿ ಮಾತ್ರ ಕಣ್ಣಿಗೆ ಬೀಳುವುದಾದರೂ ಪ್ರಾಚೀನಕಾಲ

ದಲ್ಲಿ ಇವರ ಅನೇಕ ಗುಂಪುಗಳು ಸಮಗ್ರ ಕರ್ನಾಟಕದಲ್ಲಿ ಹಬ್ಬಿಕೊಂಡಿದ್ದುವೆನ್ನಲು ಸಾಕಷ್ಟು ಆಧಾರಗಳಿವೆ. ಅದು ಏನೇ ಇದ್ದರೂ ನಾಡವರು ಈಗ ಅಷ್ಟೊಂದು ಅಲ್ಪ ಸಂಖ್ಯಾಕರಾಗಿರುವುದಕ್ಕೆ ಹಲವು ಕಾರಣಗಳಿವೆ. ಹೊರಗಣಿನಿಂದ ಈ ನಾಡಿನಲ್ಲಿ ನೆಲೆಸಲು ಬಂದ ಜನಗಳಲ್ಲಿ ಇವರ ಬಹು ಭಾಗವು ಬೆರೆತುಕೊಂಡಿರುವ ಸಂಭವವು ಉಂಟಲ್ಲದೆ ಇದಕ್ಕೆ ಇನ್ನೂ, ಎರಡು ಕಾರಣಗಳಿವೆ. ಅತಿ ಪ್ರಾಚೀನಕಾಲದಿಂದಲೂ ಇವರು 'ವೀರ' ಪೂಜಕರು. ವೀರ (ರುದ್ರ)ನ ಉಪಾಸಕರು. ಆದರೆ ಮುಂದೆ ಮಹಾವೀರನ ಅನುಯಾಯಿಗಳಾದವರು ಹಲವರು. ಇದಕ್ಕೆ ಗಂಗ ಅರಸುಮನೆತನವೇ ಸಾಕ್ಷಿ. ಲಿಂಗಧಾರಣೆಯ ಹೊಸ ಪಂಥಕ್ಕೆ ಸೇರಿದವರು ಹಲವರು. ರಡ್ಡಿ, ಕುಡು, ಒಕ್ಕಲಿಗ, ಗೌಡರು ಮೊದಲಾದ ಒಳಬಣಗಳು ಆ ಧರ್ಮದಲ್ಲಿ ಈಗಲೂ ಉಳಿದುಕೊಂಡಿರುವುದು. ಇದಕ್ಕೆ ದೃಷ್ಟಾಂತ. ಶ್ರೀವೈಷ್ಣವ ಮತ್ತು ಹರಿದಾಸನಾಥ ಪಂಥದ ದೀಕ್ಷೆ ಹೊಂದಿದವರೂ ಉಂಟು. ಆದರೂ ಜೈನ ಮತ್ತು ಲಿಂಗವಂತ ಇವೆರಡು ಪ್ರಸಾರಕ ಧರ್ಮಗಳ ಮಹಾ ಪ್ರವಾಹದಲ್ಲಿ ಸಿಲುಕಿ ತಮ್ಮ ಮೂಲಕುಲ ಗೋತ್ರಗಳನ್ನು ಸಂಪೂರ್ಣ ಮರೆತು ಬಿಟ್ಟವರು ಬಹಳ. ಮೂಲನಾಡವರಲ್ಲಿ ಒಂದೊಂದು ಕಾಲಪರಿಸ್ಥಿತಿಗೆ ಅನುಸಾರವಾಗಿ ಹಲವರು ಹಲವು ಬಗೆಯ ವೃತ್ತಿಗಳನ್ನು ಸ್ವೀಕರಿಸಿ ಜೀವನ ವ್ಯಾಪಾರವನ್ನು ಸಾಗಿಸಬೇಕಾಗಿರುವುದು ಸಹಜ. ಹಾಗೆ ದೇಶ ಕಾಲ ಉದ್ಯೋಗ ಭೇದದಿಂದ ಇವರಲ್ಲಿ ಒಳಪಂಗಡಗಳು ಹೆಚ್ಚು ಹೆಚ್ಚಾಗುತ್ತಾ ಹೋಗಿ ಕೊನೆಗೆ ತಾವು ಒಬ್ಬರಿಂದ ಒಬ್ಬರು ತೀರ ಬೇರೆ ಎನ್ನುವಂತಹ ಭಾವನೆಯಾಗಿರುವುದೂ ಸ್ವಾಭಾವಿಕವಾಗಿದೆ. ನಾಡವರು, ಬಂಟರು, ಒಕ್ಕಲರು, ಕುಡುವರು, ರಡ್ಡಿಗಳು, ಗಂಡಿಕಾರರು, ಗೌಡರು, ಕ್ಷತ್ರಿಯರು, ಬ್ರಹ್ಮಕ್ಷತ್ರಿಯರು, ಎಂಬೀ ಬಗೆಯ ಭೇದಾಭೇದಗಳು ಬೆಳೆದುದುಂಟು. ಆದರೆ ಮೊದಲಲ್ಲಿ ಇವೆಲ್ಲ ಜನಗಳು ಒಂದೇ ಬುಡಕಟ್ಟಿನವರೆಂದು ಸ್ವಲ್ಪ ಸೂಕ್ಷ್ಮ ನಿರೀಕ್ಷಣೆಯಿಂದ ಕಂಡುಕೊಳ್ಳಬಹುದಾಗಿದೆ. ಇಂತೀ ಬಗೆಯ ಆವುದೇ ಕಾರಣವಿರಲಿ ಕರ್ಣಾಟದ ಬಹುಭಾಗದೊಳಗಿನ ನಾಡವರ ಗುರುತು ಸಿಕ್ಕುವುದು ಇಂದು ಸಾಧ್ಯವಿಲ್ಲ. ಆದರೂ ಸುದೈವದಿಂದ ಕನ್ನಡದ ಮೂಲಿಗರು ಕನ್ನಡ ಜಿಲ್ಲೆಯಲ್ಲಿ ಕೆಲ ಮಟ್ಟಿಗಾದರೂ ಉಳಿದುಕೊಂಡಿದ್ದಾರೆ. ಕನ್ನಡದ ಮೂಲ ಜನಾಂಗದ ಗುಣ—ಸ್ವಭಾವ ರೂಪ ಆಕಾರಗಳು ಬಹಳ ಮಟ್ಟಿಗೆ ಇವರಲ್ಲಿ ಈಗಲೂ ಜೀವಂತವಾಗಿರುವುದನ್ನು ಕಾಣಬಹುದು. ಅರ್ವಾಚೀನ ಕಾಲದಲ್ಲಿ ಜೈನ ಧರ್ಮವು ಹಿಂದೆ ಬಿದ್ದು ಲಿಂಗವಂತರ ಪ್ರಾಬಲ್ಯವೇ ಹೆಚ್ಚಾಯಿತು. ಕನ್ನಡದ ಮೂಲಜನಾಂಗದ ಬಹುಭಾಗವು ಈ ಮತಾನುಯಾಯಿಗಳಲ್ಲಿ ಅಡಕವಾಗಿದೆ. ಅದರಿಂದ ಕನ್ನಡ ನಾಡವರ ಸ್ವಭಾವ,

ವೈಶಿಷ್ಟ್ಯವು ಲಿಂಗವಂತರಲ್ಲಿಯೂ ಉಂಟೆಂದು ಬೇರೆ ಹೇಳುವ ಕಾರಣವಿಲ್ಲ.

ನಾಟರು—ನಾಡವರು ಎಂಬ ಜನಗಳು ಈಗಲೂ ಉಂಟು. ಪ್ರಾಚೀನ ಕಾಲದಲ್ಲಿಯೂ ಇದ್ದುದನ್ನು, ಸ್ಮೃತಿ ಗ್ರಂಥಗಳಿಂದಲೂ, ಕನ್ನಡ ಸಾಹಿತ್ಯದಿಂದಲೂ ಕಂಡುಕೊಂಡುದಾಯ್ತು. ಇವರೇ ಕನ್ನಡದ ಮೂಲಿಗರು. ಆದುದರಿಂದ 'ಕನ್' ಎಂಬ ಜನಾಂಗವೆಂದರೆ ಇದೇ ಎಂದು ಊಹಿಸಲು ಅವಕಾಶವುಂಟೆಂಬುದನ್ನು ಅರಿತುಕೊಂಡುದೂ ಆಯ್ತು."

ಕಳೆದ ಎರಡು ಲೇಖನಗಳ ವಸ್ತು ನಿರೂಪಣೆಯಿಂದಲೂ ಈ ಲೇಖನದ ಸಾರದಿಂದಲೂ ಈ ಕೆಳಗಿನ ಮಹತ್ವದ ನಿರ್ಧಾರಗಳನ್ನು ಕಂಡುಕೊಳ್ಳ ಬಹುದಾಗಿದೆ.

ನಮ್ಮ ನಾಡಿನ ಜನರ ಬಾಳ್ವೆಯ ಪ್ರಗತಿಯಲ್ಲಿ ಮೂರು ಪ್ರಾಮುಖ್ಯವಾದ ಹಂತಗಳನ್ನು ಕಾಣಬಹುದು. ಅವೇ ಪಾಡು, ಕುಡು ಮತ್ತು ನಾಡು. ಮೊದಲು ತಲೆದೋರಿದ ಸ್ಥಳವಾಚಕಗಳು ಇವುಗಳು. ಕಾಲಕ್ರಮೇಣ ಇವುಗಳು ಅಲ್ಲಲ್ಲಿ ಹಲವು ಬೆಳೆದುಕೊಂಡು ಬಂದಂತೆ ಅವುಗಳ ರೂಪ ಮತ್ತು ಸ್ಥಳ ನಿರ್ದಿಷ್ಟತೆಗೆ ಇಂತಹ ಪಾಡಿ, ಇಂತಹ ಕುಡು, ಅಂತಹ ನಾಡು ಎಂದು ಪ್ರತ್ಯೇಕವಾಗಿ ನಾಮಕರಣ ಮಾಡುವ ಪ್ರಸಂಗವು ಬಂದುದರಿಂದ ಅದೇ ರೀತಿಯಲ್ಲಿ ಊರುಗಳು ಹೆಸರಿಸಲ್ಪಟ್ಟವು. ಆದುದರಿಂದ ನಮ್ಮ ನಾಡಿನ ಊರ ಹೆಸರುಗಳಲ್ಲಿ ಬರೆಪಾಡಿ, ಪಳ್ಳಿ, ಹಳ್ಳಿ, ಹಟ್ಟಿ, ಕುಡಿ, ನಾಡು ಎಂದಿರುವ ಸ್ಥಳಗಳು ಉಳಿದವುಗಳಿಗಿಂತ ಸಾಮಾನ್ಯವಾಗಿ ಹಳೆಯವು ಎಂಬುದಾಗಿ ಸ್ಥೂಲವಾಗಿ ಅಭಿಪ್ರಾಯ ಪಡೆಯಬಹುದು. ಉದಾಹರಣಾರ್ಥವಾಗಿ ಇನ್ನೊಮ್ಮೆ ಈ ಕೆಳಗಿನ ಸ್ಥಳನಾಮಗಳನ್ನು ಓದುಗರ ಮುಂದಿಡುತ್ತೇನೆ.

(1) ಪಾಡಿ (ಕಾಸರಗೋಡು)
(2) ನಡ (ಉಪ್ಪಿನಂಗಡಿ)
(3) ಹಳ್ಳಿ (ಉಡುಪಿ)
(4) ನಾಡ (ಕುಂದಾಪುರ)
(5) ಲಾಡಿ (ಮಂಗಳೂರು)
(6) ಕುದಿ (ಉಡುಪಿ)
(7) ಪಳ್ಳಿ (ಉಡುಪಿ)
(8) ಕುಡುಪು, ಕುಡಲ (ಮಂಗಳೂರು)
(9) ಕುಡಮ (ಪುತ್ತೂರು)

ನಮ್ಮ ನಾಡಿನಲ್ಲಿ ಅಧಿಕ ಸಂಖ್ಯೆಯಲ್ಲಿಯಿಂದ ದೇವಿ ಸಂಬಂಧವಾದ ದೇವಾಲಯಗಳೂ (ಗುಡಿಗಳು), ಶಿವ ಸಂಬಂಧವಾದ ಗುಡಿಗಳೂ ಇರುವುದು ನಮ್ಮ ಪ್ರಾಚೀನ ಇತಿಹಾಸದ ದೃಷ್ಟಿಯಿಂದ ಪ್ರಾಮುಖ್ಯವೆನಿಸಿದೆ. ಕಾರಣ ತುರುಕಾರರ ಇಷ್ಟದೇವತೆಯು 'ದೇವಿ'. ಅಂತೆಯೇ ಕನ್ನರ (ನಾಡವರ) ಇಷ್ಟ ದೈವತವು 'ಶಿವನು'

ಈ ದೇವರುಗಳನ್ನೆ ತುಳುವಿನಲ್ಲಿ "ಉಳ್ಳಾಯ ಮತ್ತು ಉಳ್ಳಾಳ್ತಿ" ಎಂದು ಸಂಬೋಧಿಸುವುದು. ಬ್ರಾಹ್ಮಣ್ಯದ ಪ್ರಾದುರ್ಭಾವದಂದಿನಿಂದ ಈ ಗುಡಿಗಳ ನಿರ್ಮಾಣ ಕ್ರಮದಲ್ಲಿಯೂ, ಪೂಜಾವಿಧಿಯಲ್ಲಿಯೂ ನಿಯಮ ಮತ್ತು ಕ್ರಮ ಬದ್ಧತೆ ಕಂಡು ಬಂದರೂ, ಅವರ ಆಗಮನಕ್ಕಿಂತ ಮೊದಲೇ ಈ ದೇವಿ ಮತ್ತು ಶಿವ ಪ್ರಧಾನವಾದ ಆಲಯಗಳು ಇದ್ದುವೆಂಬುದರಲ್ಲಿ ಸಂದೇಹವಿಲ್ಲ.

ಇನ್ನೊಂದು ಪ್ರಶ್ನೆಗೆ ಉತ್ತರ ಬಾಕಿ ಉಳಿದಿದೆ. ನಮ್ಮ ನಾಡಿನಲ್ಲಿ ಕ್ರಿ. ಶ. ಎರಡನೇ ಶತಮಾನದ ಮೊದಲಿನಿಂದಲೇ 14ನೇ ಶತಮಾನದ ತನಕ ಆಲೂಪರೆಂಬ ಅರಸರು ಆಳುತ್ತಿದ್ದರು ಎಂದು ಡಾ| ಸಲೆತೋರರು ಎಣಿಸುತ್ತಾರೆ. ಕ್ರಿ. ಶ. 6ನೇ ಶತಮಾನದಿಂದಲಂತೂ ಅವರು ಇಲ್ಲಿ ಆಧಿಪತ್ಯವನ್ನು ಸ್ಥಾಪಿಸಿದುದು ಖಂಡಿತವಾಗಿ ಕಂಡು ಬರುತ್ತದೆ. ಈ ಆಲೂಪರೆಂದರೆ ಯಾರು ಯಾವ ವಂಶದವರು ಎಂಬ ಕುರಿತು ಇನ್ನೂ ಭಿನ್ನಾಭಿಪ್ರಾಯಗಳಿವೆ. ಈ ಆಲೂಪರು ಆಳುವ, ಆಲುವ, ಆಲೂಪ ಅಳ್ವ, ಆಳುಕ ಎಂದು ಮುಂತಾಗಿ ಕರೆಯಲ್ಪಟ್ಟಿದ್ದುದು ಶಾಸನಗಳಿಂದಲೂ ಚರಿತ್ರೆಯಿಂದಲೂ ತಿಳಿದು ಬರುತ್ತದೆ. ಈ ಶಬ್ದದ ಉತ್ಪತ್ತಿಯನ್ನು ಬಲ್ಲವರು ನಾನಾ ವಿಧವಾಗಿ ಮಾಡಿದ್ದಾರೆ. ಶ್ರೀ ವೆಂಕೋಬರಾಯರು (Madras Govt. Epigrapist) ಆಳ್ ಎಂಬ ಧಾತುವಿನಿಂದ ಇದರ ಮೂಲವನ್ನೂ (ಆಳ್–ಆಳುವುದು) ಶ್ರೀಮಾನ್ ಗೋವಿಂದ ಪೈಗಳು ತಮಿಳಿನ ಆಧಾರದ ಮೇಲೆ,ಅಲು (ಸರ್ಪಗಳೆಂಬ ಅರ್ಥದಲ್ಲಿ) ಆಲುವ ಎಂದಾಗಿರಬಹುದಾದ ಸಂದೇಹವನ್ನೂ ವ್ಯಕ್ತ ಪಡಿಸುತ್ತಾರೆ. ಶ್ರೀ ಪೈಗಳು ಆಳುವ ಎಂದು ದೇಶ ಭಾಷೆಯಲ್ಲಿದ್ದ ಹೆಸರು ಸಂಸ್ಕೃತದಲ್ಲಿ ಆಲುವವಾಯಿತೆಂದೂ ತುಳು ನಾಡು ಸಮುದ್ರ ತೀರ ಭೂಮಿಯ ಪ್ರದೇಶವಾದುದರಿಂದ ಈ ಹೆಸರು ಬಂದಿರಬಹುದೆಂದೂ ಅನುಮಾನಿಸುತ್ತಾರೆ. ಆಲುಪರ ಶಿಲಾಸನ ಒಂದರಲ್ಲಿ ಮೇಲ್ಗಡೆ ಸುರುಳಿ ಹಾಕಿ ಕೂತು ಹೆಡೆಯನ್ನು ಬಿಟ್ಟಿದ್ದ ಹಾವಿನ ನಕ್ಷೆಯಿದ್ದುದರಿಂದ ಅವರು ನಿಜವಾಗಿಯೂ ನಾಗವಂಶದವರಾಗಿದ್ದರೆಂದು ಎಣಿಸಲೂ ಕಾರಣವಿದೆ. ಡಾ. ಸಲೆತೋರರೂ ತೃಪ್ತಿಕರವಾದ ಅಭಿಪ್ರಾಯವನ್ನೀಯುವುದಿಲ್ಲ. ಇನ್ನೂ ಕೆಲವು ಅನುಮಾನಗಳಿವೆ.

ಇವುಗಳ ವಿಮರ್ಶೆಯನ್ನು ಮುಂದಿನ ಲೇಖನದಲ್ಲಿ ಕೊಡುವೆನು.

---

1,2,3 — ಇವುಗಳ ಕಾಲನಿರ್ಣಯ ಮುಂದಕ್ಕೆ ಬರುವುದು.

4 — ನಾಡಿನ ಜನಸಾಮಾನ್ಯರಿಗೆ ನಾಡಿಗರೆಂಬುದು ಉಚಿತ. 'ನಾಡವ' ಎಂಬುದು ವಿಶಿಷ್ಟ ಜನವೆಂದು ಇದರಿಂದ ತಿಳಿಯಬಹುದು.

# ಆಳುವರೂ ನಾಡವರೇ ಆಗಿರುವರು

ತುಳುನಾಡನ್ನು ಆಳಿಕೊಂಡಿದ್ದ ಆಳುವರಸರ (ಆಳುಪರ) ಕುರಿತಾದ ವಿವರವನ್ನು ಕನ್ನಡ ನಾಡಿನ ಚರಿತ್ರೆಯ ಮೊದಲ ಭಾಗದಲ್ಲಿ ಡಾ। ಸಾಲೆತೋರರು ಈ ರೀತಿಯಾಗಿ ಕೊಟ್ಟಿದ್ದಾರೆ.

"ಬಾಣರು ಮೈಸೂರು ಸಂಸ್ಥಾನದ ಪೂರ್ವ ಪ್ರಾಂತಗಳಲ್ಲಿಯೂ, ತಮಿಳು ನಾಡಿನ ಕೆಲವು ವಿಭಾಗಗಳಲ್ಲಿಯೂ ಪ್ರಭುತ್ವ ಮಾಡುತ್ತಿದ್ದಾಗ, ಪಶ್ಚಿಮ ಕರ್ನಾಟಕದ ಬಹು ವಿಸ್ತಾರವಾದ ಭಾಗದಲ್ಲಿ ಪಶ್ಚಿಮ ಕರಾವಳಿಗೆ ಸೇರಿದ ಪ್ರಾಂತ ಒಂದನ್ನು ಆಳುಪರು ಆಳುತ್ತಿದ್ದರು. ಈ ದೊರೆಗಳು ಬಹಳ ಪ್ರಾಚೀನರು. ಅವರು ರಾಜ್ಯಭಾರ ಮಾಡಿದ ದೀರ್ಘವಾದ ಕಾಲದಿಂದ ತೀರ್ಮಾನಿಸುವುದಾದರೆ, ಕನ್ನಡ ನಾಡಿನ ಮಾಂಡಲಿಕರಲ್ಲಿ ಅವರು ಬಹಳ ಪ್ರಖ್ಯಾತರೆಂದು ಹೇಳಬೇಕಾಗುತ್ತದೆ. ಏಕೆಂದರೆ ತುಳುವನಾಡು (ಈಗಿನ ದಕ್ಷಿಣಕನ್ನಡ,) ಹೈವನಾಡು (ಈಗಿನ ಉತ್ತರ ಕನ್ನಡ) ಕೊಂಕಣ ಮತ್ತು ಪಶ್ಚಿಮ ಘಟ್ಟಗಳ ಮೇಲೆ ಕೆಲವು ಪ್ರಾಂತಗಳು—ಇವುಗಳ ಮೇಲೆಲ್ಲ ಕ್ರಿ. ಶ. ಸುಮಾರು ಒಂದನೆಯ ಶತಮಾನದಿಂದ ಹಿಡಿದು ಅವಿಚ್ಛಿನ್ನವಾಗಿ ೧೫ ಶತಮಾನಗಳ ಕಾಲ ಅವರು ರಾಜ್ಯಭಾರ ನಡೆಸಿದ್ದಾರೆ. ಅನಂತರ ಅವರು ಸಣ್ಣ ಪುಟ್ಟ ಪಾಳೆಯಗಾರರಾಗಿ ಪರಿಣಾಮ ಹೊಂದಿದರು.

ಅವರ ನಾಡಿಗೆ ಅಳ್ವಖೇಡ ೬೦೦೦ ಎಂಬ ಹೆಸರಿತ್ತು ಅವರ ರಾಜಧಾನಿ ತುಳುವ ನಾಡಿನ ಉದಯಾವರ. ಗ್ರೀಕರ ಭೂಗೋಳ ಶಾಸ್ತ್ರಜ್ಞನಾದ ತೊಲೆಮಿ ಈ ರಾಜ್ಯವನ್ನು ಒಲ್ಯೈಖೋರಾ ಎಂದು ಕರೆದಿದ್ದಾನೆ. ಆದರೆ ಮೊದಲಿನ ಆಳುಪರ ವಿಷಯವಾಗಿ ನಮಗೆ ಹೆಚ್ಚು ಸಂಗತಿಗಳು ತಿಳಿದಿಲ್ಲ. ನಮಗೆ ದೊರೆಯುವ ಮೊದಲನೆಯ ಐತಿಹಾಸಿಕ ಪುರುಷನಾದರೋ ಕ್ರಿ. ಶ. ೪೫೦ರಲ್ಲಿದ್ದ ದೊರೆಯಾದ ಆಳುಕ. ಕ್ರಿ. ಶ. ೬೭೫ರಿಂದ ೭೦೦ರ ವರೆಗೆ ಆಳಿದ ದೊರೆಯಾದ ಚಿತ್ರವಾಹನನು ಆಳುಪರಲ್ಲಿ ಪ್ರಖ್ಯಾತನು. ಇವನ ಕಾಲದಲ್ಲಿ ಕದಂಬಮಂಡಲದ ಒಂದು ಭಾಗ ಆಳುಪರ ಪ್ರಭುತ್ವಕ್ಕೆ ಒಳಪಟ್ಟಿತ್ತು. ಇದಲ್ಲದೆ ಚಿತ್ರವಾಹನನು ಪಶ್ಚಿಮಚಾಳುಕ್ಯಚಕ್ರವರ್ತಿಯಾದ ವಿನಯಾದಿತ್ಯನಿಗೆ (ಕಾಲ ಕ್ರಿ. ಶ. ೬೮೦—೬೯೬) ಮಾಂಡಲಿಕನಾಗಿಯೂ ಆತನ ಸಂಧಿ ವಿಗ್ರಹಿಯಾಗಿಯೂ ಇದ್ದನೆಂದು ತಿಳಿದು ಬರುತ್ತದೆ.

ಈ ವಂಶದ ಪ್ರಖ್ಯಾತ ರಾಜರುಗಳಲ್ಲಿ ಕವಿ ಭುಜಬಲ ಆಳುಪೇಂದ್ರ ಎಂಬವನೊಬ್ಬನು. ಈತನು ಕ್ರಿ. ಶ. ೧೧೧೩ರಿಂದ ೧೧೫೫ರ ವರೆಗೆ ಆಳಿದನು. ಈ ದೀರ್ಘವಾದ ರಾಜ್ಯಭಾರ ಕಾಲದಲ್ಲಿ ದೇಶದಲ್ಲೆಲ್ಲಾ ಶಾಂತಿಯೂ ಸುಭಿಕ್ಷವೂ ನೆಲಸಿದ್ದು

ವಲ್ಲದೆ ಪಲಿಬಟನಾಯಕನೆಂಬ ಒಬ್ಬ ಮಹಾತ್ಮನು ಜನಿಸಿದನು. ಆ ಮಹಾತ್ಮನ ದಾನಧರ್ಮಗಳೂ ದಯೆಯೂ ಗಾದೆಗಳಾಗಿ ಪರಿಣಮಿಸಿ ತುಳುವ ನಾಡಿನ ಜನರು ಇಂದಿಗೂ ಅವುಗಳನ್ನು ಕೃತಜ್ಞತೆಯಿಂದ ಸ್ಮರಿಸುತ್ತಿದ್ದಾರೆ.

ವಿಜಯನಗರ ರಾಜ್ಯ ಸ್ಥಾಪಿತವಾದ ಕಾಲದಲ್ಲಿ ಆಳ್ವಖೇಡ ೬೦೦೦ ಸೀಮೆಯನ್ನು ವೀರಕುಲ ಶೇಖರ ದೇವನು ಆಳುತ್ತಿದ್ದನು. ವಿಜಯ ನಗರ ರಾಜ್ಯಸ್ಥಾಪಕರು ಕ್ರಿ. ಶ. ೧೩೪೬ರಲ್ಲಿ ಶೃಂಗೇರಿಗೆ ಹೋಗಿ ಭಾರತೀ ತೀರ್ಥರಿಗೆ ಭಕ್ತಿ ಕಾಣಿಕೆಯನ್ನು ಸಲ್ಲಿಸಿದರು. ಅದೇ ವರ್ಷದಲ್ಲಿ ವೀರಕುಲ ಶೇಖರದೇವನೂ ಶೃಂಗೇರಿಗೆ ಹೋಗಿ ಅದೇ ಗುರುಗಳಿಗೆ ತನ್ನ ಭಕ್ತಿ ಕಾಣಿಕೆಯನ್ನು ಸಲ್ಲಿಸಿ ಬಂದದ್ದು ಒಂದು ಸ್ವಾರಸ್ಯವಾದ ವಿಷಯ. ವಿಜಯ ನಗರ ಸಂಸ್ಥಾಪಕರು ಶೃಂಗೇರಿಯ ಜಗದ್ಗುರುಗಳ ಸೇವಕರಿಗೆ ದತ್ತಿಗಳನ್ನು ಕೊಟ್ಟ ದಾನಶಾಸನದ ಕೆಳಗಡೆಯೇ ತಾನೂ ಅವರಿಗೆ ದತ್ತಿಗಳನ್ನು ಕೊಟ್ಟು ವೀರ ಕುಲಶೇಖರ ದೇವನು ಶಾಸನ ಬರೆಯಿಸಿದನು. ಹೀಗೆ ಕನ್ನಡ ನಾಡಿನ ಚರಿತ್ರೆಯಲ್ಲಿ ತುಳುವರೂ ವಿಜಯ ನಗರದವರೂ ಒಂದಾಗಿ ಹೊಸ ಪ್ರಕರಣವನ್ನು ಆರಂಭಿಸದರೆಂದು ವೀರ ಕುಲ ಶೇಖರನು ಬಹಿರಂಗವಾಗಿ ಸಾರಿರುವನು. ಈ ಹೊಸ ವಿಜಯ ನಗರದ ದೊರೆಗಳ ಮೇಲಾಳಿಕೆಯನ್ನು ಒಪ್ಪಿಕೊಂಡ ಆಳುಪರಲ್ಲಿ ವೀರಕುಲ ಶೇಖರ ದೇವನೇ ಮೊದಲಿಗನು.

ವಿಜಯ ನಗರ ಸಾಮ್ರಾಜ್ಯ ಬೆಳೆದು ಪ್ರಬಲವಾಗುತ್ತಿದ್ದಾಗ ತುಳುವ ನಾಡಿನಲ್ಲಿ ಆಳುಪರು ಸ್ವತಂತ್ರವಾಗಿರುವುದು ಸಾಧ್ಯವಾಗದ ವಿಷಯ. ಆಳುಪರಸ್ವಾತಂತ್ರ್ಯ ಶೀಘ್ರದಲ್ಲಿ ಕೊನೆಗೊಂಡಿತು. ಈ ಮನೆತನದ ಕೊನೆಯ ದೊರೆಯಾದ ಮುಮ್ಮಡಿ ವೀರ ಕುಲ ಶೇಖರ ದೇವನು ವಿಜಯ ನಗರ ಚಕ್ರವರ್ತಿಗಳ ಆಜ್ಞಾಧಾರಕನಾಗಿ ಕ್ರಿ. ಶ. ೧೪೪೧ರಿಂದ ೧೪೪೪ರ ವರೆಗೆ ತುಳುವನಾಡನ್ನಾಳಿದನು”

ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸದಲ್ಲಿ “ಆಲುಪ ಅರಸರು” ಎಂಬ ಶಿರೋನಾಮದ ಕೆಳಗೆಕೊಟ್ಟಿರುವ ವಿಷಯಗಳಿಂತಿವೆ.

“ಆಲೂಪ ಅರಸರು ಯಾರೆಂದೂ ಯಾವ ವಂಶದವರೆಂದೂ ಇಷ್ಟರ ವರೆಗೆ ತಿಳಿದು ಬರಲಿಲ್ಲ. ಮಂಗಳೂರು ಗೊಲ್ಲರ ಗಣಪತಿಯ ದೇವಸ್ಥಾನದ ಮುಂದುಗಡೆ ಇರುವ ಶಾಸನದ ಮೇಲ್ಗಡೆಯಲ್ಲಿ ಸುರುಳಿ ಹಾಕಿ ಕೂತು ಹೆಡೆಯನ್ನು ಬಿಚ್ಚಿದ ಹಾವಿನ ನಕ್ಷೆಯು ಇದೆ. ಇದರ ಮೂಲಕ ಇವರು ಸುಬ್ರಹ್ಮಣ್ಯನನ್ನು ಪೂಜಿಸುತ್ತಿದ್ದರೆಂದೂ ಅಥವಾ ಇವರು ನಾಗವಂಶಕ್ಕೆ ಸೇರಿದವರೆಂದೂ ಊಹಿಸಬಹುದು. ಈ ನಾಗವಂಶವು ಹಿಂದೂದೇಶದ ಎಲ್ಲಾ ಕಡೆಗಳಲ್ಲಿಯೂ ಹರಡಿಕೊಂಡಿದೆ.

ಇವರ ವಿಷಯ ಇಷ್ಟರ ವರೆಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಿಕ್ಕಿದ ಶಾಸನಗಳು ಉಡುಪಿಯ ಹತ್ತಿರವಿರುವ ಉದ್ಯಾವರಶಂಭುಕಲ್ಲುಭೈರವದೇವಸ್ಥಾನದಲ್ಲಿಯೂ ಅದರ ಸುತ್ತುಮುತ್ತಲೂ 12 ಶಾಸನಗಳು, ಮಂಗಳೂರು ಗೊಲ್ಲರ ಗಪಣತಿ ದೇವ

ಸ್ಥಾನದ ಮುಂದಡೆಯಲ್ಲಿ 1, ಮಂಗಳೂರು ಅತ್ತಾದರ ಚಕ್ರಪಾಣಿ ದೇವಸ್ಥಾನದಲ್ಲಿ 1, ಮೂಡಬಿದ್ರೆ ಗೌರೀ ದೇವಸ್ಥಾನದಲ್ಲಿ 3, ಬಾರಕೂರು ಮಡಿಕೇರಿ ಸೋಮೇಶ್ವರ ದೇವಸ್ಥಾನದಲ್ಲಿ 2, ಬಾರಕೂರು ಮಣಿಗಾರಕೇರಿ ಸೋಮನಾಥೇಶ್ವರ ದೇವಸ್ಥಾನದಲ್ಲಿ 1, ಬಾರಕೂರು ಕೋಟೆಕೇರಿ ಪಂಚಲಿಂಗೇಶ್ವರ ದೇವಸ್ಥಾನದಲ್ಲಿ 2, ಕಾಪು ಪೇಟೆಯ ಬೀದಿ ಅಶ್ವತ್ಥಕಟ್ಟೆಯ ಹತ್ತಿರ 1, ಕದರೆ ಮಂಜುನಾಥ ದೇವಸ್ಥಾನದ ಭಾಗಲಲ್ಲಿ 1. ಹೀಗೆ 24 ಶಾಸನಗಳು ಬೇರೆ ಕಡೆಗಳಲ್ಲಿ ಅಹಿಹೊಳೆಯಲ್ಲಿ 1, ಸೊರಬದಲ್ಲಿ 1) ಹರಿಹರದಲ್ಲಿ 1, ಮಹಾಕೂಟ ವಿಜಯಸ್ತಂಭದಲ್ಲಿ 1, ಹೀಗೆ ನಾಲ್ಕು ಶಾಸನಗಳು.

ಈ ಶಾಸನಗಳಿಂದ ಅಲೂಪ ಅರಸರು ಕ್ರಿ. ಶ. 567ರಿಂದ ಕ್ರಿ. ಶ. 1325ರ ವರೆಗೆ[1] ಬೇರೆ ಬೇರೆ ಕಡೆಗಳಲ್ಲಿ ಎಂದರೆ ಉತ್ತರಕನ್ನಡಮತ್ತುಪಯಸ್ವಿನಿಯವರೆಗಿನತುಳುರಾಜ್ಯವನ್ನು ಆಳುತ್ತಿದ್ದರೆಂದು ತಿಳಿಯಬಹುದು. ಮಹಾಕೂಟ ವಿಜಯ ಸ್ತಂಭದ ಮೇಲಿನ ಶಾಸನದಿಂದ ಕ್ರಿ. ಶ. 567ರಲ್ಲಿಯೂ ಕ್ರಿ. ಶ. 597ರಲ್ಲಿಯೂ ಪಶ್ಚಿಮಚಾಲುಕ್ಯರ ಅರಸನಾದ 1ನೇ ಕೀರ್ತಿವರ್ಮನು ಇವರನ್ನು ಜಯಿಸಿದನೆಂದೂ ಇವರು ಶೇಷವಂಶ(ನಾಗ)ದವರೆಂದೂ ಇದೆ. ವಿನಯಾದಿತ್ಯನ ಶಾಸನದಲ್ಲಿ ಇವರು ಇಡೆವೊಳಲು ವೈಶ್ಯದಲ್ಲಿ ಮಂಡಲೇಶ್ವರರಾಗಿ ಆಳುತ್ತಿದ್ದರೆಂದೂ ಇದೆ. ಇಡೆ ಒಳಲು ಬನವಾಸಿಯ ಈಶಾನ್ಯಕ್ಕಿದೆ. ಅಹಿಹೊಳೆಯ ಶಾಸನ ಪ್ರಕಾರ ಕ್ರಿ. ಶ. 608ರಲ್ಲಿ 2ನೇ ಪುಲಕೇಶಿಯು ಗಂಗರಾಜರನ್ನು ಜಯಿಸಿದ ಮೇಲೆ ಅಲೂಪರನ್ನು ಜಯಿಸಿದನೆಂದು ಇದೆ. ಕ್ರಿ. ಶ. 694ರ ವಿನಯಾದಿತ್ಯನ ಶಾಸನದಿಂದ ಅಲೂಪರು ಪಶ್ಚಿಮ ಚಾಲುಕ್ಯರ ವಂಶಪಾರಂಪರ್ಯ ಕೆಲಸಗಾರರಾಗಿದ್ದರೆಂದು ತಿಳಿದುಬರುತ್ತದೆ. ಕ್ರಿ. ಶ. 1692ರ ಸೊರಬದ ವಿನಯಾದಿತ್ಯನ ಶಾಸನದಿಂದ, ವಿನಯಾದಿತ್ಯನು ತೊರೆವೂರ ವೈಶ್ಯದ ಚಿತ್ರಸೇದು ಗ್ರಾಮದಲ್ಲಿ ದಂಡವನ್ನು ಇಳಿಸಿಕೊಂಡಿರುವಾಗ ಅಲೂಪ ಅರಸು ಗುಣಸಾಗರನ ಮಗ, ಮಹಾರಾಜ ಚಿತ್ರವಾಹನನ ಅಪೇಕ್ಷೆ ಪ್ರಕಾರ ಇಡೆವೊಳಲು ವೈಶ್ಯದ ಸಾಲಿವೊಗೆ ಗ್ರಾಮವನ್ನು ದೇವಸ್ಥಾನಕ್ಕೆ ಉಂಬಳಿ ಬಿಟ್ಟನೆಂದು ಕಾಣುತ್ತದೆ. 694ರ ಶಾಸನದಿಂದ ಇಡೆವೊಳಲು ವೈಶ್ಯದ ಕಿರುಕಾಗಾನೂಸಿ ಗ್ರಾಮವನ್ನು ಆಲೂಪ ಅರಸನ ಅಪೇಕ್ಷೆ ಪ್ರಕಾರ ವಿನಯಾದಿತ್ಯನು ಉಂಬಳಿ ಬಿಟ್ಟನೆಂದೂ ಇದೆ. ಇದರಿಂದ ಅಲೂಪರು 694ರ ವರೆಗೆ ಇಡೆವೊಳಲು ವೈಶ್ಯದ ಮಂಡಲೇಶ್ವರರಾಗಿರಬಹುದೆಂದೂ ಹೇಳಬಹುದು. ಅನೇಕ ವರ್ಷಗಳವರೆಗೆ ಇವರು ಉಡುಪಿಯ ಹತ್ತಿರವಿರುವ ಉದಯಪುರ (ಉದ್ಯಾವರ)ವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿಕೊಂಡಿದ್ದರು. ರಾಜ್ಯಭಾರದ ಕೊನೆಯ ಭಾಗದಲ್ಲಿ ಮಂಗಳೂರನ್ನು ರಾಜಧಾನಿಯಾಗಿ ಮಾಡಿ ಆಳುತ್ತಿದ್ದರು. ಇವರ ಕಾಲದಲ್ಲಿ ಮಂಗಳೂರು

(೪) ಹೊಯ್ಸಳ I ನರಸಿಂಹನ ಆಳಿಕೆಯ (ಕ್ರಿ. ಶ. ೧೧೪೧–೧೧೭೩) ಸರ್ವಧಾರಿ ಸಂ||ರದ (ಶಾ. ಶ ೧೦೮೮) ವೈಶಾಖ ಅಮಾವಾಸ್ಯೆ ಸೋಮವಾರ – ಕ್ರಿ ಶ. ೧೧೬೬ನೇಯ ಮೇ ೧ನೇ ತಾರೀಕು ಆದಿತ್ಯವಾರದ (ಸೂರ್ಯಗ್ರಹಣದ) ಮಾರನೆಯ ೨ನೆಯ ತಾರೀಕು ಸೋಮವಾರದಂದಿನ ಕುಂಬಾಳು ಶಿಲಾ ಲೇಖನದಲ್ಲಿ 'ಪಡುವಲಾಳ್ವಖೇಡ'

(೫) ಹೊಯ್ಸಳ II ವೀರ ಬಲ್ಲಾಳನ ಆಳಿಕೆಯು (ಕ್ರಿ. ಶ. ೧೧೭೩—೧೨೨೦) ತೇದಿ ಇಲ್ಲದ ಸಂತೆ ಶಿವರದ ಶಿಲಾಲೇಖನದಲ್ಲಿ 'ಆಳ್ವರ ಖೇಡ' ಅತಏವ ಪ್ತೊಲೆಮಿಯ (Olokhoira) ನೇರಾಗಿ ಆಳುವ ಖೇಡ—ಆಳ್ವಖೇಡದ ಗ್ರೀಕ ರೂಪಾಂತರವೆಂದು ಸ್ಪಷ್ಟವಾಗುತ್ತದೆ.

ಆದರೆ ಪ್ತೊಲೆಮಿಯು (Olokhoira) ವನ್ನು ಒಂದು ಒಳಊರು (inland city) ಎಂದಿರುವನಷ್ಟೆ, ಅದೆಂತು ನಾಡಿನ ಹೆಸರಾಗಿರಬಹುದು? ಎಂದರೆ ಅದ ಸಮಾಧಾನ ಹೇಗಿದೆ:—

ಆಳುವ (ಆಳ್ವ) ಖೇಡ ಎಂಬ ಸಮಸ್ತ ನಾಮದ ಪರಪದದ ನೇರಾದ ಸಂಸ್ಕೃತ ರೂಪವು ಖೇಟ ಎಂದು. ಸಂಸ್ಕೃತದಲ್ಲಿ ಆ ಹೆಸರು ಆಲುವ ಖೇಟ ಎಂದು. ಖೇಟವೆಂದರೆ ಗ್ರಾಮವೆಂದೇ ಮೂಲಾರ್ಥವಾದರೂ, ಕರ್ಣಾಟಕದ ಚಕ್ರವರ್ತಿಗಳಾಗಿದ್ದ ರಾಷ್ಟ್ರಕೂಟರ ರಾಜಧಾನಿಯ ಹೆಸರು ಮಾನ್ಯ ಖೇಡ (ಅಂದರೆ ಈಗಣ ಹೈದರಾಬಾದು ಸಂಸ್ಥಾನದಲ್ಲಿಯ ಮಾಲಖೇಡ) ಎಂಬುದನ್ನು ಇಲ್ಲಿ ಮನವರಿಸಿಕೊಂಡರೆ, ಖೇಟ ಎಂದು ಗ್ರಾಮಕ್ಕೇ ಅಲ್ಲ, ನಗರಕ್ಕೂ ಹೆಸರಿರುವಂತೆ ತಿಳಿಯುವುದರಿಂದ ಒಮ್ಮೆ ಗ್ರಾಮವಾಗಿದ್ದು ಕ್ರಮೇಣ ನಗರವಾದ ಊರು ಆ ಮೇಲೂ ವಾಡಿಕೆಯಾಗಿ ಮಾನ್ಯ ಖೇಡದಂತೆ ಅಮುತ ಖೇಟ ಎಂದು ಆ ಹಿಂದಣ ಹೆಸರಿನಿಂದಲೇ ಕರೆಯಲ್ಪಡುತ್ತವೆಂದು ವ್ಯಕ್ತವಾಗುತ್ತದೆ. ಹಾಗಾದರೆ ಆಲುವ ಎಂದು ತುಳುನಾಡಿಗೇ ಹೆಸರಿತ್ತೆಂದು ಪ್ರಪಂಚ ಹೃದಯದಿಂದ ಸ್ಪಷ್ಟವಾಗಿ ತಿಳಿಯುವುದರಿಂದ, ಒಮ್ಮೆ ಗ್ರಾಮವಾಗಿದ್ದು ಕ್ರಮೇಣನಗರವೂ (ಪ್ತೊಲೆಮಿಯಲ್ಲಿ Olokhiora 'city'=ನಗರ ಎಂದಿರುವುದನ್ನು ಇಲ್ಲಿ ನೆನವರಿಸಬಹುದು) ಪ್ರಾಯಶಃ ಮುಖ್ಯಪಟ್ಟಣವೂ ಆದ ಊರಿಗೆ ಆ ಮೇಲೂ ತನ್ನದೇ ಆದ ಸ್ವತಂತ್ರ ಹೆಸರಿಲ್ಲದೆ, ತುಳುನಾಡಿನ ಆಲುಪ ಎಂಬ ಹೆಸರಿನಿಂದಲೇ ಅದು ಆಲುವಖೇಟ ಎಂದು ಕರೆಯಲ್ಪಡುತ್ತಿರಬೇಕು ಮತ್ತು ಅದನ್ನೇ ಪ್ತೊಲೆಮಿ Olokhoira ಎಂದಿರಬೇಕು. ಆ ಪಟ್ಟಣವನ್ನು ಪ್ತೊಲೆಮಿಯಲ್ಲಿ 'inland city' ಎಂದಿರುವುದರಿಂದ ಅದು ಪ್ರಾಯಶಃ ಸಮುದ್ರದ ದಂಡೆಯಲ್ಲೇ ಇದ್ದಿರದೆ (ಈಗ ಮಂಗಳೂರು ಇರುವಂತೆ) ಕಿಂಚಿದ್ದೂರದಲ್ಲಿ ಸಮುದ್ರಗಾಮಿಯಾಗುವ ನದಿಯ ತೀರದಲ್ಲಿಯೋ, ಇಲ್ಲವೆ (ಈಗ

ಉಡುಪಿ, ಬಾರಕೂರು ಇರುವಂತೆ) ಮತ್ತೂ ಒಳಗಡೆಯಲ್ಲಿಯೋ ಇದ್ದಿರಬೇಕು. (ಮಂಗಳೂರು ತಾಲೂಕಿನ ಅಳಪೆ ಎಂಬ ಊಗಣಹಳ್ಳಿ ಆಲುವಖೇಟವಾಗಿರಬಹುದೆ?)

ಮೇಲೆ ಉದ್ಧರಿಸಿರುವ ಶಾಸನಗಳಲ್ಲಾದರೆ ಮೂವಳಿಯ ಶಾಸನದಲ್ಲಿ ಹೇಳಿರುವ 'ಆಳುವ ಖೇಡ ಮರುಸಾಸಿರ'ದಲ್ಲಿಯೂ, ದಬ್ಬೆಯ ಹಾಗೂ ಸಿಂದಗಿರಿಯ ಶಾಸನಗಳಲ್ಲಿ ಕೊಂಕಣ ನಾಡಿನ ಜತೆಯಲ್ಲಿ ಹೇಳಿರುವ ಆಳ್ವಖೇಡದಲ್ಲಿಯೂ ಆಳುವ ಖೇಡ-ಆಳ್ವಖೇಡ ಎಂದರೆ ತುಳುನಾಡೇ ಎಂದು ನಿಸ್ಸಂಶಯವಾಗಿ ವ್ಯಕ್ತವಾಗುವುದರಿಂದ. ಮುಖ್ಯ ಪಟ್ಟಣದ ಹೆಸರಿನಿಂದ ಇಡೀ ನಾಡಿಗೂ ಅದೇ ಹೆಸರಾಗುವ (ಉದಾ – ಅಯೋಧ್ಯಾದೇಶ, ಅವಂತೀದೇಶ, ಬನವಾಸೀದೇಶ, ಮೈಸೂರು ರಾಜ್ಯ, ಧಾರವಾಡಜಿಲ್ಲೆ, ಮಂಗಳೂರು ತಾಲೂಕು ಇ.) ಸಾರ್ವತ್ರಿಕವೂ ಸಾರ್ವಕಾಲಿಕವೂ ಆದ ಪದ್ಧತಿಯ ಮೇರೆಗೆ (ಪ್ರಾಯಶಃ ಪ್ರೊ.ಲೆವಿಯಿಂದ ಈಚೆ) ತುಳುನಾಡಿಗೂ ಆಳುವ ಖೇಡ– ಆಳ್ವಖೇಡ ಎಂದು ಹೆಸರಾಗಿರಬೇಕು.

ತುಳುನಾಡಿನಲ್ಲೇ ಅಲ್ಲ ಗಟ್ಟದ ಮೇಲಣ ನಾಡಿನಲ್ಲೂ ಬಹಳ ಹಳಗಾಲದಿಂದ ಆಳುಪ, ಆಳುವ ಹಾಗೂ ಆಳ್ವ, ಆಳು ಎಂಬ ಉಪನಾಮವಿದ್ದ ಅರಸರು ಆಳುತ್ತಿದ್ದರು. ತುಳುನಾಡಿನಲ್ಲಿ ಅವರು ಕ್ರಿ. ಶ. ೧೫ನೆಯ ಶತಮಾನದ ವರೆಗೆ ಆಳಿರಬೇಕು. ಗಟ್ಟದ ಸೀಮೆಯಲ್ಲಿ ಅವರ ಶಾಸನಗಳು ಕೆಲವೇ ಇದ್ದು, ಇಲ್ಲಿ ಹಲವಿರುಪಿವರಿಂದ ಮಾತ್ರವಲ್ಲ, ಅಲ್ಲಿಯ ಶಾಸನಗಳಿಗಿಂತ ಎಷ್ಟೋ ಈಚೆಯವೂ, ಎಷ್ಟೋ ಹಳೆಯವೂ ಇಲ್ಲಿರುವುದರಿಂದಲೂ (ವಿಜಯ ನಗರದ ತುಳುವ ವಂಶದ ಅರಸರು ಇಲ್ಲಿಂದ ಹೋಗಿ ಅಲ್ಲಿ ಕ್ರಿ. ಶ. ೧೪೯೬ರಿಂದ ೧೫೬೭ರವರೆಗೆ ಆಳಿದಂತೆ) ಅವರು ಪ್ರಾಯಶಃ ತುಳುನಾಡಿನಿಂದಲೇ ಹೋಗಿರಬೇಕು. ಅವರ ಉಪನಾಮಕ್ಕೂ ತುಳುನಾಡಿನ ಆಲುವ ಎಂಬ ಹೆಸರಿಗೂ ಬಹಳ ನಿಕಟವಾದ ರೂಪಸಾಮ್ಯವಿರುವುದರಿಂದ, ಪ್ರಾಯಶಃ ಅವರ ಉಪನಾಮದಿಂದ ತಾನೆ ತುಳುನಾಡಿಗೆ ಆ ಹೆಸರಾಗಿರಬಹುದೊ ಎಂದು ಪ್ರಥಮ ದೃಷ್ಟಿಗೆ ಹೊಳೆಯದಿರದು. ಆದರೆ ಚೋಳ ಎಂಬದೇಶದ ಹೆಸರಿನಿಂದ ಅಲ್ಲಿಯ ಅರಸರಿಗೆ ಚೋಳರೆಂದೂ, ಪಾಂಡ್ಯ ಎಂಬ ದೇಶದ ಹೆಸರಿನಿಂದ ಅಲ್ಲಿಯ ಅರಸರಿಗೆ ಪಾಂಡ್ಯರೆಂದೂ ಹೆಸರಾದುದನ್ನು ಇಲ್ಲಿ ನೆನವರಿಸಿದರೆ ಹಾಗೂ ಕೇರಲ ಎಂದು ಸಂಸ್ಕೃತಿಸಲ್ಪಟ್ಟ ದೇಶದ ಹೆಸರು ಮೂಲ ತಮಿಳಿನಲ್ಲಿ ಚೇರ ಎಂದು, ಚೇರು ಎಂದರೆ ಕೆಸರು, ಆ ಕೇರಳ ದೇಶದ ಅರಸರಿಗೆ ಕೇರಳವೆಂದು ಉಪನಾಮವಿತ್ತು. (ಉದಾ: ವೀರ ಕೇರಳ ತಿರುವಡಿ, ಕ್ರಿ. ಶ. ೧೧೨೬— ೧೧೫೦;ರವಿ ಕೇರಳ ಕ್ರಿ. ಶ. ೧೨೧೬- ೧೨೩೭) ಎಂಬುದನ್ನೂ ಮನವರಿಸಿದರೆ ದೇಶದ ಹೆಸರುಗಳಿಂದ ತಾನೆ ಅರಸರಿಗೆ ಆಯಾ ಉಪನಾಮಗಳೋ, ವಂಶನಾಮಗಳೋ ಆಗುವುದಲ್ಲದೆ, ಅರಸರ ಹೆಸರುಗಳಿಂದ ಊರುಗಳಿಗೆ ಹೆಸರಾಗಬಹುದಾ

ದರೂ ದೇಶಗಳಿಗೆ ಹೆಸರಾಗವೆಂದು ಸ್ವಯಮೇವ ಸಿದ್ಧವಾಗುತ್ತದೆ. ಹಾಗಾದರೆ ತುಳುನಾಡಿನ ಆಲುವ ಎಂಬ ಹೆಸರಿನ ಮೂಲಾರ್ಥವೇನು? ಅದರ ವ್ಯುತ್ಪತ್ತಿ ಹೇಗಿರಬಹುದು? ಈ ಒಗಟನ್ನು ಹೀಗೆ ಇಬ್ಬಗೆಯಾಗಿ ಬಿಡಿಸಬಹುದು.

(೧) ಮೇಲೆ ಕಂಡಿರುವ ಮಹಾಕೂಟದ ಸ್ತಂಭಲೇಖದಲ್ಲಿ (ಕ್ರಿ. ಶ. ೬೦೨) ಕೇರಲ-ಮೂಷಿಕದೇಶಗಳ ಮುಂದೆಯೇ ಹಾಗೂ ವೈಜಯಂತಿ ಎಂಬ ಬನವಾಸಿಯ ಜತೆಯಲ್ಲೇ ಆಳುಕ ಎಂಬ ದೇಶವನ್ನು ಹೇಳಿದೆ. ಅತ ಏವ ಆ ಆಳಕ ದೇಶವು ತುಳುನಾಡು ಎಂಬಲ್ಲಿ ಸಂಶಯವಿಲ್ಲ. ಈಗ ಆದಿಶೇಷನಿಗೆ ಆಲುಕ ಎಂದು ಹೆಸರಿದೆ.

ಶೇಷೋ ನಾಗಾಧಿಪೋಽನಂತೋದ್ವಿಸಹಸ್ರಾಕ್ಷ ಆಲುಕಃ ।

ಆಲುಕದ ಸ್ವಾರ್ಥದ ಕ-ಪ್ರತ್ಯಯವನ್ನು ಕಳಚುತ್ತಲೆ (ಸ್ವಾರ್ಥೇಕನ್) ಆ ಹೆಸರಿಗೆ ಆಲು ಎಂಬ ರೂಪವೂ ಇದ್ದಿರುವಂತೆ ತಿಳಿಯುತ್ತದೆ. ನೀರ ಹಾವಿಗೆ ಸಂಸ್ಕೃತದಲ್ಲಿ 'ಅಲ' ಎನ್ನುತ್ತಾರೆ. ತಮಿಳಿನಲ್ಲಿ ವಿಷಕ್ಕೆ ಆಲ್, ಆಡಂ (ಉದಾ: ಆಲಕಂಟನ್=ವಿಷಕಂಠನಾದ ಶಿವ) ಎಂದೂ, ಸರ್ಪಕ್ಕೆ ಆಲವಾಯ್ (=ಬಾಯಲ್ಲಿ ವಿಷ ಉಳ್ಳದ್ದು) ಎಂದೂ ಶಬ್ದಗಳು ದೊರೆಯುತ್ತವೆ. ಜೀಮೂತವಾಹನನ ಕಥೆಯಿಂದ ಹಳಗಾಲದಲ್ಲಿ ಇಲ್ಲಿ ಸರ್ಪಲಾಂಛನರಾದ ನಾಗರೆಂಬ ಜನರಿದ್ದರೆಂದು ಮೇಲೆ ಕಂಡಿರುವೆವಷ್ಟೆ! ಅವರ (ಕರಾವಳಿಯ ನಾಗರೆಂಬ ಕಾರಣನೀರಹಾವುಗಳೆಂಬ ಅರ್ಥದಲ್ಲಿ) ಅಲ, (ಆದಿಶೇಷನ ಸಂತತಿಯವರೆಂಬ ಅರ್ಥದಲ್ಲಿ) ಆಲು,(ಸರ್ಪಗಳೆಂಬ ಅರ್ಥದಲ್ಲಿ) ಆಲುವಾಯ್ ಇತ್ಯಾದಿ ಹೆಸರುಗಳಿಂದ ಆಲುವ ಎಂದು ಹೆಸರಾಗಿಬಹುದೋ ಎನಿಸುತ್ತದೆ.

(೨) ತುಳುವಿನಲ್ಲಿ ಸಾಹಿತ್ಯವಿಲ್ಲದ ಕಾರಣ ಬಹಳ ಹಳೆಯ ಶಬ್ದಗಳನ್ನು ಕಾಪಾಡಿಕೊಂಡಿಲ್ಲ. ಕನ್ನಡದಲ್ಲಿ ಹೇರಳ ಹಳೆಯ ಶಬ್ದಗಳು ಅಪುನಃಪ್ರಾಪ್ಯವಾಗಿ ತೀರ ನಷ್ಟವಾಗಿವೆ. ಆದರೆ ಕನ್ನಡಕ್ಕೂ ತುಳುವಿಗೂ ಸಗೋತ್ರವಾಗಿರುವ ತಮಿಳಿನಲ್ಲಿ ಈ ವರೆಗೂ ಕಾದಿರಿಸಿಕೊಂಡಿರುವ ಯಾವ ಹಳೆಯ ಶಬ್ದಗಳಿವೆಯೋ ಅವುಗಳಿಗೆ ಸರೂಪವಾಗಿದ್ದ ಶಬ್ದಗಳು ಕನ್ನಡದಲ್ಲೂ ತುಳುವಿನಲ್ಲೂ ಒಮ್ಮೆ ಇದ್ದಿರಬೇಕೆಂದು ಬೇಕಾದಷ್ಟು ನಿಶ್ಚಯವಿದೆ; ಅತ ಏವ ಅಂಥವನ್ನು ತಮಿಳಿನಲ್ಲಿ ಹುಡುಕಾಡಬೇಕು. ಈಗ, ತಮಿಳಿನಲ್ಲಿ ಅಳಿವಿ, ಅಳಿವು=ಕನ್ನಡದಲ್ಲಿ ಅಳವೆ, ಅಳುವೆ, ಅರುವೆ=ನದೀಮುಖ (mouth of a river, bar); ತಮಿಳಿನಲ್ಲಿ ಅಳುವಂ=ಆಳವಾದ ಸಮುದ್ರ; ಅಳುವಾಯ್=ಮರಳಿನ ದಿಣ್ಣೆ ಅಥವಾ ರೇವು (sandbank or harbour): ಆವೆ=ಆಳವಾದ ಸಮುದ್ರ, ಸಮುದ್ರದ ದಂಡೆ ಎಂಬ ಈ ಶಬ್ದಗಳನ್ನು ಪರಿಶೀಲಿಸಿದರೆ, ತುಳುನಾಡು ಸಮುದ್ರದ ತೀರ ಭೂಮಿಯಾಗಿರುವ ಕಾರಣ ಮಲೆಗಳಿಂದ ಮಲೆಯಾಳ (Malabar) ಎಂದೂ, ಮರುಭೂಮಿಯಿಂದ ಮರು,

ಮರವಃ (Marawar) ಎಂದೂ, (ಸಾಲ್ವಾಸ್ತು ಕಾರಕುಕ್ಷಿಯಾ 'ಮರವಸ್ತ್ರುದ ಕೇರಕಾ'-ಅಭಿಧಾನ ಚಿಂತಾಮಣಿ, ಶ್ಲೋ। ೯೫೭) ದೇಶನಾಮವಾದಂತೆ, ಅದಕ್ಕೆ ದೇಶಭಾಷೆಯಲ್ಲಿ ಆಳುವ, ಆಳುವ ಎಂದು ಹೆಸರಿದ್ದು, ತಮಿಳಿನಲ್ಲಿ ಚೋಳ ಎಂದಿರುವ ದೇಶನಾಮವು ಸಂಸ್ಕೃತದಲ್ಲಿ ಚೋಲ ಎಂದಾಗಿರುವ ಮೇರೆಗೆ, ಈ ನಾಡಿಗೆ ಸಂಸ್ಕೃತದಲ್ಲಿ ಆಲುವ ಎಂದು ಹೆಸರಾಗಿರಬೇಕೆಂದು ನಿಶ್ಚಯಿಸಲಾಗುತ್ತದೆ."

ದಕ್ಷಿಣ ಭಾರತದ ಚಾರಿತ್ರಿಕ ಶಾಸನಗಳು (The Historical inscriptions of Southern India) ಎಂಬ ಹಿರಿದಾದ ಗ್ರಂಥದಲ್ಲಿ ಈ ಕೆಳಗಿನ ದಾಖಲೆ ಇದೆ.

### ಆಳುಪ, ಆಳುವ, ಆಳ್ವ—ಅರಸರು

ಈ ಅರಸರು ಕ್ರಿ. ಶ. 7ನೇ ಶತಮಾನದಿಂದ ಕ್ರಿ. ಶ. 11ನೇ ಶತಮಾನದ ವರೆಗೆ ಪಟ್ಟಿ ಪೊಂಬುಚ್ಚ (ಈಗಿನ ಹುಂಚ)ವು ರಾಜಧಾನಿಯಾಗಿ ಮೈಸೂರು ರಾಜ್ಯದ ಶಿವಮೊಗ್ಗೆ ಜಿಲ್ಲೆಯ ನಗರ ತಾಲೂಕಿನಲ್ಲಿ ಆಳುತ್ತಿದ್ದ ಮನೆತನಕ್ಕೆ ಸೇರಿದವರು. ಹಳೆಯ ದಾಖಲೆಗಳಲ್ಲಿ ಅವರ ಭೂಭಾಗಕ್ಕೆ 'ಆಳುವಖೇಡ 600)' ಎಂದಿದೆ. ಹೊಯ್ಸಳ ವಿಷ್ಣುವರ್ಧನನ ಕಾಲದ ಶಾಸನವಲ್ಲಿ ಇದರ ಈ ರೀತಿಯು ಉಲ್ಲೇಖವಿದೆ. ಡಾಕ್ಟರ್ ಹುಳ್ಸ್ (Dr. Hultzch)ರವರ ಅಭಿಪ್ರಾಯ ಪ್ರಕಾರ ಈ ಮನೆತನದ ಹೆಸರು 'ಆಳುವುದು' ಎಂಬ ಅರ್ಥವನ್ನೀಯುವ 'ಆಳ್' ಎಂಬ ದ್ರಾವಿಡ ಶಬ್ದದಿಂದ ಹುಟ್ಟಿರಬಹುದೆಂಬುದಾಗಿದೆ. ಉದಾಹರಣಾರ್ಥವಾಗಿ—ಕೊಂಗಾಳ್ವರು, ಚಂಗಾಳ್ವರು, ನಾಡಾಳ್ವರು ಇತ್ಯಾದಿ (ಭಾಷಾಂತರ)

ಚಂಗಾಳ್ವ ಪ್ರಮುಖರ ವಿಷಯವಾಗಿ ಒಂದು ಒಕ್ಕಣೆ ಹೀಗಿದೆ. "ಕೊಡಗಿನಲ್ಲಿ ಹರಿಯುವ ಕಾವೇರಿ ನದಿಯ ದಡದಲ್ಲಿ ನಂಜರಾಯ ಪಟ್ಟಣದಲ್ಲಿ ಅವರು ಆಳುತ್ತಿದ್ದರು. ತದನಂತರ ಮೈಸೂರು ನಗರದ ಪಶ್ಚಿಮಕ್ಕಿರುವ ಪೆರಿಯ ಪಟ್ಟದಲ್ಲಿ ಆಳುತ್ತಿದ್ದರು. ಅವರು ಹೊಯ್ಸಳ ಅರಸರಿಗೆ ಅಧೀನರಾಗಿದ್ದರು....ಕ್ರಿ. ಶ. 1641 ರಲ್ಲಿ ವೀರರಾಜನ ಕೇಂದ್ರವಾದ ಪೆರಿಯ ಪಟ್ಟಣವನ್ನು ಮೈಸೂರು ಕಂಠೀರವ ನರಸರಾಜನು ಬಲಾತ್ಕಾರವಾಗಿ ಮುತ್ತಿಗೆ ಹಾಕಿ ಕೈವಶ ಮಾಡಿಕೊಂಡನು. ಪರಾಜಯವಾಗುವ ಮೊದಲು ತನ್ನ ಹೆಂಡತಿ ಮಕ್ಕಳನ್ನು ಕೊಂದು, ತಾನು ಯುದ್ಧದಲ್ಲಿ ಮಡಿದನು" (ಭಾಷಾಂತರ)

ಪಶ್ಚಿಮ ಮೈಸೂರಿನಲ್ಲಿ ರಾಜ್ಯಭಾರ ಮಾಡುತ್ತಿದ್ದ ಕೊಂಗಾಳ್ವ ಮುಖಂಡರ (Kongalva Chiefs) ಕುರಿತಾದ ಅಭಿಪ್ರಾಯವೆಂದರೆ "ಈ ಮುಖಂಡರು ಕೊಡಗು ಮತ್ತು ಅದರ 'ನೆರೆಹೊರೆಯಲ್ಲಿ ರಾಜ್ಯಭಾರವಮಾಡುತ್ತಿದ್ದರು. ಅವರ ರಾಜ್ಯದ ದಕ್ಷಿಣಕ್ಕೆ ಚಂಗಾಳ್ವರ ಪ್ರದೇಶವಿತ್ತು.

ಈ ಕೊಂಗಾಳ್ವರೂ, ಚಂಗಾಳ್ವರೂ ದಕ್ಷಿಣ ಕನ್ನಡದ ಆಳ್ವ ಅಥವಾ ಆಳುಪ ಅರಸರ ಶಾಖೆಯವರೆಂದೇ ಭಾಸವಾಗುತ್ತದೆ. ಈ ಕೊಂಗಾಳ್ವರು ಚೋಳರಲ್ಲಿ ಪ್ರಮುಖ ನಾದ ರಾಜೇಂದ್ರ ಚೋಳನ ಆಜ್ಞಾನುವರ್ತಿಗಳಾಗಿದ್ದರು. ಅವರನ್ನು ಹೊಯಿಸ ಳರು ಸದೆಬಡಿದರು. ಅವರ ವಂಶಾವಳಿಯಲ್ಲಿ ಕೆಲವೇ ಹೆಸರುಗಳು ತಿಳಿದುಬಂದಿವೆ. 1. ಬದಿವ ಕೊಂಗಾಳ್ವ 2. ರಾಜೇಂದ್ರಚೋಳ ಕೊಂಗಾಳ್ವ (1022-1026A.D 3. ರಾಜೇಂದ್ರಕೊಂಗಾಳ್ವಅದಟರಾದಿತ್ಯ (1066-1100A. D.) (ಭಾಷಾಂತರ)

ದೊಡ್ಡಗ್ರಂಥಗಳಲ್ಲಿ (ಸಂಶೋಧನೆಯ ಗ್ರಂಥಗಳಲ್ಲಿ) ಈ ಅಲುಪರ ವಿಮರ್ಶೆ ಗಳೇನಾದರೂ ದೊರಕುತ್ತವೋ ಎಂದುಕೇಳಿದರೆ ಡಾ। ಸಾಲತ್ತೋರರ 'History of Tuluvas' ಹೊರತು ಬೇರೆ 'ನ'ಕಾರವನ್ನೇ ಹೇಳಬೇಕಾಗುತ್ತದೆ. ಭಾರ ತೀಯ ವಿದ್ಯಾಭವನದವರು ಪ್ರಕಟಿಸಿದ 'Classical Age' ಎಂಬ ಅಧಾರ ಗ್ರಂಥದಲ್ಲಿ ಈ ರಾಜ ಮನೆತನದ ಪರವಾದ ಒಂದು ಚಿಕ್ಕ ಚರಣವಿದೆ. "ಅಲುಪ ಅರಸರು ತುಳುವ ರಾಜ್ಯವನ್ನು (ದಕ್ಷಿಣ ಕನ್ನಡ) ಆಳುತ್ತಿದ್ದರು ಮತ್ತು ಅವರ ಕೇಂದ್ರ ಸ್ಥಳವು ಉಡುಪಿಯ ದಕ್ಷಿಣಕ್ಕಿರುವ ಉದಯಾವರವಾಗಿತ್ತು. ಅವರ ರಾಜ್ಯವು 6000ಪ್ರಾಂತ್ಯವಾಗಿತ್ತು. ಅವರು ಶಿವಾರಾಧಕರಾಗಿದ್ದರು. ಅವರ ಅಧಿ ಕಾರವು ಕ್ರಿ. ಶಕದ ಆದಿಯಲ್ಲಿ ಪ್ರಾರಂಭವಾಗಿದ್ದಿರಬೇಕು. ಕಾರಣ ಎರಡನೆಯ ಶತಮಾನದಲ್ಲಿದ್ದ ಪ್ಟೋಲೆಮಿಯು ಈ ಅರಸರ ಭೂಪ್ರದೇಶವನ್ನು ಒಲ್ಯೆಕೋರಾ ಎಂದಿ ರುವನು. (ಆಳುವ ಖೇಡಾ) ಐದನೇ ಶತಮಾನದ ಒಂದು ಶಾಸನವು ಈ ಆಳುಪರು ಪಶ್ಚಿಮ ಕರಾವಳಿಯಲ್ಲಿಯ ಅಧಿಪತಿಗಳೆಂದು ಸಿದ್ಧಪಡಿಸುತ್ತದೆ. ಅವರು ಪಶ್ಚಿಮ ಚಾಳುಕ್ಯರ ಅರಸನಾದ ಮೊದಲನೇ ಕೀರ್ತಿವರ್ಮನಿಂದ ಜಯಿಸಲ್ಪಟ್ಟು, ಇಮ್ಮಡಿ ಪುಲಿಕೇಶಿಯ ಅಧೀನರಾಗಿದ್ದರು. ಚಾಳುಕ್ಯರ ಕೈಕೆಳಗೆ ಬನವಾಸಿಯ ರಾಜ್ಯಪಾ ಲನಾಗಿ ಅಲುಪರ ಗುಣಸಾಗರನು (ಕ್ರಿ. ಶ. 650) ನೇಮಿಸಲ್ಪಟ್ಟಿದ್ದನು. ಗುಣ ಸಾಗರನ ಮಗನಾದ ಚಿತ್ರವಾಹನನು (ಕ್ರಿ. ಶ. 675-700) ಆಳುಪರಲ್ಲಿ ಪ್ರಥಮ ಪ್ರಧಾನ ಅರಸನು ಅಂತಃಕಲಹವು ಉದಯಾವರದಲ್ಲಿ ಪ್ರಾರಂಭವಾಗಿ, ಚಿತ್ರವಾಹ ನನು ಜಯಶಾಲಿಯಾದರೂ, ಕ್ರಿ. ಶ. 750ರವರೇಗೆ ಮುಂದುವರಿಯಿತು" ಹೆಚ್ಚು ಕಡಿಮೆ ಒಂದು ಸಹಸ್ರ ವರ್ಷಗಳ ವರೆಗೆ ಆಳಿದ ರಾಜಮನೆತನದವರ ಕುರಿತಾಗಿ ಕೊಟ್ಟ ಈ ವರ್ಣನೆ ಒಂದು ಕ್ಷಮಾಯಾಚನೆ ಎಂದೇ ಹೇಳಬೇಕು.

ಮೇಲೆ ಕೊಟ್ಟ ಉದ್ಧೃತವಿಷಯಗಳಿಂದ ಈ ಕೆಳಗಿನ ಸಾಮಾನ್ಯ ತೀರ್ಮಾನ ಗಳನ್ನು ನಿಸ್ಸಂದೇಹವಾಗಿ ಮಾಡಲು ಅಡ್ಡಿಯಿಲ್ಲ.

1) ಆಳುಪರು (ಆಳ್ವರು)ಪುರಾತನಕಾಲದಒಂದು ರಾಜಮನೆತನಕ್ಕೆಸೇರಿದ್ದು ಪಶ್ಚಿಮ ಕರಾವಳಿಯಲ್ಲಿ, ಪರಶುರಾಮ ಸೃಷ್ಟಿಯ ಭಾಗದಲ್ಲಿ ಪ್ರಖ್ಯಾತರಾಗಿದ್ದರು,

2) ಈ ಆಳುವರ ಪ್ರಾಚೀನತೆಯನ್ನು ಕ್ರಿ. ಶಕದ ಆದಿಗೆ ಕೊಂಡೊಯ್ಯುವುದು ಸಹಜವೆನಿಸುವುದಾದರೂ, ಚಾರಿತ್ರಿಕ ದೃಷ್ಟಿಯಿಂದ ಇವರ ಸ್ಪಷ್ಟ ಉಲ್ಲೇಖವು ಕ್ರಿ. ಶ. 5ನೆಯ ಶತಮಾನದಿಂದ ಕ್ರಿ. ಶ. 15ನೆಯ ಶತಮಾನದವರೆಗೆ ಕಂಡು ಬರುತ್ತದೆ.

3) ಇವರ ಅಧಿಕಾರ ಕ್ಷೇತ್ರವು ಮೊದಲು ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳನ್ನು ಒಳಗೊಂಡಿತ್ತು. ಆಳ್ವಿಕೆಯ ಉತ್ತರಾರ್ಧದಲ್ಲಿ ದಕ್ಷಿಣ ಕನ್ನಡ ಮಾತ್ರ (ತುಳುನಾಡಿನ ಪ್ರಧಾನ ಭಾಗ) ಇವರ ಅಂಕೆಯೊಳಗಿತ್ತು.

4) ಇವರು ತಮ್ಮ ಸ್ವಾತಂತ್ರ್ಯವನ್ನು ಬಾದಾಮಿ ಚಾಲುಕ್ಯರ ಪ್ರಾದುರ್ಭಾವದ ನಂತರ ಕಳಕೊಂಡರೂ ಒಳ ಆಡಳಿತೆಯಲ್ಲಿ ಇಚ್ಛಾನುವರ್ತಿಗಳಾಗಿದ್ದರೆಂದು ಕಂಡು ಬರುತ್ತದೆ. ಕಾರಣ, ಕನಿಷ್ಟಪಕ್ಷ ಒಂದು ಸಹಸ್ರವರ್ಷಗಳ ವರೆಗೆ ಅವಿಚ್ಛನ್ನವಾಗಿ ಅಧಿಕಾರದಲ್ಲಿದ್ದ ಅರಸು ಮನೆತನವು ಆಳುವರ ಮನೆತನ ಹೊರತಾಗಿ ಭಾರತದ ಚರಿತ್ರೆಯಲ್ಲೇ ದೊರಕುವುದು ದುರ್ಲಭ.

5) ವಿಜಯನಗರದ ಅರಸರು ಕರ್ನಾಟಕ ಸಾಮ್ರಾಜ್ಯರಾದ ಬಳಿಕ ಆಲೂಪರು ವಿಜಯ ನಗರದ ಮಾಂಡಲಿಕರಾದರು. ಅದರ ಬಳಿಕ ತುಳುವದ ಇತಿಹಾಸದಲ್ಲಿ ಆಲೂಪರು ಅರಸರಾಗಿ ಆಳಲಿಲ್ಲ. ಅವರ ವಂಶದವರು ಅಲ್ಲಲ್ಲಿ ಕೆಲವು ಕಾಲ ವಿಜಯ ನಗರದ ಅರಸರ ಪ್ರತಿನಿಧಿಗಳಾಗಿಯೂ ಇಲ್ಲವೆ ಪಾಳಯಗಾರರಾಗಿಯೂ ಆಳುತ್ತಿದ್ದರೆಂದು ತೋರುತ್ತದೆ. ವಿಜಯ ನಗರ ಸ್ಥಾಪನೆಯಾದೊಡನೆ ಬಾರಕೂರಿನಲ್ಲಿ ವಿಜಯ ನಗರದ ಪ್ರತಿನಿಧಿಗಳು ಆಳತೊಡಗಿದ್ದರಿಂದ ಆಲೂಪರು ತಮ್ಮ ಅರಮನೆಯನ್ನು ಬಾರಕೂರಿನಿಂದ ಮಂಗಳೂರಿಗೆ ಕೊಂಡು ಹೋಗಿ ಅಲ್ಲಿ ವಾಸ್ತವಿಸಿಕೊಂಡಿದ್ದರು.

ಈ ಲೇಖನದಲ್ಲಿ ಆಳುವರ ರಾಜಕೀಯ ಚರಿತ್ರೆಯನ್ನು ನಿಷ್ಕರ್ಷಿಸುವ ಉದ್ದೇಶವಿಲ್ಲ. ಆಳುಪರೆಂದರೆ ಯಾರು? ಅವರ ಮೂಲ ಯಾವುದು? ಅವರ ಸಂತತಿಯವರು ಈಗ ನಮ್ಮ ನಾಡಿನಲ್ಲಿರುವರೇ, ಇದ್ದರೆ ಅವರಲ್ಲಿ ಪೂರ್ವಸ್ಮೃತಿಯಿದೆಯೇ ಎಂಬೀ ಪ್ರಶ್ನೆಗಳ ಕುರಿತು ಒಂದು ಸ್ಥೂಲ ವಿಮರ್ಶೆ ಮಾಡುವುದು ಉದ್ದೇಶ. ನನ್ನ ತೀರ್ಮಾನಗಳೂ ಅನುಮಾನಿತ ಸತ್ಯವೆಂದೇ ತಿಳಿಯಬೇಕು. ಅವುಗಳು ಕಡೆಯ ತೀರ್ಪುಗಳಾರವು.

1. ಚುಟುಕುಲಕ್ಕೆ ಸೇರಿದವರು ಆಳುವರು ಎಂದು ಹೇಳುವುದು ಅಷ್ಟೊಂದು ಸರಿಯಾದುದು. ಕಾರಣವೇನೆಂದರೆ ದಾಖಲೆ ಪ್ರಕಾಶ ಈ ಚುಟುಗಳು ಆಂಧ್ರರ ಪತನದ ಅನಂತರದಲ್ಲಿ ಕ್ರಿ. ಶ. 200ರ ಸುಮಾರಿಗೆ ಬನವಾಸಿ, ಪೂನಾ ಮತ್ತು ನಾಸಿಕ ಪ್ರದೇಶಗಳಲ್ಲಿ ತಮ್ಮ ಅಧಿಕಾರವನ್ನು ಸ್ಥಾಪಿಸಿ ಸ್ವತಂತ್ರರಾದರು. ಅವರಲ್ಲಿ ಬರೇ

ಎರಡು ಹೆಸರುಗಳು ತಿಳಿದುಬಂದಿವೆ. 1) ಹರಿತೀಪುತ್ರ, ವಿಷ್ಣುಕದ ಚುಟುಕುಲಾನಂದ ಶಾತಕರ್ಣಿ (ಕ್ರಿ. ಶ. 200) 2) ಹರಿತೀಪುತ, ಶಿವಸ್ಕಂದ ಯಾನೆ ಶಿವಸ್ಕಂದ ನಾಗ ಅಥವಾ ಸ್ಕಂದನಾಗ ಶಾತವಾಹನ, ಆದುದರಿಂದ ಈ ಚುಟುವಂಶೀಯರೇ ಆಲೂಪರೆಂದು ನಿರ್ಧರಿಸುವುದು ಅನುಚಿತವೆಂದೆಣಿಸುತ್ತದೆ.

2. ಡಾಕ್ಟರ್ ಸಾಲತ್ತೂರರು ದ್ರಾವಿಡ ಭಾಷೆಯ ಶಬ್ದವಾದ 'ಆಳ್' (To rule) ಎಂಬುದರಿಂದ 'ಆಳುವ' ಸಮಸ್ತ ನಾಮದ ಉತ್ಪತ್ತಿ ಆಯಿತೆಂಬುದನ್ನು ತೀವ್ರವಾಗಿ ಖಂಡಿಸಿದ್ದಾರೆ. ಆದರೆ ಅವರಿತ್ತ ಕಾರಣಗಳು ಅಷ್ಟೊಂದು ತೃಪ್ತಿಕರವಾಗಿಲ್ಲ. 'ಮೌಲಾಃ' ಎಂದು ಚಾಳುಕ್ಯರಿಂದ ಸಂಬೋಧಿಸಲ್ಪಟ್ಟ ಈ ಪ್ರಾಚೀನ ಮನೆತನಕ್ಕೆ ಮೇಲಿನ ರೀತಿಯ ವ್ಯುತ್ಪತ್ತಿಯು ಮರ್ಯಾದೆಗೆ ಕಡಿಮೆ ಎಂದು ಅಭಿಪ್ರಾಯ ಅವರದು. ಆದರೆ ಈ ಅಳುಪರು ತುಳುನಾಡಿನಲ್ಲಿ ಪ್ರಥಮವಾಗಿ ರಾಜ್ಯಭಾರವನ್ನು ಚಾರಿತ್ರಿಕ ದೃಷ್ಟಿಯಲ್ಲಿ ಮಾಡಿದವರೆಂದರೆ ತಪ್ಪಾಗದು. ಅವರು ಆಡಳಿತೆಯನ್ನು ಸುವ್ಯವಸ್ಥಿಗೊಳಿಸಿದವರು. ಅವರು ಆಳಿದವರಾದುದರಿಂದ ಆಳುವರಾದರು. ಈ ತೀರ್ಮಾನಕ್ಕೆ ಅಡ್ಡಿ ಏನು?

3. ಚೋಳ, ಪಾಂಡ್ಯ, ಕೇರಳ ದೇಶಗಳು ಆಯಾಯ ರಾಷ್ಟ್ರಗಳ ಅರಸರಿಗೆ ರಾಜ ಮನೆತನದ ಹೆಸರನ್ನು ಕೊಟ್ಟಂತೆ ಅಥವಾ ಆಯಾಯ ರಾಜಮನೆತನದ ಹೆಸರುಗಳಿಂದ ರಾಷ್ಟ್ರಗಳಿಗೆ ಹೆಸರಾದಂತೆ, ಆಳುವರ ಖೇಡವು (ಇಲ್ಲಿ ಖೇಡ ಎಂಬುದಕ್ಕೆ ವಿಶಾಲಾರ್ಥವನ್ನು ಕೊಟ್ಟು ದೇಶವೆಂದು ತಿಳಿಯಬೇಕು) ಆಳುವ ಖೇಡವಾಯಿತೆಂದು ತೀರ್ಮಾನಿಸಬಾರದೇಕೆ?

4. ಈ 'ಆಲೂಪ' ಎಂಬ ಹೆಸರು ಕ್ರಮಾಗತವಾಗಿ ಕಾಲಕ್ರಮೇಣ ಮಾರ್ಪಾಡು ಹೊಂದಿದಂತೆ ಕಾಣುತ್ತದೆ. ಈ ವಂಶದ ಅರಸರ ಮೇಲ್ ಹೆಸರು ಮೊದಲು 'ಆಳುವರಸ'ವೆಂದಿದ್ದು ಅನಂತರ ಆಲುವ, ಆಳುಪ, ಆಲುಪೇಂದ್ರವೆಂಬುದಾಗಿ ಪರಿವರ್ತನೆ ಹೊಂದಿದಂತೆ ಕಂಡುಬರುತ್ತದೆ. ಈ ಪರಿವರ್ತನೆಗೆ ಸಂಸ್ಕೃತದ ಪ್ರಭಾವವೇ ಕಾರಣ. ಆಳುವರಸ ಎಂದರೆ ಚಕ್ರವರ್ತಿ ಎಂಬರ್ಥವಾಗುತ್ತದೆ.

5. ಮಹಾ ಕೂಟಸ್ತಂಭ ಲೇಖದಲ್ಲಿ ತುಳುನಾಡಿಗೆ 'ಆಲುಕ'ವೆಂದಿದ್ದು ಅದನ್ನು ನಾಗನಿಗೆ ಯಾ ಶೇಷನಿಗೆ ಸಂಬಂಧಿಸುವ ದೇಶವೆಂದು ತೀರ್ಮಾನಿಸುವ ಸಂಭವವಿದ್ದರೂ ಈ ಲೇಖವು ಏಳನೆಯ ಶತಮಾನದ್ದಿದ್ದು ಅದಕ್ಕಿಂತ ಹಿಂದಿನದೆಂದು ತಿಳಿಯಲ್ಪಟ್ಟ ಪ್ರಪಂಚ ಹೃದಯದಲ್ಲಿ ನಮ್ಮಿ ನಾಡನ್ನು 'ಆಲುವ'ವೆಂದು ಸಂಬೋಧಿಸಿದ್ದರಿಂದಲೂ ಈ 'ಆಲುವ' ಎಂಬುದು 'ಆಳುವ'ವೇ ಆಗಿರುವ ಸಂದರ್ಭ ಹೆಚ್ಚಿರುವುದರಿಂದ 'ಆಳುವರ ನಾಡು' 'ಆಲುವ'ವಾಗಿರುವುದು ಸಹಜವೇ ಎಂದು ತಿಳಿಯುವುದರಿಂದ ತಪ್ಪಾಗದು ಎಂದು ನನಗನಿಸುತ್ತದೆ. ಸಂಸ್ಕೃತದ ಪ್ರಭಾವದಿಂದ ಆಳು

# ತುಳುನಾಡಿನಲ್ಲಿ ಬ್ರಾಹ್ಮಣ್ಯ

ಹಿಂದಿನ ಲೇಖನಗಳಲ್ಲಿ ತುಳುನಾಡಿನ ಸಾಮಾಜಿಕ ಘಟಕಗಳ ಸ್ಥೂಲವಾದೊಂದು ಚಿತ್ರಣವನ್ನು ಕೊಡಲು ಪ್ರಯತ್ನಿಸಿದೆನು. ಆ ಲೇಖನಗಳಲ್ಲಿ ಓದುಗರ ಗಮನವನ್ನು ನಾಡಿನ ಸಾಮಾಜಿಕ ಬೆಳವಣಿಗೆಯ ಪ್ರಧಾನವಾದ ಮೂರು ಘಟ್ಟಗಳ ಕಡೆಗೆ ಹರಿಯಿಸಲು ಯತ್ನಿಸಿದ್ದೇನೆ. ಅವಾವುವೆಂದರೆ:

(1) ಬಿಲ್ಲವರೂ, ಮೊಗೇರರೂ (Hunters and Fishermen)

(2) ತುರುಕಾರರು (ಕುರುಬರೂ, ದನಗಾರರೂ ಹಾಗೂ ಗೋವಳರೂ—Herdsmen)

(3) ಕುಡುವರೂ, ನಾಡವರೂ (Agriculturists and Town-dwellers)

ಅಂತೂ ನಾಡವರು ನಮ್ಮ ನಾಡಿನ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯನ್ನು ಮೊದಲಿಗೆ ಮಾಡಿದವರೆಂಬ ಸಂಗತಿಯನ್ನು ಸ್ಪಷ್ಟ ಮಾಡಿದ್ದಾಯಿತು. ಮೇಲೆ ಸೂಚಿಸಲ್ಪಟ್ಟ ಸಾಮಾಜಿಕ ಪದರುಗಳ ಮೂಲಸ್ವರೂಪವನ್ನು ನಿರ್ದೇಶಿಸಲು ಒಂದು ತರದ ಸಾಧನೆಯನ್ನು ಮಾಡಿದ್ದೇನೆ ವಿನಹ, ಅವುಗಳ ಕೂಲಂಕುಶ ವಿಮರ್ಶೆಯಾಗಿದೆ ಎಂದು ಹೇಳುವಷ್ಟು ಧೈರ್ಯ ನನಗಿಲ್ಲ.

ತುಳುನಾಡಿನ ಸಂಸ್ಕೃತಿಯ ಹಾಗೂ ಚರಿತ್ರೆಯ ಅಭ್ಯಾಸದಲ್ಲಿ ಬ್ರಾಹ್ಮಣ್ಯದ ಪರಿಚಯ ಮತ್ತು ಪ್ರಭಾವವು ಒಂದು ವಿಶಿಷ್ಟ ಘಟಕವಾಗಿದೆ ಎನ್ನುವುದರಲ್ಲಿ ಅನುಮಾನವಿರಲಾರದು. ಬ್ರಾಹ್ಮಣರು ನಮ್ಮ ನಾಡಿಗೆ ಹೊರಗಿನಿಂದ ಬಂದವರೆಂಬುದರಲ್ಲಿ ಎರಡು ಮಾತಿರಲಾರದು. ನಾಡವರೂ ಹೊರಗಣಿಂದ ಬಂದವರೇ. ಆದರೆ ಕಾಲ ನಿರ್ದೇಶದಲ್ಲಿ ಬ್ರಾಹ್ಮಣರಿಗಿಂತ ನಾಡವರು ಮೊದಲಿಗರು. ಬ್ರಾಹ್ಮಣರ ಆಗಮನವು ಎಂದಿನಿಂದಾಯಿತು, ಅವರು ಒಂದೇ ಸವನೆ ಆಗಮಿಸಿದರೋ, ಅಥವಾ ತಂಡ, ತಂಡವಾಗಿ ಹಂತಗಳಲ್ಲಿ ವಲಸೆ ಬಂದು ನೆಲೆಸಿದರೋ, ಅವರು ವಲಸೆ ಬರಲು ಕಾರಣಗಳು ಯಾವುವು, ಯಾವ ಯಾವ ಶಾಖೆಯವರು ಯಾವ ಯಾವ ಕಾಲದಲ್ಲಿ ಬಂದಿರುವರು, ಅವರ ಧಾರ್ಮಿಕ ಭಾವನೆಗಳು ಈ ನಾಡಿನ ಸ್ಥಳೀಯರ ಮೇಲೆ ಎಷ್ಟರ ಮಟ್ಟಿಗೆ ಪ್ರಭಾವಿತವಾದುವು, ಸ್ಥಳೀಯ ಸಂಸ್ಕೃತಿಯು ಬ್ರಾಹ್ಮಣರ ಮೇಲೆ ಎಷ್ಟರ ಪರಿಣಾಮವನ್ನು ಉಂಟುಮಾಡಿತು ಎಂಬಿತ್ಯಾದಿ ಪ್ರಶ್ನೆಗಳು ವಿಮರ್ಶೆಗೆ ಯೋಗ್ಯವಾದುವುಗಳಾಗಿವೆ. ಪ್ರಕೃತಕ್ಕೆ ಈ ಲೇಖನದಲ್ಲಿ ಬ್ರಾಹ್ಮಣರು ತುಳುನಾ

ಡಿಗೆ ಆಗಮಿಸಿ, ನೆಲೆಸಿದಕಾಲ ಮತ್ತು ಹಂತಗಳ ಒಂದು ಪರಿಚಯವನ್ನು ಮಾಡಿ ಕೊಡಲು ಪ್ರಯತ್ನಪಾಡಿದ್ದೇನೆ. ಈ ವಿವರ್ಶೆಯಲ್ಲಿ ಚಾರಿತ್ರಿಕ ಹಿನ್ನೆಲೆ ಪ್ರಧಾನ ವಾಗಿದೆ ವಿನಹ, ಪೌರಾಣಿಕ ವಿಷಯಗಳು ಅಷ್ಟೊಂದು ಗಣ್ಯ ಆಧಾರಗಳಾಗಿ ಸ್ವೀಕ ರಿಸಲ್ಪಡಲಿಲ್ಲ.

ಚಾರಿತ್ರಿಕ ಹಿನ್ನೆಲೆಯ ಮೇಲೆ ತುಳುನಾಡಿನಲ್ಲಿ ಬ್ರಾಹ್ಮಣರ ಆಗಮನವನ್ನು ನಿರ್ಧರಿಸುವುದಾದರೆ ದಕ್ಷಿಣ ಹಿಂದೂದೇಶದ ಪುರಾತನ ಸಾಮ್ರಾಜ್ಯ ಸಂಸ್ಥಾಪಕರ ಒಂದು ಸ್ಥೂಲ ಪರಿಚಯವನ್ನು ನಾವು ಮಾಡಿಕೊಳ್ಳುವುದು ಉಚಿತ.

ರಾಜಕೀಯವಾಗಿ ದಕ್ಷಿಣಭಾರತದಲ್ಲಿ ಪ್ರವೇಶಮಾಡಿದವರಲ್ಲಿ ಮೊಟ್ಟಮೊದ ಲಿನವರೆಂದರೆ ಮೌರ್ಯರೇ. ದಕ್ಷಿಣದಲ್ಲಿ ಮೈಸೂರಿನಷ್ಟು ದೂರಕ್ಕೆ ಮೌರ್ಯ ಸಾಮ್ರಾಜ್ಯ ವನ್ನು ಚಂದ್ರಗುಪ್ತನಾಗಲೀ, ಬಿಂದುಸಾರನಾಗಲೀ ವಿಸ್ತಾರಗೊಳಿಸಿರಬಹುದೇ ಎಂಬುದು ಖಚಿತವಾಗಿ ಗೊತ್ತಾಗುವುದಿಲ್ಲ. ಮೈಸೂರಿನ ಸಿದ್ಧಪುರ ಮತ್ತು ಬ್ರಹ್ಮ ಗಿರಿಗಳಲ್ಲಿಯೂ, ಗುತ್ತಿಯ ಬಳಿಯಲ್ಲಿರುವ ಎರ್ರಗುಂಡಿಯಲ್ಲಿಯೂ ದೊರೆತಿರುವ ಅಶೋಕನ ಶಿಲಾಶಾಸನಗಳು ಅವನು ಸಿಂಹಾಸನವೇರುವ ಮುನ್ನವೇ ಮೌರ್ಯ ಸಾಮ್ರಾಜ್ಯವು ಮೇಲ್ಕಂಡ ಪ್ರದೇಶಗಳಲ್ಲಿಯೂ ವ್ಯಾಪಿಸಿತ್ತೆಂಬುದನ್ನು ತೋರಿಸು ತ್ತವೆ. ಮೌರ್ಯರು ದಕ್ಷಿಣಭಾರತವನ್ನು ಮುತ್ತಿದ ವಿಚಾರವನ್ನು ಕುರಿತು 'ಸಂಘಮ್' ಸಾಹಿತ್ಯದಲ್ಲಿ ಕೆಲವಾರು ಕಡೆ ಪ್ರಸಂಗ ಮಾಡಲಾಗಿದೆ. ಆದುದರಿಂದ ಈ ಮುತ್ತಿಗೆ ಯನ್ನು ಕುರಿತು ಸಂಶಯಪಡುವುದೇ ಅನವಶ್ಯಕವೆಂದು ವಿದ್ವಾಂಸರ ಅಭಿಪ್ರಾಯ. ಈ ಸಾಹಸದ ಮುತ್ತಿಗೆಯಲ್ಲಿ ಬಿಂದುಸಾರನೇ ನಾಯಕಪಾತ್ರವನ್ನು ವಹಿಸಿದ್ದನೆಂದು ಊಹಿಸಬಹುದು. ಬಿಂದುಸಾರನು ಹದಿನಾರು ರಾಜ್ಯಗಳನ್ನು ವಶಪಡಿಸಿಕೊಂಡಿ ದ್ದನೆಂದೂ ಇವೆಲ್ಲ ರಾಜ್ಯಗಳೂ ಉತ್ತರ ಭಾರತಕ್ಕೇ ಸೇರಿದ್ದಿರಲಾರವೆಂದೂ ತಾರಾ ನಾಥನು ಹೇಳುತ್ತಾನೆ. ಗ್ರೀಕರು ಅವನನ್ನು 'ಅಮಿತಘಾತ' ಎಂದು ಕರೆದಿದ್ದರು. ಈ ಪ್ರಶಸ್ತ ಬಿರುದು ಅವನ ಸೇನಾಧಿಪತ್ಯವನ್ನೂ, ಗಳಿಸಿದ ಜಯಗಳನ್ನೂ ಸಮರ್ಥನೆ ಮಾಡುವಂತಿದೆ. ಕಳಿಂಗ ರಾಜ್ಯವು ಪತನವಾಗದಿದ್ದುದನ್ನು ಕಂಡರೆ ಬಿಂದುಸಾರನು ಅತ್ಯಂತ ಪ್ರಬಲವಾದ ಶಕ್ತಿಗಳನ್ನು ಎದುರಿಸ ಬೇಕಾಗಿತ್ತೆಂದು ತೋರುತ್ತದೆ. ಬಿಂದುಸಾರನ ಸೇನಾಸಮೂಹದಲ್ಲಿ ಒಂದು ಭಾಗವು ವೈಜಯಂತಿಯ ಹತ್ತಿರ (ಬನವಾಸಿ) ಪಶ್ಚಿಮಕರಾವಳಿಯನ್ನು ಪ್ರವೇಶಿಸಿ ದಕ್ಷಿಣಕ್ಕೆ ಮುಂದೊತ್ತಿ 'ನನ್ನನ್' ಎಂಬ ತುಳುವ ರಾಜನನ್ನು ಸೋಲಿಸಿ, ಕಣ್ಣಾನೂರಿಗಿಂತ ಸುಮಾರು ಹದಿನಾರು ಮೈಲು ಉತ್ತರಕ್ಕಿರುವ 'ಎಲಿಮಲೆ'ಯ ಕಣಿವೆಗಳ ಮೂಲಕ ಪೂರ್ವಕ್ಕೆ ಮುಂದೊತ್ತಿ ''ಕೊಡನಾಡ'ನ್ನು ಸೇರಿ, ಅಲ್ಲಿಂದ ಕೊಂಗನಾಡಿನ ಮುಖಾಂತರ

'ಪೋಡಿನಿ' ಬೆಟ್ಟಗಳ ಬದಿಯಲ್ಲಿ ದಕ್ಷಿಣಕ್ಕೆ ಹೋಗಿ 'ಪುದಿಯಿಲ್' ಬೆಟ್ಟಗಳ ಪ್ರದೇಶವನ್ನು ಮುಟ್ಟಿತೆಂದು ತಮಿಳು ಗ್ರಂಥಗಳಿಂದ ತಿಳಿದು ಬರುತ್ತದೆ. ಇನ್ನೊಂದು ಸೇನಾ ಸಮೂಹವು ನೈಋತ್ಯಕ್ಕೆ ಧಾಳಿಯಿಟ್ಟು ಅರೈಯುಮ್, ತಗಡರು ಪ್ರಾಂತ್ಯಗಳಿಂದಾಗಿ ತಿರುಕೊಯಿಲೂರು ಪ್ರಾಂತ್ಯವನ್ನು ಪ್ರವೇಶಿಸಿದಾಗ ಪ್ರಬಲ ರಾದ ಚೋಳರಾಜರಿಂದ ಸೋಲಿಸಲ್ಪಟ್ಟಿತೆಂದು ತಿಳಿಯುತ್ತದೆ. ಈ ದಂಡಯಾತ್ರೆಯ ಕಾಲದಲ್ಲಿ ಮೌರ್ಯ ರಾಜನು ಅಲ್ಲಲ್ಲಿ ಆರ್ಯರ ನೆಲೆವೀಡುಗಳನ್ನು ಕಲ್ಪಿಸಿ ಅಧಿಕಾರಿ ಗಳನ್ನು ನೇಮಿಸಿದಂತೆ ಕಂಡುಬರುತ್ತದೆ.

ತಮಿಳು ಗ್ರಂಥಗಳಲ್ಲಿ ಈ ದಂಡಯಾತ್ರೆಯ ಅವಹೇಳನ ವ್ಯಕ್ತವಾಗುತ್ತದೆ- (ಉಪಯೋಗಿಸಿರುವ ಪದಗಳಿಂದ) ವಂಬಮುರ್ಯೈಯರ್ (ವಿಚಿತ್ರ ಪದ್ಧತಿಯವರು) ವಡಕ್ಕಾರರ್ (ಬಡಗು ಕಡೆಯವರು, ಔತ್ತರೇಯರು), ಪುಗೈ ಎಳ್ವರ್ (ಹೊಗೆ ಎಬ್ಬಿಸುವವರು) ಇತ್ಯಾದಿ. ಅಲ್ಲದೆ ಪಾಂಡ್ಯರು ಹೀಗೆ ಬಂದು ನೆಲೆಸಿದ ಆರ್ಯರಿಗೆ ಏನೂ ಪ್ರೋತ್ಸಾಹ ಕೊಡದುದರಿಂದ ಸೇನೆಯು ಹಿಂತಿರುಗಿದ ಮೇಲೆ ಕೆಲವರು ಸಣ್ಣ ಸಣ್ಣ ತುಂಡುಗಳಾಗಿ ಬೆಟ್ಟಗಳನ್ನು ಕಣಿವೆಗಳ ಮುಖಾಂತರ ದಾಟಿ ಪಶ್ಚಿಮ ಕರಾವಳಿಯನ್ನು (ಈಗಿನ ಕೊಚ್ಚಿ, ತಿರುವಾಂಕೂರ್) ಸೇರಿದಂತೆಯೂ ಹೇಳಲ್ಪಟ್ಟಿದೆ.

ಅಶೋಕ ಚಕ್ರವರ್ತಿಯ ಸಾಮ್ರಾಜ್ಯವು ಚೆಲ್ಲಿ ಚದರಿ ಹೋದಾಗ ದಕ್ಷಿಣದ ಮೇಲ್ಭಾಗದಲ್ಲಿ ಆರ್ಯರ ಗುಂಪಿಗೆ ಕಲೆತ ಶಾತವಾಹನರ ಕೈಯಲ್ಲಿ ರಾಜ್ಯಾಡಳಿತ ಶಕ್ತಿಯು ಸಿಕ್ಕಿತು. ಶಾತವಾಹನರನ್ನು ಕುರಿತಾದ ನಮ್ಮ ತಿಳುವಳಿಕೆಗೆ ಮೂಲಾಧಾರಗಳು ಪುರಾಣಗಳು ಮತ್ತು ಶಿಲಾಶಾಸನಗಳು ಎಂದೇ ಹೇಳ ಬಹುದು ಇವು ಆಂಧ್ರರಿಗೂ ಶಾತವಾಹನರಿಗೂ ನಡುವೆ ಇದ್ದ ಸಂಬಂಧವನ್ನು ಎತ್ತಿ ತೋರಿ ಸುತ್ತವೆ. ಶಾಸನಗಳು ಅರಸರನ್ನು ಶಾತವಾಹನ ಕುಲ ಎಂದು ಸೂಚಿಸುತ್ತವೆ. ಈ ಅರಸರನ್ನು ಪುರಾಣಗಳು ಆಂಧ್ರರೆಂದು ಪ್ರಸಂಗಿಸುತ್ತವೆ. ಬಹು ಸಂಕೇತ ವಾದ ಶಾತವಾಹನವೆಂಬುದು ಕುಲ ಅಥವಾ ವಂಶವನ್ನು ಸೂಚಿಸುವ ಹೆಸರಾಗಿದ್ದಿರ ಬೇಕು. ಆದರೆ ಆಂಧ್ರವೆಂಬುದು ಒಂದು ಜಾತಿ ಯಾ ಗುಂಪಾಗಿರಬೇಕು. ಪುರಾಣ ಗಳು ಶಾತವಾಹನರ ಮೊದಲನೆಯ ಅರಸನನ್ನು ಆಂಧ್ರಜಾತಿಯ (ಆಂಧ್ರ ಕುಲ ಸಂಭೂತ) ಎಂದು ಕರೆದಿರುವುದು ಅರ್ಥ ಗರ್ಭಿತವಾಗಿದೆ.

ಐತರೇಯ ಬ್ರಾಹ್ಮಣದಲ್ಲಿ ಆಂಧ್ರರು ದಾಶ್ಯು ವಂಶಕ್ಕೆ ಕಲೆತವರೆಂಬ ವಿಚಾರ ವಾಗಿ ಮೊಟ್ಟ ಮೊದಲಾಗಿ ಸೂಚಿತವಾಗಿದೆ. ಅದೇ ಐತರೇಯ ಬ್ರಾಹ್ಮಣದಲ್ಲಿ ಆಂಧ್ರರು ವಿಶ್ವಾಮಿತ್ರನವಂಶ 'ಸಂಜಾತರೆಂದು ಸೂಚಿತವಾಗಿರುವುದೂ, ಶತವಾಹನ ಅರಸರು ತಮ್ಮ ಮಾತೃ ವರ್ಗದವರ ಅಂಕಿತವನ್ನು ತಮ್ಮ ಹೆಸರಿನಲ್ಲಿ ತಾಳಿರು

ವುದೂ—ಉದಾಹರಣೆಗಾಗಿ ಗೌತಮಿಪುತ್ರ ಶತಕರ್ಣಿ ಇತ್ಯಾದಿ—ಆರ್ಯರಿಗೂ, ದ್ರಾವಿಡಾಂಧ್ರರಿಗೂ ಇದ್ದ ಸಂಬಂಧವನ್ನು ಸೂಚಿಸುವಂತಿದೆ ಎಂದು ಹೇಳಲು ಅಡ್ಡಿ ಇಲ್ಲ.

ಒಬ್ಬೊಬ್ಬರಾಜನ ಕಾಲವನ್ನು ಪ್ರತ್ಯಪ್ರತ್ಯೇಕವಾಗಿ ವಿಂಗಡಿಸುವುದು ಕಷ್ಟ ಸಾಧ್ಯವಾಗಿದ್ದರೂ ಮತ್ಸ್ಯ ಪುರಾಣವು ಒಳಗೊಂಡಿರುವ ವಂಶಪಾರಂಪರ್ಯವಾದ ವಿವರಣೆಯು ಶತವಾಹನ ವಂಶದಲ್ಲಿ ಮೂವತ್ತು ಅರಸರಿದ್ದರೆಂದೂ, ಅವರು ಒಟ್ಟಿನಲ್ಲಿ ನಾನ್ನೂರ ಅರ್ವತ್ತು ವರ್ಷ ಕಾಲ ರಾಜ್ಯಭಾರ ಮಾಡಿದರೆಂದೂ ಹೇಳುವುದು ನಂಬಿಕೆಗೆ ಅನರ್ಹವಾಗಿಲ್ಲ. ಕ್ರಿ. ಪೂ. ಸುಮಾರು ೨೩೦ರಲ್ಲಿ ಈ ವಂಶವನ್ನು ಸ್ಥಾಪಿಸಿದ ಶ್ರೀಮುಖನಿಂದ ಆರಂಭವಾಗಿ ಮೂರನೆಯ ಅರಸನಾದ ಶತಕರ್ಣನ ಕಾಲದಲ್ಲಿ ಮಧ್ಯಭಾರತವನ್ನೂ ಪಶ್ಚಿಮಭಾರತವನ್ನೂ ಒಳಗೊಂಡು ಪಶ್ಚಿಮ ಸತ್ರಪರ ಚಟುವಟಿಕೆಯನ್ನು ಯಶಸ್ವಿಯಾಗಿ ಎದುರಿಸಿ ರಾಜ್ಯವು ಉತ್ತರದ ಕಥಿಯವಾಡದಿಂದ ದಕ್ಷಿಣದ ಕೃಷ್ಣಾನದಿಯವರೆಗೂ ಪಶ್ಚಿಮದ ಕೊಂಕಣದಿಂದ ಪೂರ್ವದ ಬಿರಾರ್ ವರೆಗೂ ವಿಸ್ತರಣಗೊಂಡಿತು. ಶತವಾಹನ ಅರಸರಲ್ಲಿ ಕೊನೆಯವನೂ ಅತ್ಯಂತ ಪ್ರಭಾವಶಾಲಿಯೂ ದವನೂ ಎಂದರೆ ಶ್ರೀಯಜ್ಞ ಶತಕರಣಿ. ಇವನ ಆಳ್ವಿಕೆಯ ಕಾಲವು ಕ್ರಿ.ಶ.೧೭೪ ರಿಂದ ೨೦೩ ವರೆಗೆ. ಇವನು ಪಶ್ಚಿಮ ಭಾರತದಲ್ಲಿ ಶಕರ ಪ್ರಭಾವವನ್ನು ಸಂಪೂರ್ಣ ಧ್ವಂಸ ಮಾಡಿಬಿಟ್ಟನು. ಶ್ರೀಯಜ್ಞ ಶತಕರ್ಣಿಯ ಮರಣಾನಂತರ ಶಾತವಾಹನ ಸಾಮ್ರಾಜ್ಯವು ತುಂಡು ತುಂಡಾಗಿ ಒಡೆದು ಹೋಯಿತು. ಹಾಗೆ ಒಡೆದು ಹೋದ ತುಂಡುಗಳಿಗೆ ಅರಸು ಮನೆತನದ ವಿವಿಧ ಅರಸು ಕುಮಾರರೇ ಒಡೆಯರಾದರು. ಕ್ರಿ. ಶ. ಮೂರನೇ ಶತಮಾನದ ಮಧ್ಯಭಾಗದ ವೇಳೆಗೆ ಎಷ್ಟೋ ಆಡಳಿತ ವಂಶಗಳು ಹೊಸದಾಗಿ ಹುಟ್ಟಿದುವು. ಹೀಗೆ ನಾಲ್ಕು ಶತಮಾನಗಳಿಗೆ ಮೇಲ್ಪಟ್ಟು ಆಂಧ್ರ ಶತವಾಹನರು ಡೆಕ್ಕಾನಿನಲ್ಲಿ ಪ್ರಭಾವಪೂರಿತ ರಾಜ್ಯಾಡಳಿತವನ್ನು ನಡೆಸಿದರು. ದಕ್ಷಿಣ ಭಾರತದಲ್ಲಿ ಸಾಮ್ರಾಜ್ಯ ಸ್ಥಾಪನೆಯನ್ನು ಮಾಡಿದವರಲ್ಲಿ ಮೊದಲನೆಯವರಾದ ಶಾತವಾಹನರು ಜಯಕ್ಕೆ ಸಾಕ್ಷಿಗಳಾಗಿದ್ದರು. ಶತವಾಹನ ಸಾಮ್ರಾಜ್ಯದ ಪರಾಕ್ರಮವು ಉಚ್ಚ ನೆಲೆಯಲ್ಲಿದ್ದಾಗ ಅದರ ವ್ಯಾಪನೆಯು ಸಮುದ್ರದಿಂದ ಸಮುದ್ರಕ್ಕೆ ಹಬ್ಬಿತ್ತು.

ಶಾತವಾಹನರ ಆಡಳಿತ ರಚನಾಕ್ರಮವು ಮೌರ್ಯರ ಆಡಳಿತ ರಚನಾಕ್ರಮವನ್ನೇ ಆಧಾರವಾಗಿಟ್ಟುಕೊಂಡಿದ್ದಿತು. ಸಾಮ್ರಾಜ್ಯದಲ್ಲಿ ಶಾಂತಿಯನ್ನೂ ಶಿಸ್ತನ್ನೂ ನೆಲೆ ನಿಲ್ಲಿಸುವ ಹೊಣೆಗಾರಿಕೆಯನ್ನು ಹೊತ್ತ ಅಧಿಕಾರಿಗಳಿಗೆ ಮಹಾತಳವಾರರೆಂದೂ ಅವರ ಕೆಳಪಟ್ಟ ಅಧಿಕಾರಿಗಳಿಗೆ ತಳವಾರರೆಂದೂ ಹೆಸರು. ಮಹಾಮಾತ್ರರು

ಎಂಬ ಹೆಸರುಳ್ಳ ಅಧಿಕಾರಿಗಳು ರಾಜ್ಯಾಡಳಿತವನ್ನು ನಡೆಸುತ್ತಿದ್ದುದು ಮಾತ್ರವ
ಪಲ್ಲದೆ ದುಷ್ಪ್ರವರ್ತಿಗಳನ್ನು ಖಂಡಿಸುತ್ತಿದ್ದರು. ರಾಯಭಾರಿಗಳ, ಖಜಾಂಚಿಗಳ ಸಾರ
ಪತ್ಯಗಾರರ, ಲೆಕ್ಕಪತ್ರಗಳ ಸಂರಕ್ಷಕರಮತ್ತು ನಾಣ್ಯನಿರ್ಮಾಪಕರ ಕೆಲಸಗಳನ್ನೂ
ಸಹ ನೋಡಿ ಕೊಳ್ಳುತ್ತಿದ್ದರು.

ಗ್ರಾಮ ಪ್ರದೇಶಗಳಲ್ಲಿ ಕೇಂದ್ರದ ಆಡಳಿತವು ಕಟ್ಟುಕಾವಲುಗಳಿಂದ ಕೂಡಿ
ಕಠಿಣವಾಗಿರಲಿಲ್ಲ. ಉನ್ನತಾಧಿಕಾರಿಗಳ ಸಾಮಾನ್ಯ ಮೇಲ್ವಿಚಾರಣೆಗೊಳಪಟ್ಟು
ಸ್ಥಳೀಯ ಆಡಳಿತೆಯು ಪಾಳೆಯಗಾರರ ಮತ್ತು ಜಹಗೀರುದಾರರ ಕೈಯಲ್ಲಿಯೂ
ಇತ್ತು. ಪಾಳೆಯಗಾರರಲ್ಲಿ ಎಷ್ಟೋ ವರ್ಗಗಳಿದ್ದುವು. ಅವರಲ್ಲಿ ಅತ್ಯುನ್ನತನಾದವ
ನನ್ನು 'ರಾಜ' ಎಂದು ಕರೆಯಲಾಗುತ್ತಿತ್ತು. ಈ ರಾಜನು ಹೆಚ್ಚು ಕಡಮೆ ಅರಸು
ಸ್ಥಾನವನ್ನೇ ಹೊಂದಿದ್ದನು. ಈ ರಾಜನು ನಾಣ್ಯಗಳನ್ನು ಸಹ ತನ್ನ ಹೆಸರಿನಲ್ಲಿಯೇ
ಹೊರಡಿಸುತ್ತಿದ್ದನು. ಇಂತಹ 'ರಾಜ'ರಿಗಿಂತಲೂ ಅಂತಸ್ತಿನಲ್ಲಿ ಕಡಿಮೆಯಾದವ
ರೆಂದರೆ 'ಮಹಾಭೋಜರು' ಮತ್ತು 'ಮಹಾರಥಿಗಳು'. ಇವರು ಪಶ್ಚಿಮ ಡೆಕ್ಕಾನಿನ
ಕೆಲವು ವಂಶಕ್ಕೆ ಸೇರಿದ ವಂಶಪಾರಂಪರ್ಯಾನುಗತರಾದ ಮುಖಂಡರು. ಮತ್ತು
ಕೊನೆಯದಾಗಿ ಮಹಾ ಸೇನಾಪತಿಗಳು. ಇವರ ಕರ್ತವ್ಯಗಳು ನಾನಾ ತೆರನಾಗಿ
ದ್ದುವು. ಇವರಲ್ಲಿ ಕೆಲವರು ಸ್ಥಳೀಯ ರಾಜ್ಯಪಾಲರಾಗಿದ್ದರು. ಮತ್ತೆ ಕೆಲವರು
ಕೇಂದ್ರ ಆಡಳಿತದಾರರಾಗಿದ್ದರು. ಇಷ್ಟು ಅನೇಕಾನೇಕ ಬಗೆಯ ಅಧಿಕಾರಿಗಳಿದ್ದರೂ
ರಾಷ್ಟ್ರವು ಹೆಚ್ಚಿನ ಪ್ರಮಾಣದಲ್ಲಿ ಶಾಂತತೆಯನ್ನು ರಾಜ್ಯದಲ್ಲಿ ನೆಲೆಗೊಳಿಸುವ
ಕಾರ್ಯದಲ್ಲಿ ಮಾತ್ರ ನಿರತವಾಗಿತ್ತು. ಏತಕ್ಕಂದರೆ ಆ ಕಾಲದಲ್ಲಿ ಆಧುನಿಕ ರಾಷ್ಟ್ರವು
ನೆರವೇರಿಸುತ್ತಿರುವ ಅನೇಕಾನೇಕ ರಾಜ್ಯ ಪರಿಪಾಲನಾ ಕರ್ತವ್ಯಗಳನ್ನು ಸಮಾ
ಜವೇ ತನ್ನ ತಲೆ ಮೇಲೆ ಹೊತ್ತು ನಿರ್ವಹಿಸುತ್ತಿತ್ತು.

ಸಮಾಜ ರಚನಾಕ್ರಮವನ್ನು ಕುರಿತು ವಿಚಾರಿಸುವಾಗ ದೇಶೀಯ ಸಮಾಜ
ರಚನೆಯಲ್ಲಿ ವಿದೇಶೀಯರನ್ನು ಸಹ ಬೆರೆಸಿಕೊಳ್ಳುವುದೇ ಆಕಾಲದ ಒಂದು ಗಣ
ನೀಯ ವೈಶಿಷ್ಟ್ಯವೆಂದು ಹೇಳಬಹುದು. ವಲಸೆ ಬಂದ ಗ್ರೀಕರೂ, ಶಕರೂ, ವ್ಯಾಪಾ
ರದ ಉದ್ದೇಶದಿಂದ ದೇಶದಲ್ಲಿ ನೆಲೆಸಿದ್ದರು. ಕಾಲಾನುಕಾಲದಲ್ಲಿ ಅವರು ಭಾರ
ತೀಯ ನಡವಳಿಕೆಗಳನ್ನೂ, ಪದ್ಧತಿಗಳನ್ನೂ, ಅನುಸರಿಸಿದರು. ಕೆಲವು ಗ್ರೀಕರಂತೂ
ಭಾರತೀಯ ಸ್ತ್ರೀಯರನ್ನೇ ಮದುವೆ ಮಾಡಿಕೊಂಡು ತಾವೂ ಭಾರತೀಯ ರಚನಾ
ಕ್ರಮದ ಒಂದು ಭಾಗವೇ ಆಗಿಹೋದರು. ತಾವು ಆಳರಸರಾಗಿದ್ದರೆಂಬ ರಾಜಕೀಯ
ಸನ್ನಿವೇಶವನ್ನು ಮುಂದಿಟ್ಟು ಶಕರನ್ನು, ಹಿಂದೂ ಧರ್ಮದಲ್ಲಿ ಕ್ಷತ್ರಿಯರನ್ನಾಗಿ
ಸೇರಿಸಿಕೊಳ್ಳಲಾಯಿತು.

ಬೌದ್ಧರು, ಜೈನರು ಮತ್ತು ಬ್ರಾಹ್ಮಣರು ಉತ್ತರ ಭಾಗದಿಂದ ಶತವಾಹನರ ರಾಜ್ಯಗಳಲ್ಲಿ ಸರಾಗವಾಗಿ ಪ್ರವೇಶ ಮಾಡತೊಡಗಿದರೆಂಬುವದರಲ್ಲಿಯೂ, ರಾಜಕೃಪೆಯನ್ನು ಪಡೆಯುವುದಕ್ಕಾಗಿ ಅವರಲ್ಲಿ ಒಬ್ಬರೊಡನೊಬ್ಬರಿಗೆ ಸ್ಪರ್ಧೆಯು ನಡೆಯುತ್ತಿತ್ತೆಂಬುದರಲ್ಲಿಯೂ ಎಳ್ಳಷ್ಟೂ ಸಂದೇಹವಿಲ್ಲ. ಬೌದ್ಧರು ಅಲ್ಪ ಸ್ವಲ್ಪ ರಾಜಾಶ್ರಯವನ್ನು ಪಡೆದರು. ಆದರೆ ಬ್ರಾಹ್ಮಣರು ಸ್ಪಷ್ಟವಾದ ರೀತಿಯಲ್ಲಿ ಅತಿ ಹೆಚ್ಚಿನ ರಾಜಕೃಪೆಯನ್ನು ಪಡೆದರು. ಶಾತವಾಹನರ ಕಾಲದಲ್ಲಿ ರಾಜಸ್ಥಾನಗಳಲ್ಲಿ ಆರ್ಯರ ಪ್ರಭಾವವು ಉಂಟಾಗುತ್ತಿದ್ದುದು ಮತ್ತು ಅವರ ಮೂಲಕ ಅದೇ ಪ್ರಭಾವವು ದೇಶದಲ್ಲೆಲ್ಲ ಹರಡುವುದು ಗಣನೀಯ ರೀತಿಯಲ್ಲಿ ಮುಂದುವರಿಯುತ್ತಿತ್ತು. ಮತಾಂತರ ಹೊಂದಿದ ಇತರರಂತೆ ಶಕರೂ ಸಹ ಬ್ರಾಹ್ಮಣರನ್ನೂ, ಅವರ ಸಂಸ್ಥೆಗಳನ್ನೂ ಪ್ರೋತ್ಸಾಹಿಸುವುದರಲ್ಲಿ ಬಹಳ ಉತ್ಸಾಹಿಗಳಾಗಿದ್ದರು. ಒಂದೆಡೆಯಲ್ಲಿ ಶಕ ಉಷವದಾತನು ಹಣವನ್ನೂ, ಹದಿನಾರು ಗ್ರಾಮಗಳನ್ನೂ, ಮೂರು ಲಕ್ಷ ಗೋವುಗಳನ್ನೂ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು. ಮತ್ತೊಂದೆಡೆ ಅವನು ಬ್ರಾಹ್ಮಣರಿಗೆ ಎಂಟು ಜನ ಪತ್ನಿಯರನ್ನು, ಕೊಟ್ಟನಲ್ಲದೆ ಸಾವಿರಾರು ಬ್ರಾಹ್ಮಣರಿಗೆ ವರ್ಷದಾದ್ಯಂತವೂ ಭೂರಿಭೋಜನವನ್ನೂ ಮಾಡಿಸಿದನು. ಮೂರನೆಯ ಶತವಾಹನ ಅರಸರು ಅನೇಕ ವೇದೋಕ್ತ ಯಜ್ಞಗಳನ್ನು ಮಾಡಿದರು. ತಾನು ಬ್ರಾಹ್ಮಣರ ಬೆಂಬಲಿಗನೆಂದು ಅಂದುಕೊಳ್ಳುವ ಗೌತಮೀಪುತ್ರಶತಕರ್ಣಿಯು ಸಾಂಪ್ರದಾಯಿಕ ಪುರಾಣೇತಿಹಾಸಗಳನ್ನು ಚೆನ್ನಾಗಿ ಕಲಿತಿದ್ದನು. ಚಾತುರ್ವರ್ಣಗಳ ಸಂಕರವನ್ನು ತಾನು ತಡೆಗಟ್ಟಿದೆನೆಂದು ಅವನು ಹೇಳಿಕೊಳ್ಳುತಿದ್ದನು. ಬ್ರಾಹ್ಮಣರಿಗೆ ನೀಡಿದ ಆಶ್ರಯ, ಪ್ರೋತ್ಸಾಹಗಳಿಗೂ, ವರ್ಣಾಶ್ರಮವನ್ನು ಪುನರುತ್ಥಾನಗೊಳಿಸುವ ಕಾರ್ಯಕ್ರಮಗಳಿಗೂ ಮತ್ತು ದಿನೇ ದಿನೇ ಹೆಚ್ಚುತ್ತಿದ್ದ ಆರ್ಯರ ಪ್ರಭಾವವನ್ನೂ ಸಂಬಂಧವಿತ್ತೆಂದು ಇದರಿಂದ ಗೊತ್ತಾಗುತ್ತದೆ. ಹದಿನೇಳನೆಯ ಅರಸನಾದ ಹಾಲಾ ಎಂಬವನು ಶಿವನ ಭಕ್ತನಾಗಿದ್ದನು. ಆ ಕಾಲದ ಶಿಲಾಶಾಸನಗಳು ಇಂದ್ರ, ವಿಷ್ಣು, ಶಿವ ಮತ್ತು ಸ್ಕಂದ ಇವರ ಪೂಜೆಗಳು ಆ ಕಾಲದಲ್ಲಿ ಆಚರಣೆಯಲ್ಲಿದ್ದುವೆಂದು ತೋರಿಸುತ್ತವೆ. ಹಾಲನ ಸಪ್ತಶತಿಯಲ್ಲಿ ಶಿವ ಸ್ಕಂದ ಮತ್ತು ಗಣೇಶ ಇವುಗಳನ್ನು ಕುರಿತು ಪ್ರಸ್ತಾಪ ಮಾಡಲಾಗಿದೆ.

ಹೊರಗಿನವರು ಬರಲು ಆರಂಭಿಸಿದ ಮೇಲೆ ಉದ್ಯೋಗದ ಆಧಾರದ ಮೇಲೆ ಉಪಮತಗಳು ಬೆಳವಣಿಗೆ ಹೊಂದುವ ಅಭ್ಯಾಸವು ಆಚರಣೆಗೆ ಬರತೊಡಗಿತು. ಗೋಲಿಕರು ಎಂಬ ಕುರುಬರೂ, ಹಾಲಿಕರು ಎಂಬ ನೇಗಿಲು ಹಿಡಿದು ಉಳುವವರೂ ಮರ್ಧಕ ಎಂಬ ಕ್ಷತ್ರಿಯರ ಒಂದು ಶಾಖೆಯೂ ಉಪಜಾತಿಗಳಾಗಿ ಹುಟ್ಟಿಕೊಂಡವೆಂದು ತಿಳಿದು ಬಂದಿದೆ. ಆದರೆ ಜಾತಿಯ ನಿಬಂಧನೆಗಳು ಅಷ್ಟೇನೂ ಹೆಚ್ಚು

ಕಠಿಣವಾಗಿರಲಿಲ್ಲ. ಅಂತರ್ಜಾತೀಯ ವಿವಾಹಗಳೂ ಆಗಿಂದಾಗ್ಯೆ ನಡೆಯುತ್ತಿದ್ದುವು. ಕೆಲವು ವೇಳೆ ಕ್ಷತ್ರಿಯರೂ ವೈಶ್ಯರ ಉದ್ಯೋಗವಾದ ವ್ಯಾಪಾರವನ್ನು ನಡೆಸುತ್ತಿದ್ದರು.

ಶಾತವಾಹನ ಅರಸರು ಮತಸಹಿಷ್ಣುತೆಯ ನೀತಿಯನ್ನು ಅವಲಂಬಿಸಿದರು. ಅವರ ರಾಜ್ಯದಲ್ಲಿ ಹಿಂದುಗಳು, ಜೈನರು ಮತ್ತು ಬೌದ್ಧರು ಎಂಬ ತಾರತಮ್ಯವಿಲ್ಲದೆ ಎಲ್ಲರಿಗೂ ಸಮಾನ ಸ್ವಾತಂತ್ರ್ಯವಿತ್ತು. ಆ ಅರಸರಲ್ಲಿ ಕೆಲವರು ಹಿಂದುಗಳಾಗಿದ್ದರು. ಮತ್ತೆ ಕೆಲವರು ಬೌದ್ಧರಾಗಿದ್ದರು. ಆದರೆ ಅವರಲ್ಲಿ ಯಾರೊಬ್ಬರೂ ಮತೀಯ ಪಕ್ಷಪಾತದ ಅಪಾದನೆಗೆ ಗುರಿಯಾಗಿರಲಿಲ್ಲ. ಹಿಂದೂ ದೇವಾಲಯಗಳೂ, ಬೌದ್ಧರ ಶಿಲಾಸ್ತಂಭಗಳೂ ಅರಸರ ಉದಾರ ಆಶ್ರಯದಲ್ಲಿಯೇ ಕಟ್ಟಲ್ಪಡುತಿದ್ದುವು. ಆದರೆ ಕಾಲಗತಿಯಿಂದ ಹಿಂದೂ ದೇವಾಲಯಗಳು ಶಿಥಿಲವಾಗಿ ಹೋದರೂ, ಬೌದ್ಧ ಗುಹೆಗಳೂ, ಪವಿತ್ರ ವಿಹಾರಗಳೂ ಅದೃಷ್ಟ ವಶದಿಂದ ಅಭಿನ್ನವಾಗಿ ಉಳಿದಿವೆ.

ಶತವಾಹನರ ಪ್ರಾಬಲ್ಯವು ಕುಂದಿದ ನಂತರ ಸಾಮ್ರಾಜ್ಯದ ನಾನಾ ಭಾಗಗಳಲ್ಲಿ ಪಾಳೆಯಗಾರರು ಸ್ವತಂತ್ರರಾಗಿ ರಾಜ್ಯ ಆಡಳಿತವನ್ನು ನಡೆಸತೊಡಗಿದರು. ಈ ರೀತಿ ಮಹಾರಾಷ್ಟ್ರದಲ್ಲಿ ಅಭೀರರೂ, ಬಿರಾರ್ ಪ್ರದೇಶದಲ್ಲಿ ವಕಟಕರೂ, ಕೊಂಕಣದಲ್ಲಿ ಚೂತರೂ, ಪಶ್ಚಿಮದ ಕನ್ನಡಜಿಲ್ಲೆಯಲ್ಲಿ ಕದಂಬರೂ ರಾಜ್ಯಾಡಳಿತವನ್ನು ವಶಪಡಿಸಿಕೊಂಡರು. ಈ ತನ್ಮಧ್ಯೆ ಕಾಂಚಿಯಲ್ಲಿ ರಾಜ್ಯಾಡಳಿತವನ್ನು ನೆಲೆಗೊಳಿಸಿದ್ದ ಪಲ್ಲವರು ಶತವಾಹನರ ಗತಕಾಲದ ಸಾಮ್ರಾಜ್ಯಕ್ಕೆ ಆಗ್ನೇಯ ಭಾಗದಲ್ಲಿ ತಮ್ಮ ಅಧಿಕಾರವನ್ನು ಭದ್ರಪಡಿಸಿಕೊಂಡಿದ್ದರು. ಹೀಗೆ ನಾಲ್ಕು ಶತಮಾನಗಳಿಗೂ ಹೆಚ್ಚಾಗಿ ನಡೆದು ಬಂದ ದಕ್ಷಿಣದ ರಾಜಕೀಯ ಐಕ್ಯವು ಮುರಿದುಬಿದ್ದಿತು. ಅದರ ಪರಿಣಾಮವಾಗಿ ಅನೇಕ ಸಣ್ಣ ಪುಟ್ಟ ಆಡಳಿತ ವರ್ಗಗಳು ಒಂದರೊಡನೊಂದು ಪದವಿ ಪ್ರತಿಷ್ಠೆಗಳಿಗಾಗಿ ಎಡೆಬಿಡದೆ ಹೋರಾಡುತ್ತಿದ್ದುವು. ಹೋರಾಟವು ಚಾಲುಕ್ಯರ ಪ್ರಾಬಲ್ಯದ ವರೆಗೆ ನಡೆಯುತ್ತಾ ಇತ್ತು ಎಂದು ಹೇಳಬಹುದು.

ಮೇಲೆ ನಿರೂಪಿಸಿದ ಚಾರಿತ್ರಿಕ ವಿಷಯಗಳಿಂದ ನಮ್ಮ ನಾಡಿಗೆ ಬಂದ ಬ್ರಾಹ್ಮಣರ ಪ್ರಥಮ ವಲಸೆ ಕ್ರಿ. ಪೂ. 300ರಷ್ಟಕ್ಕೆ ಎಂದು ಅನುಮಾನಿಸಬಹುದು. ತಮಿಳು ಸಾಹಿತ್ಯಗಳಲ್ಲಿ ಉಲ್ಲೇಖಿತರಾದ ಮೌರ್ಯರು ಮಗಧದ ಮೌರ್ಯರೇ ವಿನಹ ಅವರ ಶಾಖೆಯರೆಂದೆನಿಸಿಕೊಳ್ಳುವ ಕೊಂಕಣದ ಮೌರ್ಯರಾಗಿರಲಿಕ್ಕಿಲ್ಲ. ಕಾರಣವೇನೆಂದರೆ ಕೊಂಕಣದ ಮೌರ್ಯರ ಕಾಲವು ಸಾಧಾರಣ ಕ್ರಿ.ಶ. ಆರನೇ ಶತಮಾನ; ಆದರೆ ಸಂಘಮ್ ಸಾಹಿತ್ಯದ ಕಾಲ ಕ್ರಿ. ಶ. ಮೂರನೇ ಶತಮಾನವೆಂದು ಸ್ವೀಕೃತವಾಗಿ ನಿರ್ಧರಿಸಲ್ಪಟ್ಟಿದೆ. ಮೌರ್ಯರ ಆಡಳಿತೆಗೆ ನಮ್ಮ ನಾಡು ನೇರವಾಗಿ ಸೇರದಿ

ದ್ದರೂ ಅಂತೆಯೇ ಶಾತವಾಹನರ ರಾಜ್ಯಾಡಳಿತೆಯಲ್ಲಿ ತುಳುವವು ಒಂದು ಭಾಗ ವಾಗಿತ್ತೆಂದು ಹೇಳುವುದು ದುಸ್ತರವಾದರೂ, ಈ ಎರಡೂ ಸಂಸ್ಥಾಪಕರ ಪ್ರಭಾವವು ಗಣ್ಯವಾಗಿ ನಮ್ಮ ಕನ್ನಡ ಜಿಲ್ಲೆಗೆ ಬಿದ್ದಿರಬಹುದೆಂದೂ ತಿಳಕೊಳ್ಳಲು ಕಾರಣಗಳಿವೆ. ಈ ಪ್ರಾಂತ್ಯದಲ್ಲಿ ನೆಲೆನಿಂತ ಆರ್ಯರ ಅಧಿನಿವೇಶಗಳಿಗೆ ಅಧಿಕಾರಿಗಳಾಗಿದ್ದವರು ಯಾರು ಎಂಬ ಪ್ರಶ್ನೆಗೆ ವಿಮರ್ಶೆಯಿಂದ ಉತ್ತರಿಸಬೇಕಾಗುತ್ತದೆ. ಸುಮಾರು ಕ್ರಿ. ಪೂ. 330ರಲ್ಲಿ ಚಂದ್ರಗುಪ್ತ ಮೌರ್ಯನ ರಾಜ್ಯಭಾರವನ್ನು ವ್ಯವಸ್ಥೆಗೊಳಿಸಿದ ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ವಿವರಿಸಿರುವ ಆಡಳಿತೆಯ ಕ್ರಮದಂತೆ ಸಣ್ಣನೆಲೆ ವೀಡುಗಳ ಅಧಿಕಾರಿಗಳು ಸ್ಥಾನಿಕರೆಂದು ಕರೆಯಲ್ಪಡುತ್ತಿದ್ದರೆಂದೂ ಅವರು ಧಾರ್ಮಿಕ ರಾಜಕೀಯಾಧಿಕಾರಿಗಳಾಗಿದ್ದರೆಂದೂ ಸ್ಪಷ್ಟವಿದೆ. ಅಲ್ಲದೆ ಈ ಅಧಿಕಾರಿ ಗಳು ಉಚ್ಚ ಕುಲದವರೂ ಸರ್ವಮಾನ್ಯರೂ ಆಗಿದ್ದು ಅಧಿಕಾರ ನಿರ್ವಹಿಸಲು ಸಮ ರ್ಥರಾದ ಜನರಾಗಿರಬೇಕೆಂದೂ ನಿರೂಪಿಸಿದೆ. ಆದ್ದರಿಂದ ತುಳುನಾಡಿಗೆ ಸ್ಥಾನಿಕರ ಪ್ರಥಮ ವಲಸೆಯು ಸುಮಾರು ಕ್ರಿ. ಪೂ. 300ರಲ್ಲಿ ಆಗಿರಬಹುದೆಂದು ಅನುಮೇ ಯಿಸಬಹುದು. ಅದಲ್ಲದೆ ಈ ದಂಡಯಾತ್ರೆಯನ್ನನುಸರಿಸಿ ಪಶ್ಚಿಮ ಕರಾವಳಿಯನ್ನು ಸೇರಿಕೊಂಡ ಬ್ರಾಹ್ಮಣರೆಲ್ಲರೂ ಋಗ್ವೇದಿಗಳೂ, ಅಶ್ವಲಾಯನ ಸೂತ್ರಾನುಸಾರಿ ಗಳೂ ಭಾಷ್ಕಲ ಶಾಖೆಯವರೂ ಎಂದು ತೀರ್ಮಾನಿಸಲು ಎಡೆ ಇದೆ. ಈ ಪಂಗಡದ ಬ್ರಾಹ್ಮಣರು ವೇದಾಧ್ಯಯನದ ಪ್ರಾರಂಭಿಕ ಕರ್ಮವಾದ ಉಪಾಕರ್ಮವನ್ನೂ ಅಂದಿನ ಪದ್ಧತಿಯಂತೆ ಪರಂಪರೆಯಿಂದ ಈಗಲೂ ಸಿಂಹಮಾಸದ ಶ್ರವಣ ನಕ್ಷತ್ರ ದಂದು ಮಾಡುತ್ತಾರೆಂಬುದೂ, ಶಿವಾರಾಧನೆಗೆ ಲಿಂಗ ಪೂಜೆಯ ಕ್ರಮವನ್ನು (ವಿಗ ಹವನ್ನಲ್ಲ) ಅನುಸರಿಸುತ್ತಾರೆಂಬುದೂ, ತಮ್ಮ ದೇವಾಲಯಗಳ ಪ್ರತಿಷ್ಠೆ ಪೂಜೆಗಳಿಗೆ ಋಗ್ವೇದ ಸೂಕ್ತ ಪ್ರಧಾನವಾದ ತಾಂತ್ರಿಕ ಕ್ರಮವನ್ನು ಅನುಸರಿಸುತ್ತಾರೆಂಬುದೂ, ನಾಗಾರಾಧನೆಗೆ ಪ್ರಾಶಸ್ತ್ಯಕೊಡುತ್ತಾರೆಂಬುದೂ, ಭೂತಾರಾಧನೆಯನ್ನು ತಿರಸ್ಕರಿ ಸುವುದಿಲ್ಲವೆಂಬುದೂ ಮೇಲಿನ ತೀರ್ಮಾನವನ್ನು ಪುಷ್ಟೀಕರಿಸುತ್ತದೆ.

ಮೌರ್ಯರ ಪತನದ ನಂತರ ಸ್ಥಾಪಿತವಾದ ಶತವಾಹನರ ಪ್ರಭುತ್ವ ಕಾಲದಲ್ಲಿ ದಕ್ಷಿಣದ ಆರ್ಯೀಕರಣ ಹೇಗಾಗಿತ್ತೆಂದೂ ಬ್ರಾಹ್ಮಣರ ವರ್ಚಸ್ಸು ಯಾವ ರೀತಿ ಯಲ್ಲಿ ವೃದ್ಧಿಯಾಗತ್ತೆಂದೂ, ಅವರ ಆಳ್ವಿಕೆಯ ಕಾಲದಲ್ಲಿ ಶಿವ, ವಿಷ್ಣು, ಸ್ಕಂದ, ಗಣಪತಿ, ಭಾಸ್ಕರ, ಪಂಚದೇವತೆಗಳ ಆರಾಧನೆಯು ಹೆಚ್ಚಿನ ಪ್ರಾಮುಖ್ಯತೆಯನ್ನು ಹೇಗೆಪಡೆಯಿತೆಂದೂ ಮೇಲೆ ನಿರೂಪಿಸಿದೆ. ಸ್ಕಂದನ ಔಪಾಸನೆಯು ನಮ್ಮ ನಾಡಿ ನಲ್ಲಿ ವಿಶಿಷ್ಟವಾಗಿ ಬಳಕೆಗೆ ಬಂದುದು ಈ ಶತವಾಹನರ ಕಾಲದಲ್ಲಿ. ಪಶ್ಚಿಮ ಕರಾ ವಳಿಯಲ್ಲಿ ಕೊಂಕಣದಿಂದ ಬಂದಿರಬಹುದಾದ ಬ್ರಾಹ್ಮಣರಿಂದಲೇ ಎಂದು ನಂಬಲು

ಅಡ್ಡಿ ಇಲ್ಲ. ಇವರೇ ಸ್ಥಾನಿಕರು ತುಳುನಾಡಿನಲ್ಲಿ ನೆಲೆಸಿದ ಸ್ಥಾನಿಕರು ಇಲ್ಲಿಯ ಮೂಲನಿವಾಸಿಗಳ ಕ್ರಮಪದ್ಧತಿಗಳನ್ನು ಪರಿಶೀಲಿಸಿಕೊಂಡು, ಅವುಗಳನ್ನು ಅಹಿತವಾಗಿಯೂ, ಒತ್ತಾಯ ಪೂರ್ವಕವಾಗಿಯೂ ಬದಲಾಯಿಸುವ ಗೊಡವೆಗೆ ಹೋಗದೆ ಅವಕ್ಕೆ ಸನಾತನ ಧರ್ಮದ ಮೆರುಗುಕೊಟ್ಟು ಸ್ವಲ್ಪ ಮಟ್ಟಿಗೆ ರೂಪಾಂತರಿಸಿದರೆಂದು ಊಹಿಸಬಹುದು. ಶೈವ ಸಂಪ್ರದಾಯದವರಾದ ಸ್ಥಾನಿಕರು ಭೂತಗಳೆಲ್ಲಾ ಶಿವನ ಅಥವಾ ಅಂಬಿಕೆಯ ಗಣಗಳೆಂದು ಹೇಳಿ ಭೂತರಾಧನೆಯನ್ನು ಸನಾತನ ಧರ್ಮದಲ್ಲಿ ಸೇರಿಸಿ, ಶಿವರುದ್ರಾಣಿ, ಸ್ಕಂದ ಗಣಪತಿ, ನಾಗ ಇವರುಗಳ ಆರಾಧನೆಯನ್ನು ಇಲ್ಲಿ ಪ್ರಚಾರಕ್ಕೆ ತಂದರು ಎಂದು ನಿರ್ಧರಿಸಬಹುದು. ಇಲ್ಲಿ ರೂಢಿಯಲ್ಲಿದ್ದ ದ್ರಾವಿಡ ಮೂಲವಾದ ತುಳುಭಾಷೆಯನ್ನು ತಮ್ಮ ಸಂಸ್ಕೃತ ಭಾಷೆಗನುಗುಣವಾಗಿ ಹೊಂದಿಸಿಕೊಂಡು 'ಬ್ರಾಹ್ಮಣರ ತುಳು' ಎಂಬ ರೂಪಾಂತರವನ್ನು ಮಾಡಿಕೊಂಡು ಅದನ್ನು ಬಳಸಿಕೊಂಡರು. ಹೀಗೆ ಇಲ್ಲಿಯ ಮೂಲ ನಿವಾಸಿಗಳಿಗೆ ಯಾವ ರೀತಿಯಲ್ಲಿಯೂ ವಿರೋಧವಾಗದಂತೆ ಅವರಿಗನುಗುಣವಾಗಿ ವರ್ತಿಸಿ ಅವರ ಮನ್ನಣೆಯನ್ನು ಪಡೆದು ಜೀವಿಸತೊಡಗಿದರು. ಇವರನ್ನು ತಾನಿಕೆರ್ (ಸ್ಥಾನಿಕರು) ಬ್ರಾಣೆರ್ (ಬ್ರಾಹ್ಮಣರು) ನಾಗೆರ್ (ನಾಗ ಬ್ರಾಹ್ಮಣರು), ಬಾಣಾರ್, ಅಯ್ಯೆ, ಬುದ್ಧಿವಂತಯ್ಯ—ಇಂಥ ಹೆಸರುಗಳಿಂದ ಇಲ್ಲಿಯ ನಿವಾಸಿಗಳು ಕರೆಯುತ್ತಿದ್ದರು. ದೇವಸ್ಥಾನ ಮತ್ತು ದೈವದ ಗುಡಿಗಳಲ್ಲಿ ಅರ್ಚಿಸುವುದು, ನಾಗನಿಗೆ ಪೂಜೆ ಮಾಡುವುದು, ಶುಭಕೆಲಸಕ್ಕೆ ಯೋಗ್ಯ ದಿನ ಹೇಳುವುದು. ವಿವಾದಗಳನ್ನು ತೀರ್ಮಾನಿಸುವುದು, ಗುರುಗಳಂತೆ ಸಾಮಾನ್ಯವಾದ ಬುದ್ಧಿ, ನೀತಿ ಹೇಳುವುದು ಇತ್ಯಾದಿ ಕೆಲಸಗಳನ್ನು ಮಾಡಿಕೊಂಡು ಸ್ಥಾನಿಕರು ಈ ನಾಡಿನ ಜನರೊಡನೆ ಸಹಕರಿಸಿ ಬಾಳಿಕೊಂಡಿದ್ದರು.

ಕೌಟಿಲ್ಯನ ಅರ್ಥ ಶಾಸ್ತ್ರದಂತೆ ಸ್ಥಾನಿಕರು ರಾಜಕೀಯ ಅಥವಾ ಧಾರ್ಮಿಕ ಅಧಿಕಾರಿಗಳಾದರೂ ಅವರಿಗೆ ಧಾರ್ಮಿಕ ಅಧಿಕಾರ ನಿರ್ವಹಣೆಗೆ ವಂಶಪಾರಂಪರ್ಯದಲ್ಲಿ 'ಉತ್ತಾರ' ಕೊಡುವ ಪದ್ಧತಿ ಏರ್ಪಟ್ಟುದರಿಂದ ಅವರು ಬಹು ಬೇಗನೆ ಒಂದು ಜಾತಿಯಾಗಿ ಯಾ ಪಂಗಡವಾಗಿ ಬೆಳೆದರು. ಒಂದು ಸ್ಥಾನಿಕ ಮನೆತನದಿಂದ ಎರಡು ಮೂರು ತಲೆಮಾರುಗಳಲ್ಲಿ ಹತ್ತಿಪ್ಪತ್ತು ಮನೆತನಗಳಾದುವು. ಸಂತತಿ ಪಾರಂಪರ್ಯವಾಗಿ ದೊರೆತ ಉಂಬಳಿಗಳಲ್ಲಿ ಅವರೆಲ್ಲರೂ ಪಾಲುಗಾರರಾದರು. ಆದುದರಿಂದ ತಮ್ಮ ಜನಸಂಖ್ಯೆಯು ಹೆಚ್ಚಿದಂತೆ ಅವರು ದೇವಸ್ಥಾನಗಳನ್ನು ಹೆಚ್ಚಿಸಿಕೊಳ್ಳುತ್ತಲೂ ಇವುಗಳಿಗೆ ಶ್ರೀಮಂತರಾದ ಭಕ್ತರುಗಳಿಂದ ಉಂಬಳಿಗಳನ್ನು ತಮ್ಮ ಹೆಸರಿನಲ್ಲಿ ಪಡೆಯುತ್ತಲೂ ತಮ್ಮ ವಿಶಿಷ್ಟತೆಗಳನ್ನು ಉಳಿಸಿಕೊಂಡು ಕ್ರಮೇಣ ಒಂದು ಜಾತಿಯಾಗಿ ಏರ್ಪಟ್ಟರು.

ಸ್ಥಾನಿಕವೆಂಬ ಅಧಿಕಾರ ಸ್ಥಾನವು ಕೌಟಿಲ್ಯನ ಕಾಲದಲ್ಲಿ ಆಡಳಿತದಲ್ಲಿ ಸೇರಿದ್ದರೂ, ಅನಂತರದ ರಾಜ್ಯಭಾರ ಕ್ರಮ ಪದ್ಧತಿಗಳಲ್ಲಿ ಆ ಹೆಸರಿನ ಅಧಿಕಾರ ಸ್ಥಾನವು ಇದ್ದಂತೆ ಕಂಡು ಬರುವುದಿಲ್ಲ. ಆದರೆ ದಕ್ಷಿಣ ಹಿಂದೂದೇಶದಲ್ಲಿ ಮುಖ್ಯವಾಗಿ ಕನ್ನಡ ಜಿಲ್ಲೆಗಳು, ಮೈಸೂರು ಪ್ರಾಂತ್ಯ, ತಮಿಳುನಾಡಿನ ಪಶ್ಚಿಮ ಪ್ರದೇಶಗಳಲ್ಲಿ ಕ್ರಿ. ಪೂ. 3ನೇ ಶತಮಾನದಲ್ಲಿ ಮೇಲೆ ಹೇಳಿದಂತೆ ಅಧಿಕಾರ ಸ್ಥಾನದಲ್ಲಿ ಬಂದು ನೆಲೆಸಿದ ಆರ್ಯ ಬ್ರಾಹ್ಮಣರು ಸ್ಥಾನಿಕರೆಂದು ಕರೆಯಲ್ಪಟ್ಟು, ತಮ್ಮ ಕೈ ಕೆಳಗೆ ಬಂದ ಧಾರ್ಮಿಕ ಸಂಸ್ಥೆಗಳ ಅಧಿಕಾರವನ್ನು ಹಾಗೆಯೇ ಉಳಿಸಿಕೊಂಡು, ಜನಸಂಖ್ಯೆ ಹೆಚ್ಚಾದಂತೆ ಅಂಥ ಧಾರ್ಮಿಕ ಸಂಸ್ಥೆಗಳು ಹೆಚ್ಚುತ್ತಿದ್ದುದರಿಂದ ಮುಖ್ಯವಾಗಿ ದೇವಾಲಯಗಳ ಅಧಿಕಾರಿಗಳಾಗಿ ಕ್ರಿ. ಶ. 1700ರ ವರೆಗೆ ಮೆರೆದರು ಎಂಬುದು ಶಿಲಾಶಾಸನಗಳಿಂದ ವಿಷದವಾಗುತ್ತದೆ. ಇದರ ಕೂಲಂಕಷವಿಚಾರವನ್ನು ಮುಂದಿನ ಲೇಖನದಲ್ಲಿ ಕೊಡುವೆನು.

ತುಳುನಾಡಿಗೆ ಬ್ರಾಹ್ಮಣರ ಎರಡನೆಯ ವಲಸೆಯು ಬನವಾಸಿಯ ಕದಂಬರ ಆಳ್ವಿಕೆಯಲ್ಲಿ ಬರಲು ಸಾಧ್ಯವಿದೆ ಎಂಬುದಕ್ಕೆ ಕೆಲವು ಆಧಾರಗಳು ಕಂಡುಬರುತ್ತದೆ. ಈ ವಲಸೆಯು ನಾಡಿನಉತ್ತರ ಭಾಗಕ್ಕೆ (ಎಂದರೆ ಉತ್ತರ ಕನ್ನಡಕ್ಕೆ ಬಂದಿರುವಂತೆ) ಕಂಡು ಬರುತ್ತದೆ. ರೈಸ್‌ದೊರೆಗೆ ತಾಳ್ಗುಂದದಲ್ಲಿ ಸಿಕ್ಕಿದ ಶಾಂತಿವರ್ಮನ ಕಾಲದ ಒಂದು ಶಾಸನದಲ್ಲಿ ಈ ವಂಶದ ವಿಷಯ ಈ ಕೆಳಗೆ ಬರೆದ ರೀತಿಯಲ್ಲಿದೆ.

"ಮಾನ್ಯವು ಗೋತ್ರದ ಹರಿತಿಪುತ್ರರೆಂಬ ಒಂದು ಬ್ರಾಹ್ಮಣರಕುಟುಂಬವಿತ್ತು. ಈ ಕುಟುಂಬದವರುತಮ್ಮಮನೆಯ ಬಾಗಿಲಲ್ಲಿಕದಂಬಮರವನ್ನುನೆಡುತ್ತಿದ್ದರು. ಇದರಿಂದ ಈ ಕುಟುಂಬಕ್ಕೆ ಕದಂಬರೆಂಬಹೆಸರು ಬಂತು. ಈ ಕುಟುಂಬದಲ್ಲಿ ಮಯೂರ ಶರ್ಮನೆಂಬವನು ಹುಟ್ಟಿದನು. ಇವನು ತನ್ನ ಗುರುವಾದ ವೀರಶರ್ಮನೊಡನೆ ಪಲ್ಲವರ ರಾಜಧಾನಿಗೆ (ಪಲ್ಲವೇಂದ್ರ ಪುರಿ) ಅಲ್ಲಿಯ 'ಘಟಿಕಾ'ದಲ್ಲಿ ಶಾಸ್ತ್ರವನ್ನು ಕಲಿಯುವುದಕ್ಕೋಸ್ಕರ ಹೋದನು. ಅಲ್ಲಿ ನಡೆದ ಅಶ್ವಮೇಧಯಾಗ ಒಂದರಲ್ಲಿ ಕ್ಷತ್ರಿಯರು ಬ್ರಾಹ್ಮಣರನ್ನು ಯೋಗ್ಯ ರೀತಿಯಲ್ಲಿ ಕಾಣಲಿಲ್ಲ, ಗೌರವಿಸಲಿಲ್ಲವೆಂಬಕಾರಣದಿಂದ ಮಯೂರ ಶರ್ಮನು ಕ್ಷತ್ರಿಯರ ಪರಾಕ್ರಮವನ್ನು ತಾಳಿ, ಯೋಧನೇ ಆಗಿ, ಶ್ರೀ ಪರ್ವತದಲ್ಲಿ (ಶ್ರಿ?) ತಲೆಮರೆಸಿಕೊಂಡು ಪಲ್ಲವರ ಗಡಿಪ್ರದೇಶಗಳನ್ನು ಧಾಳಿ ಮಾಡಲು ಉಪಕ್ರಮಿಸಿದನು. ಬೃಹದ್ಬಾಣಾದಿ ಜನರ ಮೇಲೆ ಕಪ್ಪವನ್ನು ಹೇರಿಸಿದನು. ಕಾಂಚಿಯ ಪಲ್ಲವರ ಅರಸನು ಆನೇಕಾವರ್ತಿ ಇವನನ್ನು ಜಯಿಸಲು ಪ್ರಯತ್ನಿಸಿದರೂ ಪ್ರಯೋಜನವಾಗಲಿಲ್ಲ. ಕಡೆಗೆ ಪಲ್ಲವರಾಜನು ಇವನ ಧೈರ್ಯಕ್ಕೆಮೆಚ್ಚಿ ಅಮರಾರ್ಣವ ಮತ್ತು ಪ್ರೆಮಾರಾ (ತುಂಗಭದಾ?)ಗಳ ನಡುವಣಪ್ರದೇಶಕ್ಕೆಅರಸರನ್ನಾಗಿ

ವಂಶ ಮತ್ತು ಮಠದ ವಿದ್ಯಾರ್ಥಿಗಳು ಬರುತ್ತಿದ್ದರು. ಕದಂಬರು ಬ್ರಾಹ್ಮಣರಾದರೂ ಮತಭ್ರಾಂತಿಗಳಾಗದೆ ಇದ್ದುದರಿಂದ ಅವರ ರಾಜ್ಯದ ಅಗ್ರಹಾರಗಳಲ್ಲಿ ಕೆಲವು ವೇಳೆ ಬುದ್ಧ ಮತ್ತು ಜೈನ ಮಠಗಳಿದ್ದುವು. ಆ ಅಗ್ರಹಾರಗಳ ಪೈಕಿ 'ಸ್ಥಾನ ಕುಂದೂರು' (ಕಾಲಗುಂದ) ಮತ್ತು ಕುಪ್ಪೆತ್ತೂರು ಬಹುಖ್ಯಾತಿಗೊಂಡ ದೊಡ್ಡ ಅಗ್ರಹಾರಗಳಾಗಿದ್ದವು. ಕುಪ್ಪೆತ್ತೂರು ಶಿವಮೊಗ್ಗಾ ಜಿಲ್ಲೆಯ ಸೊರಬ ತಾಲೂಕಿನಲ್ಲಿದೆ. ಅದರ ಸುತ್ತುಮುತ್ತಲೂ 77ದೇವಸ್ಥಾನಗಳಿದ್ದುವೆಂದು ತಿಳಿಯಲಾಗುವುದು. ಅಷ್ಟುದೇಗುಲಗಳಿದ್ದುದರಿಂದ ಆ ಅಗ್ರಹಾರದಲ್ಲಿ ಸಾವಿರಗಟ್ಟಲೆಯಲ್ಲಿ ಬ್ರಾಹ್ಮಣರಿದ್ದಿರಬೇಕು. ಅಂತೆಯೇ ಕಾಲಗುಂದ ಅಗ್ರಹಾರ. ಈ ಕೇಂದ್ರಗಳಲ್ಲಿ ಕಾಲಮುಖಿಗಳು ಎಂದರೆ ಗುಜರಾಥ ದೇಶದಿಂದಬಂದ ಶೈವಭಕ್ತಾದಿಗಳು ಪ್ರಾಮುಖ್ಯ ಸ್ಥಾನವನ್ನು ಹೊಂದಿದ್ದರು ಅಂತೂ ಈ ಎರಡು ಅಗ್ರಹಾರಗಳಲ್ಲಿ ಶೈವರು ಪ್ರಬಲರಾಗಿದ್ದರು. ಆದರೆ ಹಂಗಳದ ಕದಂಬರು ಪ್ರಾಚೀನ ಪದ್ಧತಿಯ ವೈಷ್ಣವ ಧರ್ಮವನ್ನು ಆಚರಿಸಿದರು.

ನಮ್ಮ ನಾಡಿನಲ್ಲಿ ಅಹಿಚ್ಚತ್ರದಿಂದ ಆಗಮಿಸಿದುದೆಂದು ಕೇಳುತ್ತಿರುವ ಬ್ರಾಹ್ಮಣವರ್ಗವು (ಮೂರನೆಯವಲಸೆ) ಚೋಳರಧಾಳಿಯ ಪರಿಣಾಮದಿಂದಲೂ, ನಂತರ ಕ್ರಿ. ಶ. 1075ರಲ್ಲಿ ಕದಂಬ ವಂಶದವರೊಳಗೆ ಹಕ್ಕು ಸಂಬಂಧವಾದ ಕಲಹವು ಉಂಟಾಗಿ ಒಂದು ಪಕ್ಷದ ಸೈನ್ಯವು ಕುಪ್ಪೆತ್ತೂರು ಅಗ್ರಹಾರವನ್ನು ಧಾಳಿಮಾಡಿದುದರ ಪರಿಣಾಮವಾಗಿಯೂ ಕದಂಬ ರಾಜ್ಯದಿಂದ ತುಳುವ ರಾಜ್ಯಕ್ಕೆ ಬಂದು ಸ್ಥಿರವಾಗಿ ನೆಲೆಸಿದರೆಂದು ಸಾಮಾನ್ಯವಾಗಿ ಹೇಳಬಹುದು. ನೆರೆಕರೆಯ ರಾಜ್ಯದಿಂದ ಬಹು ಸಂಖ್ಯೆಯಲ್ಲಿ ಬ್ರಾಹ್ಮಣರು ಏಕಕಾಲದಲ್ಲಿ ಬರುವಾಗ ಇಲ್ಲಿಯ ಅರಸರಿಗೆ ಆ ಸಮಾಚಾರವು ಚೆನ್ನಾಗಿ ತಿಳಿದಿದ್ದಿರಬೇಕು. ಈ ಪುನರ್ವ್ಯವ ಸ್ಥಾಪನಾ ಕಾರ್ಯದಲ್ಲಿ ಕದಂಬರು ತಮ್ಮ ಮಿತ್ರರಾದ ಆಲೂಪರನ್ನು ಕೇಳಿಕೊಂಡಿದ್ದಿರಬೇಕು. ಆ ಕಾರಣದಿಂದ ಈ ಬ್ರಾಹ್ಮಣರು ತಮ್ಮನ್ನು ಅಹಿಚ್ಛತ್ರದಿಂದ ತಂದಿರಿಸಿದ್ದೆಂದು ಹೇಳಲು ಕಾರಣವಾಯಿತೆನ್ನ ವಹುದು. ವಲಸೆ ಬಂದ ಈ ಬ್ರಾಹ್ಮಣರಲ್ಲಿ ಹೆಚ್ಚಿನವರು ಶೈವಾಗಮಕ್ಕೆ ಪಾಶಸ್ತ್ಯವನ್ನೀಯುವವರಾಗಿದ್ದಿರಬೇಕು. ಹಲ ಕೆಲವರು ವೈಷ್ಣವ ಧರ್ಮವನ್ನಾಚರಿಸುವವರೂ ಇದ್ದರು. ತುಳುವಕ್ಕೆ ಬಂದ ಬ್ರಾಹ್ಮಣರ ಮೂರನೆಯ ವಲಸೆಯು ಹನ್ನೊಂದನೆಯ ಶತಮಾನದ ಮಧ್ಯ ಕಾಲದಿಂದಾರಂಭವಾಗಿ ಅಂತ್ಯದವರೆಗೆ ಮುಂದುವರೆದಿರಬೇಕು. ಈಗ ಅವರ ಚರಿತ್ರೆಯನ್ನೊಳಗೊಂಡುದೆಂಬ ಗ್ರಾಮಪದ್ಧತಿಯನ್ನು ರಚಿಸಿದ್ದು ಸಾಮಾನ್ಯ ಕ್ರಿ. ಶ. 14ನೇ ಶತಮಾನವಂತ್ಯದಲ್ಲಿ ಎಂದು ಹೇಳಬಹುದು. ಅವರು ಇಲ್ಲಿಗೆ ಆಗಮಿಸಿ ಸುಮಾರು ಮುನ್ನೂರು ವರ್ಷಗಳು ಸಂದ

ಮುಂಬರುವ ಲೇಖನದಲ್ಲಿ ಚಾರಿತ್ರಿಕ ಹಿನ್ನೆಲೆಯಲ್ಲಿ ಈ ಕೆಳಗಿನ ವಿಷಯಗಳನ್ನು ವಿಮರ್ಶಿಸಲಿರುವೆನು.

1) ಸ್ಕಾಂದ ಪುರಾಣಾಂತರ್ಗತ ಸಹ್ಯಾದ್ರಿ ಖಂಡ

2) ಉತ್ತರ ಸಹ್ಯಾದ್ರಿ ಖಂಡ

3) ಗ್ರಾಮ ಪದ್ಧತಿ

4) ಗ್ರಾಮಪದ್ಧತಿಯಲ್ಲಿ ಉಲ್ಲೇಖಿತವಾದ ಅರಸರು ಮತ್ತು ಅವರ ಕಾಲ ನಿರ್ಣಯ.

5) ಗ್ರಾಮ ಪದ್ಧತಿಯ ಕಾಲ ನಿರ್ಣಯ.

6) ಸ್ಥಾನಿಕ ಬ್ರಾಹ್ಮಣರೂ, ಅವರ ಸ್ಥಾನಮಾನಗಳೂ

7) ಬಿಲ್ಲವ........ತುರುಕಾರ... ....ಕುಡುವ........ನಾಡವ.... ....ಸ್ಥಾನಿಕ...... ಈ ಅಧಿಕಾರ ಸೂಚಕ ಶಬ್ದಗಳೂ, ಅವುಗಳಿಗೆ ಸಮಾಜ ಬೆಳವಣಿಗೆಯ ಹಂತದಲ್ಲಿ ಇರುವ ಔಚಿತ್ಯವೂ.

# ತುಳುನಾಡಿನಲ್ಲಿ ಬ್ರಾಹ್ಮಣ್ಯ

## ಸ್ಕಂದ ಪುರಾಣದ ವಿಹಂಗಮ ನೋಟ:-

ಸ್ಕಂದ ಪುರಾಣವು ಅಷ್ಟಾದಶ ಪುರಾಣಗಳಲ್ಲಿ ಸೇರಿದ ಗ್ರಂಥವಾಗಿದೆ. ಆದರೆ ಸ್ಕಂದ ಪುರಾಣವೆಂಬ ಸ್ವತಂತ್ರ ಗ್ರಂಥವು ಈಗ ದೊರೆಯುವುದಿಲ್ಲ. ಈ ಗ್ರಂಥದಲ್ಲಿ ಅನೇಕ ಸಂಹಿತೆಗಳು, ಅನೇಕ ಖಂಡಗಳು ಮತ್ತು ಅನೇಕ ಮಹಿಮೆಗಳು ಪ್ರಸಿದ್ಧ ವಾಗಿವೆ. ಈ ಎಲ್ಲ ಸಂಹಿತೆಗಳು, ಖಂಡಗಳು ಮತ್ತು ಮಹಿಮೆಗಳೇ ಈಗಿರುವ ಸ್ಕಂದ ಪುರಾಣವೆಂದು ಪ್ರಚಲಿತವಾಗಿದೆ. ಆದರೆ ಈ ಖಂಡಗಳಲ್ಲಿ ಯಾವುದು ಮುಂದೆ, ಯಾವುದು ಹಿಂದೆ ಮತ್ತು ಯಾವ ಮಹಿಮೆಯು ಯಾವ ಸಂಹಿತೆಯಲ್ಲಿದೆ ಎಂದು ನಿಶ್ಚಯಿಸುವುದು ಸುಲಭವಲ್ಲ.

ಸ್ಕಂದ ಪುರಾಣದ ಶಂಕರ ಸಂಹಿತೆಯ ಪ್ರಕಾರ:-ವೇದದ ಸಾರದಿಂದ ಸಂಗ್ರಹವಾದ ಸ್ಕಂದ ಪುರಾಣವು ಆರು ಸಂಹಿತೆಗಳು ಮತ್ತು ಐವತ್ತು ಖಂಡಗಳಲ್ಲಿ ಅಡಗಿದೆ. ಈ ಆರು ಸಂಹಿತೆಗಳಾವುವೆಂದರೆ:-1) ಸನತ್ಕುಮಾರ ಸಂಹಿತೆ. 2) ಸೂತ ಸಂಹಿತೆ. 3) ಶಂಕರ ಸಂಹಿತೆ. 4) ವೈಷ್ಣವ ಸಂಹಿತೆ. 5) ಬ್ರಹ್ಮ ಸಂಹಿತೆ ಮತ್ತು 6) ಸೌರ ಸಂಹಿತೆ.

ಸೂತ ಸಂಹಿತೆಯಲ್ಲಿ ಈ ಕೆಳಗಿನ ಆರು ಸಂಹಿತೆಗಳು ಹೇಳಲ್ಪಟಿವೆ.

| | |
|---|---|
| 1) ಸನತ್ಕುಮಾರ ಸಂಹಿತಾ ಗ್ರಂಥ ಸಂಖ್ಯೆ | 36,000 |
| 2) ಸೂತ ಸಂಹಿತಾ ಗ್ರಂಥ ಸಂಖ್ಯೆ | 6,000 |
| 3) ಶಂಕರ ಸಂಹಿತಾ ಗ್ರಂಥ ಸಂಖ್ಯೆ | 30,000 |
| 4) ವೈಷ್ಣವ ಸಂಹಿತಾ ಗ್ರಂಥ ಸಂಖ್ಯೆ | 5,000 |
| 5) ಬ್ರಹ್ಮ ಸಂಹಿತಾ ಗ್ರಂಥ ಸಂಖ್ಯೆ | 3,000 |
| 6) ಸೌರ ಸಂಹಿತಾ ಗ್ರಂಥ ಸಂಖ್ಯೆ | 1,000 |

ಸ್ಕಂದ ಪುರಾಣದ ಪ್ರಭಾಸ ಖಂಡದಂತೆ:- ಪೂರ್ವ ಕಾಲದಲ್ಲಿ ಕೈಲಾಸ ಶಿಖರದಲ್ಲಿ ಬ್ರಹ್ಮ ಮೊದಲಾದವರ ಮುಂದೆ ಪಿನಾಕಿಯು ಪಾರ್ವತೀ ದೇವಿಗೆ ಸ್ಕಂದ ಪುರಾಣವನ್ನು ಹೇಳಿದನು. ಪಾರ್ವತಿಯು ಷಣ್ಮುಖನಿಗೆ, ಷಣ್ಮುಖನು ನಂದಿಗೆ, ನಂದಿಯು ಅತ್ರಿ ಕುಮಾರನಿಗೆ, ಅತ್ರಿ ಕುಮಾರನು ವ್ಯಾಸನಿಗೆ ಮತ್ತು ವ್ಯಾಸನು ಸೂತನಿಗೆ ಹೇಳಿದನು.

ವೇದವ್ಯಾಸ ಕೃತ ಸ್ಕಂದ ಪುರಾಣವು 7 ಭಾಗಗಳಲ್ಲಿದೆ. ಅದರಲ್ಲಿ ಅಡಕವಾಗಿರುವ ಶ್ಲೋಕಗಳು 81,000. ಇದರ ಮೊದಲನೆಯ ಭಾಗವು ಸ್ಕಂದನ ಮಹಿಮೆಗಳಿಂದ ಕೂಡಿಕೊಂಡು ಮಾಹೇಶ್ವರ ಖಂಡವೆಂದಾಗಿದೆ. ಎರಡನೆಯದು ವೈಷ್ಣವ ಖಂಡ. ಮೂರನೆಯದು ಚಿಕ್ಕದಾದ ಸೃಷ್ಟಿ ವರ್ಣನೆಯಿಂದ ಕೂಡಿದ ಬ್ರಹ್ಮ ಖಂಡ. ಕಾಶೀ ಮಾಹಾತ್ಮ್ಯವಿರುವ ಕಾಶೀ ಖಂಡವು ನಾಲ್ಕನೇಯದು. ಉಜ್ಜಯಿನಿಯ ಕಥೆಯಿರುವುದು ಐದನೆಯ ಖಂಡವಾದ ರೇವಾ ಖಂಡದಲ್ಲಿ. ಆರನೇಯದು ಕಲ್ಪ ಪೂಜೆ, ವಿಶ್ವಕಥೆ ಮತ್ತು ತಾಪೀ ಮಹಾತ್ಮೆಯಿರುವ ತಾಪೀ ಖಂಡ ಮತ್ತು ಏಳನೇ ಪ್ರಭಾಸ ಕಥೆಯಿರುವ ಖಂಡ.

ನಾರದ ಪುರಾಣದ ಸ್ಕಂದೋಪಕ್ರಮಣಿಕೆಯಲ್ಲಿ ಸ್ಕಂದ ಪುರಾಣವು 7 ಖಂಡಗಳಲ್ಲಿದೆ. ಅದರಲ್ಲಿ 81,000 ಶ್ಲೋಕಗಳು. ಮಾಹೇಶ್ವರ,ವೈಷ್ಣವ, ಬ್ರಹ್ಮ, ಕಾಶೀ. ಅವಂತೀ, ನಾಗರ ಮತ್ತು ಪ್ರಭಾಸ ಖಂಡಗಳು.

ಮೇಲೆ ಹೇಳಿದ ಸಂಹಿತೆಗಳು ಮತ್ತು ಖಂಡಗಳಲ್ಲದೆ ಇತರ ಅನೇಕ ಮಾಹಾತ್ಮ್ಯ ಮತ್ತು ಖಂಡಗಳು ಸ್ಕಂದ ಪುರಾಣದಲ್ಲಿ ಅಡಗಿದೆ ಎಂದು ಪ್ರಚಲಿತವಿದೆ.

1. ಸಹ್ಯಾದ್ರಿ ಖಂಡ, 2. ಅರ್ಬುದಾಚಲ ಖಂಡ, 3. ಕನಕಾದ್ರಿ ಖಂಡ, 4. ಕಾಶ್ಮೀರ ಖಂಡ, 5. ಕೌಶಲ ಖಂಡ, 6. ಗಣೇಶ ಖಂಡ, 7. ಉತ್ತರ ಖಂಡ, 8. ಪುಷ್ಕರ ಖಂಡ, 9. ಬದರಿಕಾ ಖಂಡ, 10. ಭೀಮ ಖಂಡ, 11. ಭೂಖಂಡ, 12. ಭೈರವ ಖಂಡ, 13. ಮಲಯಾಚಲ ಖಂಡ, 14. ಮಾನಸ ಖಂಡ, 15. ಕಾಲಿಕಾ ಖಂಡ, 16. ಶ್ರೀಮೂಲ ಖಂಡ, 17. ಪರ್ವತಖಂಡ, 18. ಸೇತು ಖಂಡ, 19. ಹಾಲ್ಯಾಸ ಖಂಡ, 20, ಹಿಮವತ್ಖಂಡ, 21. ಮಹಾಕಾಲಿ ಖಂಡ, ಅಗಸ್ತ್ಯಸಂಹಿತೆ, ಈಶಾನಸಂಹಿತೆ, ಉಮಾ ಸಂಹಿತೆ, ಸದಾಶಿವ ಸಂಹಿತೆ, ಪ್ರಲ್ಹಾದ ಸಂಹಿತೆ, ಇತ್ಯಾದಿ.

**ಟಿಪ್ಪಣಿ:**— ವೇದವ್ಯಾಸ ಕೃತ ಸ್ಕಂದ ಪುರಾಣದಲ್ಲಿ ಸಹ್ಯಾದ್ರಿ ಖಂಡವೆಂಬುದಿಲ್ಲ ಎಂದು ಮೇಲಿನ ವಿವರದಿಂದ ತಿಳಿಯಬಹುದು. ವಿದ್ವಾಂಸರ ಅಭಿಪ್ರಾಯವೂ ಅದೇ. ಈ ಸಹ್ಯಾದ್ರಿ ಖಂಡವು ಈ ಮಹಾಪುರಾಣಕ್ಕೆ ಕಾಲಾನುಕ್ರಮದಲ್ಲಿ ಸೇರಿಸಲ್ಪಟ್ಟಿರಬೇಕೆಂದೂ ತಿಳಿಯಬಹುದಾಗಿದೆ. ಸ್ಕಂದ ಪುರಾಣವು ಸುದೀರ್ಘವಾದ ಮತ್ತು ಮಹಾತ್ಮೆಗಳನ್ನೊಳಗೊಂಡ ಹಾಗೂ ಸೀಮೆಯಲ್ಲಿ ಸ್ವಲ್ಪ ಅನಿಶ್ಚಿತವಾದ ಪುರಾಣವಾದುದರಿಂದ ಅದಕ್ಕೆ ಬೇಕು ಬೇಕಾದಂತೆ ಅಂಶಾಂಗಗಳನ್ನು ಅವರವರ ಅನುಕೂಲಕ್ಕೆ ಸರಿಯೊಪ್ಪುವಂತೆ ಸೇರಿಸಲು ಕಾರಣವಾಯಿತೆನ್ನಲೂ ಅಸ್ಪದವಿದೆ. ಪುರಾಣ

ಕರ್ತರಾದ ಶ್ರೀ ವೇದವ್ಯಾಸರು ಉತ್ತರದೇಶದವರಾಗಿ ತುಳುಭಾಷೆಯ ಅರಿವು ಅವರಿಗಿರಲಾರದು. ಅವರು ರಚಿಸಿದ್ದೆಂದು ನಮ್ಮ ನಾಡಿನವರು ಹೇಳುವ ಸಹ್ಯಾದ್ರಿಯಲ್ಲಿ ಇಲ್ಲಿಯ ಹೊಸ ಬ್ರಾಹ್ಮಣರ ಕುಲಗಳನ್ನು (Totemistic Origin) ಹೇಳುವಾಗ ತುಳು ಶಬ್ದಗಳನ್ನೆ ಉಪಯೋಗಿಸುತ್ತಿದ್ದಿಲ್ಲ. ಇವನ್ನು ಕೂಡ ಸಂಸ್ಕೃತದಲ್ಲಿ ಬರೆಯುತ್ತಿದ್ದರು. ಶ್ರೀ ವ್ಯಾಸರು 18 ಪುರಾಣಗಳಿಗೆ 4 ಲಕ್ಷ ಗ್ರಂಥವೆಂದು ಗೊತ್ತು ಮಾಡಿ ರಚಿಸಿದ ಪ್ರಕಾರ, ಸ್ಕಂದ ಪುರಾಣವನ್ನು ಮಾತ್ರ ಬಿಟ್ಟು, ಬಾಕಿ ಉಳಿದ 17 ಪುರಾಣಗಳ ಗ್ರಂಥ ಸಂಖ್ಯೆಯನ್ನು ಈ ನಮ್ಮ ಸಹ್ಯಾದ್ರಿಯು ಹೇಳುವ ಸ್ಕಂದ ಪುರಾಣದ ಸಂಖ್ಯೆಯನ್ನು ಕೂಡಿಸಿದರೆ ಒಟ್ಟು ಗ್ರಂಥ ಸಂಖ್ಯೆಯು ಜಾಸ್ತಿಯಾಗುವುದು ಕಂಡು ಬಂದಿದೆ. ಆದುದರಿಂದ ವೇದ ವ್ಯಾಸಕೃತ ಸ್ಕಂದ ಪುರಾಣದಲ್ಲಿ ಈ ಸಹ್ಯಾದ್ರಿ ಖಂಡವಿರುವುದಿಲ್ಲ. ಸಹ್ಯಾದ್ರಿ ಖಂಡ ಅಡಗಿರುವ ಸ್ಕಂದ ಪುರಾಣವು 'ಪರಿಶುದ್ಧ'ವಾದುದಲ್ಲ ಎಂದು 1855ನೇ ಇಸವಿಯಲ್ಲಿ 18 ಪುರಾಣಗಳನ್ನು ಛಾಪೆಗೆ ಕೊಡುವ ಮೊದಲು ಅವುಗಳನ್ನು ಶೋಧಿಸುವ ಬಗ್ಗೆ ಕಾಶಿಯಲ್ಲಿ ನೆರೆದ ಘನವಿದ್ವಾಂಸರ ಸಭೆಯಲ್ಲಿ ನಿರ್ಧರಿಸಲ್ಪಟ್ಟಿದೆ. ಸಹ್ಯಾದ್ರಿ ಎಂಬುದು ನವೀನ ಕಲ್ಪನಾ ಗ್ರಂಥವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.

## ಭಟ್ಟಾಚಾರ್ಯರು ಮಾಡಿದ ದ್ವಾತ್ರಿಂಶ ಗ್ರಾಮ ಪದ್ಧತಿ

"ಆದಿಯಲ್ಲಿ ಪರಶುರಾಮ ದೇವರು ಪಶ್ಚಿಮಾಂಬುಧಿಯಿಂದ ಭೂಪ್ರದೇಶವನ್ನು ಪಡಕೊಂಡರು. ಅಬ್ರಾಹ್ಮಣ್ಯ ದೇಶವೆಂದು ಮಯೂರವರ್ಮನು ಗೋದಾವರಿ ನದಿ ತೀರದಿಂದ ಎಂದರೆ ಅಹಿಚ್ಛತ್ರದಿಂದ ಉತ್ತಮರಾದ ಬ್ರಾಹ್ಮಣರನ್ನು ಕರೆತಂದು, ಪರಶುರಾಮದೇವರು ಪಡಕೊಂಡ ದೇಶದಲ್ಲಿ ತೌಳವ, ಕೇರಳವೆಂಬ ವಿಭಾಗವನ್ನು ಮಾಡಿ, ಆವಾವ ದೇಶಗಳಲ್ಲಿಟ್ಟು ಜನರಿಗೆ ಗ್ರಾಮಭೇದ ನಾಮಭೇದಗಳನ್ನು ವಿಧಿಸಿ ಆ ಬ್ರಾಹ್ಮಣರಿಗೆ ಸರ್ವ ಮಾನ್ಯವಾಗಿ 'ಭೂಮಿಯನ್ನು ಧಾರೆ ಎರೆದು ಕೊಟ್ಟನು. ಷಟ್ಕರ್ಮಿಗಳಾದ ಬ್ರಾಹ್ಮಣರು ಅಗ್ನಿಹೋತ್ರ ಮುಂತಾದ ಪಂಚಮಹಾಯಜ್ಞಗಳನ್ನು ನಡೆಸಿಕೊಂಡು ಬರಬೇಕೆಂಬುದಾಗಿಯೂ ತ್ರಿಕರ್ಮಿಗಳಾದ ಬ್ರಾಹ್ಮಣರು ತಮಗೆ ಕೊಟ್ಟ ಭೂಮಿ ಮುಂತಾದುವುಗಳನ್ನು ಅನುಭವಿಸಿಕೊಂಡು ರಾಜ್ಯಾರ್ಥವನ್ನು ಅರಸುಗಳಿಗೆ ಕೊಡಬೇಕೆಂಬುದಾಗಿಯೂ, ಇಂತಿಂಥ ಬ್ರಾಹ್ಮಣರುಗಳಿಗೆ ಇಷ್ಟಿಷ್ಟು ಯೋಗ್ಯತೆ ಎಂಬುದಾಗಿ ವಿಧಿಸಿದ ಪ್ರಬಂಧ ರೂಪದಿಂದ ಹೇಳಿದ ಗ್ರಂಥಕ್ಕೆ ಗ್ರಾಮ ಪದ್ಧತಿಯೆಂದು ಹೆಸರು. ಈ ತುಳುವದಲ್ಲಿ ಖ್ಯಾತಿವೆತ್ತ ಗ್ರಾಮ ಪದ್ಧತಿಯು ಸಹ್ಯಾದ್ರಿ ಖಂಡದ ಭಾಗವೆಂದು ಪರಿಗಣಿಸಲ್ಪಟ್ಟಿದೆ. ಅಥವಾ ಸಹ್ಯಾದ್ರಿ ಖಂಡದಿಂದ ಆಯ್ದುದೆಂದು ತಿಳಿಯಲ್ಪಟ್ಟಿದೆ,

## ಉತ್ತರ ಸಹ್ಯಾದ್ರಿ ಖಂಡ

ಉತ್ತರ ಸಹ್ಯಾದ್ರಿ ಖಂಡವು ಪರಶುರಾಮಕ್ಷೇತ್ರದ ನಿರ್ಮಾಣದಿಂದ ಆರಂಭವಾಗಿ ಮಯೂರವರ್ಮನ ಕಥೆಯನ್ನೊಳಗೊಂಡು ಅಹಿಚ್ಛತ್ರದಿಂದ ಬ್ರಾಹ್ಮಣರನ್ನು ಕರೆತಂದು ವಸತಿಮಾಡಿಸಿದ ಕೂಲಂಕುಶವಿವರವನ್ನು ಸೇರಿಕೊಂಡಿದೆ. ಅಂತೂ ಪರಶುಕ್ಷೇತ್ರದ ಬ್ರಾಹ್ಮಣರ ಚರಿತ್ರೆಯನ್ನೊಳಗೊಂಡಿದೆ ಎಂದು ಹೇಳಬಹುದು. ಇದರಲ್ಲಿ 34 ಅಧ್ಯಾಯಗಳಿವೆ. ಈ ಗ್ರಂಥವನ್ನು ಗ್ರಾಮ ನಿರ್ಣಯವೆಂದೂ ಕರೆಯುತ್ತಾರೆ. ವಿಷಯ ನಿರೂಪಣೆಯಲ್ಲಿ ವಸ್ತುಪ್ರತಿಪಾದನೆಯಲ್ಲಿ ಇವೆರಡು ಗ್ರಂಥಗಳೂ ಒಂದೇ ಆಗಿವೆ. ಆದರೆ ಜಿಲ್ಲೆಯ ಬೇರೆ ಬೇರೆ ಪ್ರದೇಶಗಳಲ್ಲಿ ಸಿಕ್ಕಿದ ಗ್ರಾಮಪದ್ಧತಿ ಪ್ರತಿಗಳಲ್ಲಿ ಶೈಲಿ ಮತ್ತು ವಿಷಯ ಸಾಮಗ್ರಿಗಳ ಕುರಿತಾಗಿ ಸ್ವಲ್ಪ ವ್ಯತ್ಯಾಸ ತೋರಿಬರುತ್ತದೆ. ಈ ಗ್ರಂಥಗಳನ್ನು ವಿಮರ್ಶೆಗೆ ಗುರಿಪಡಿಸುವಾಗ ನಮಗೆ ಈ ಕೆಳಗಿನ ಸತ್ಯ ಸಂಗತಿಗಳ ಕಡೆಗೆ ಗಮನ ಹರಿಯಿಸಬೇಕಾಗುತ್ತದೆ.

1. ಕದಂಬಕುಲವು ಸೂರ್ಯವಂಶದ ಕ್ಷತ್ರಿಯ ಕುಲಕ್ಕೆ ಸೇರಿದ್ದೆಂಬುದಾಗಿ ಈ ಗ್ರಂಥಗಳು ತಿಳಿಸುತ್ತವೆ. ಆದರೆ ಈ ಕದಂಬ ವಂಶೀಯರು ಕ್ಷತ್ರಿಯರಲ್ಲವೆಂದೂ ಈ ರಾಜಕುಟುಂಬದ ರಾಜ್ಯಸ್ಥಾಪಕನಾದ ಮಯೂರವರ್ಮನು ಮಾನವ್ಯಗೋತ್ರದ ಬ್ರಾಹ್ಮಣನೆಂದೂ ಶಾಸನದಿಂದಲೂ, ಚರಿತ್ರೆಯ ವಿಮರ್ಶೆಯಿಂದಲೂ ತಿಳಿದುಬರುತ್ತದೆ. ಶಾಸನಗಳನ್ನು ಪರಿಶೀಲಿಸಿದರೆ ಇನ್ನೂ ಒಂದು ಸಂಗತಿಯು ಬಯಲಿಗೆ ಬರದಿರಲಾರದು. ಕದಂಬ ಕುಲಕ್ಕೆ ಸೇರಿದ ಅರಸರು ಔತ್ತರೇಯರೆಂಬುದು. ಆದರೆ ಈ ವಾದವು ಪ್ರಥಮವಾಗಿ ಸ್ಥಾಪಿಸಲ್ಪಟ್ಟದ್ದು ಕ್ರಿ. ಶ. 11ನೇ ಶತಮಾನದಲ್ಲಿ. ಈ ಶತಮಾನದ ನಂತರದ ಶಾಸನಗಳಲ್ಲಿ ಇದರ ಪ್ರತಿಯನ್ನೆ ಕಾಣುವುದರಲ್ಲಿ ಆಶ್ಚರ್ಯವಿಲ್ಲ. ದಕ್ಷಿಣ ಹಿಂದೂಸ್ಥಾನದ ಅರಸರಲ್ಲಿ ತಾವು ಉತ್ತರದ ರಾಜಕುಟುಂಬಗಳಿಗೆ ಸಂಬಂಧಿಸಿದವರೆಂಬ ಒಂದು ತರದ ಭಾವನೆಯನ್ನು ವ್ಯಕ್ತಪಡಿಸುವ ಹವ್ಯಾಸ ಬೆಳೆದಿತ್ತೆಂದು ತಿಳಿಯಬಹುದು. ಹೇಗೂ ಇರಲಿ. ಬನವಾಸಿಯ ಕದಂಬರು ಆದಿಯಲ್ಲಿ ಬ್ರಾಹ್ಮಣ ಕುಲಕ್ಕೆ ಸೇರಿದವರೆಂಬುದರಲ್ಲಿಯೂ ಈ ಕುಟುಂಬವು ಕ್ರಿ. ಶ. ಮೂರನೆಯ ಶತಮಾನದಿಂದ ಬನವಾಸಿಯಲ್ಲಿ ಇದ್ದಿರಬೇಕೆಂಬುದರಲ್ಲಿಯೂ ಹೆಚ್ಚಿನ ಸಂದೇಹವಿರಲಾರದು. ಕದಂಬ ಕುಲದ ಮೂಲವು ನಂಬಲಸಾಧ್ಯವಾದ ಕಟ್ಟುಕಥೆಗಳ ಮಂಜಿನಿಂದ ಆವರಿಸಲ್ಪಡಲು ಒಂದು ಕಾರಣವನ್ನು ಇಲ್ಲಿ ನೆನಪರಿಸಿಕೊಳ್ಳಬಹುದು. ಬನವಾಸಿಯ ಕದಂಬರ ಆಳ್ವಿಕೆಯು ಕ್ರಿ. ಶ. 7ನೆಯ ಶತಮಾನಕ್ಕಂತೂ ಅಂತ್ಯವಾಯಿತು. ರಾಜಕೀಯವಾಗಿ ಪುನಃ ಚೇತರಿಸಿಕೊಂಡುದು ಕ್ರಿ. ಶ. 10ನೇ ಶತಮಾನದಲ್ಲಿ. ಈ ಮೂರು ಶತಮಾನದ ಅವಧಿಯಲ್ಲಿ ಅವರು ಸಂಪೂರ್ಣವಾಗಿ ತಮ್ಮ

ಚಾರಿತ್ರಿಕ ಮೂಲದ ಅರಿವನ್ನು ಮರೆತುದರಿಂದ ಅನಂತರ ಪ್ರಾಮುಖ್ಯತೆಗೆ ಬಂದಾಗ ತಮ್ಮ ಮೂಲ ಪುರುಷನು ಈಶ್ವರಪಾರ್ವತಿಯಿಂದ ಉದ್ಭವಿಸಿದವನೆಂದು ಹೇಳಿಕೊಂಡು ಘನತೆಯನ್ನು ಹೆಚ್ಚಿಸಿಕೊಳ್ಳುವಂತಾಯಿತೆಂದು ಹೇಳಬಹುದು. ಅಂತೂ ಉತ್ತರಕನ್ನಡ ಜಿಲ್ಲೆ ಹಾಗೂ ಹೈಗಕ್ಷೇತ್ರದಲ್ಲಿ ಬ್ರಾಹ್ಮಣ್ಯವು ಕ್ರಿ. ಶ. ಮೂರನೆಯ ಶತಮಾನದಲ್ಲಿ ಖಂಡಿತವಾಗಿಯೂ ಇತ್ತೆಂದು ತಿಳಿಯಬಹುದಾಗಿದೆ.

2. ಮಯೂರವರ್ಮನು ಹೈಗ, ತೌಳವ, ಕೇರಳಗಳಲ್ಲಿ ಅಹಿಚ್ಛತ್ರದಿಂದ ಬ್ರಾಹ್ಮಣರನ್ನು ತರಿಸಿ ಭೂಮಿಯನ್ನು ಅವರಿಗೆ ದಾನಮಾಡಿ ಅವರನ್ನು ನೆಲೆಸಿದುದೆಂಬುದೂ ಚರಿತ್ರೆಗೆ ಅರ್ಹವಾಗಿಲ್ಲ. ಕಾರಣ ವೈಜಯಂತಿ (ಬನವಾಸಿ)ಯ ಕದಂಬರು ಕೇರಳದ ಅಧಿಪತಿಗಳಾಗಿದ್ದ ದಾಖಲೆ ಎಲ್ಲಿಯೂ ಕಂಡುಬರುದಿಲ್ಲ.

3. ತುಳುಗ್ರಾಮ ಪದ್ಧತಿಯಲ್ಲಿ ಮಯೂರವರ್ಮನು ಒಂದುಕಡೆ ಹೇಮಾಂಗದ ಸುಶೀಲೆಯರ ಮಗನೆಂದೂ,ಇನ್ನೊಂದು ಕಡೆಬನವಾಸಿಯ ಅರಸನಾದ ಮಣಿವರ್ಮನ ಮಗನೆಂದೂಹೇಳಲ್ಪಟ್ಟಿದೆ.ಈಮಣಿವರ್ಮನುಯಾರೆಂದು ಚರಿತ್ರೆಯ ನಿರ್ಧಾರಕ್ಕೆಸಿಲುಕದಾಗಿದೆ.ಮಯೂರವರ್ಮನ ಪೂರ್ವಿಕರ ಕುರಿತಾಗಿ ರೈಸ್‌ದೊರೆಗಳು 5 ಹೆಸರನ್ನು ಕೊಡುತ್ತಾರೆ. ಮುಕ್ಕಣ್ಣ (ತ್ರಿನೇತ್ರ, ಯಾ ತ್ರಿಲೋಚನ) ಮಧುಕೇಶ್ವರ, ಮಲ್ಲಿನಾಥ, ಮೊದಲನೆಯ ಚಂದ್ರವರ್ಮ ಮತ್ತು ಎರಡನೆಯ ಚಂದ್ರವರ್ಮ. ಹೇಮಾಂಗದ, ಸುಶೀಲೆಯರ ಉಲ್ಲೇಖವು ಎಲ್ಲಿಯೂ ಕಂಡು ಬರುವುದಿಲ್ಲ. ಉತ್ತರ ಸಹ್ಯಾದ್ರಿಯಲ್ಲಿ ತಿಳಿಸುವಂತೆ ಮಯೂರವರ್ಮನ ಮಗನ ತ್ರಿನೇತ್ರ ಕದಂಬನಲ್ಲವೆಂದೂ ಅವನ ಮಗನೂ ಹಾಗೂ ಉತ್ತರಾಧಿಕಾರಿಯೂ ಕಂಗವರ್ಮನೆಂದೂ ಚರಿತ್ರೆ ಹೇಳುತ್ತದೆ.

4. ಲೋಕಾದಿತ್ಯನ ವಿಚಾರ ಸಹ್ಯಾದ್ರಿಯಲ್ಲಿ ಕಂಡು ಬರುತ್ತದೆ. ಅದರಲ್ಲಿ ಲೋಕಾದಿತ್ಯನುಚಂದ್ರಸೇನನ ಪುತ್ರನೆಂದೂ ತ್ರಿನೇತ್ರ ಕದಂಬನ ತಂಗಿಯಾದ ಕನಕಾವತಿಯ ಪತಿಯೆಂದೂ ಹೇಳಿದೆ.ಗ್ರಾಮ ಪದ್ಧತಿಯ ಕೆಲವು ಗ್ರಂಥಗಳಲ್ಲಿ 'ಲೋಕಾದಿತ್ಯ ಮಯೂರವರ್ಮ' ನೆಂದು ಹೇಳಿವೆ. ಈತನು ಪರಾಶರ ಋಷಿಯ ಅಪೇಕ್ಷೆಯಂತೆ ಅಹಿಚ್ಛತ್ರದಿಂದ ಬ್ರಾಹ್ಮಣರನ್ನು ಭಟ್ಟಾಚಾರ್ಯರನೇತೃತ್ವದಲ್ಲಿ ಕರೆಸಿಕೊಂಡು (ಗೋರಾಷ್ಟ್ರ) ದಲ್ಲ ನೆಲೆಸಿದನೆಂದಿದೆ. ಅವರಿಗೆ ಹವ್ಯಕರೆಂದು ನಾಮ ಪ್ರಾಪ್ತವಾಯಿತೆಂದೂ ಅದರಲ್ಲಿದೆ. ಆದರೆ ಚಾರಿತ್ರಿಕ ಹಿನ್ನಲೆಯನ್ನು ಆಧರಿಸಿಕೊಂಡು ಈ ಲೋಕಾದಿತ್ಯನ ಗುರುತು ಹಚ್ಚುವುದಾದರೆ ಅತನನ್ನು ಕ್ರಿ. ಶ.9ನೇ ಶತಮಾನದ ಅಂತ್ಯಕ್ಕೆ ಬನವಾಸಿಯನ್ನು ರಾಷ್ಟ್ರಕೂಟರ ಪ್ರಭುತ್ವಕ್ಕೊಳಪಟ್ಟು ಅವರ ಮಹಾ

ನಾಲ್ಕು ಕೈಗಳುಳ್ಳ ಪುತ್ರನ ಜನನವಾಯಿತು. ಇದು ಗೌರಿಯು ಹಿಮವತ್ಪರ್ವತದಲ್ಲಿ ಈಶ್ವರನು ಅವಳೊಡನೆ ಮೋಹಿತನಾಗಿ ನಡೆದ ವಿಚಾರ. ಈ ಸುಕುಮಾರನನ್ನು ಈಶ್ವರನು ಕಂಡು ಅವನು ಅರಸನಾಗುವಂತೆ ಹರಸಿದನು ಮತ್ತು ಅವನು ಸಮರ ಹರನಿಗೂ ಭೂದೇವಿಗೂ ಜನಿಸಿದವನಾದ್ದರಿಂದ "ಹರಾಧರ್ಣಿ ಪ್ರಸೂತ" ಎಂಬ ಬಿರುದನ್ನು ಪಡೆದನು. ಕದಂಬ ವೃಕ್ಷಗಳ ನಡುವೆ ಜನಿಸಿದುದರಿಂದ ಕದಂಬ ರುದ್ರನೆಂದೂ ಮಯೂರದ ಗರಿಗಳ ಪ್ರತಿಫಲನವು ಅವನ ಮೇಲೆ ಬಿದ್ದುದರಿಂದ ಮಯೂರ ವರ್ಮನೆಂದೂ ಬಿರುದಾಂಕಿತನಾದನು. ಈ ಕಾರಣಗಳಿಂದ ಸಾಧಾರಣ ಹನ್ನೆರಡನೆಯ ಅಥವಾ ಹದಿಮೂರನೇಯ ಶತಮಾನದಲ್ಲಿ ಈ ತೆರನಾದ ಮಯೂರ ವರ್ಮನ ಕತೆಯು ತುಳುವಕ್ಕೆ ಹರಡಿತೆನ್ನಬಹುದು. ಹೀಗೆ ಹರಡಿದ ನಮ್ಮ ಗ್ರಾಮ ಪದ್ಧತಿಯಲ್ಲಿ ಸ್ಥಳೀಕ ಮಿರುಗನ್ನು ಸೋಗನ್ನು ಕೊಟ್ಟಿರಬೇಕು.

7. ಅಹಿಚ್ಛತ್ರದ ಬ್ರಾಹ್ಮಣರನ್ನು ತರಿಸಿ ವಸತಿಗೊಳಿಸಿದ ವಿಚಾರ—ಹನ್ನೆರಡನೆಯ ಶತಮಾನಕ್ಕಿಂತ ಮೊದಲು ಅಹಿಚ್ಛತ್ರದ ಬ್ರಾಹ್ಮಣರ ಕುರಿತಾದ ಉಲ್ಲೇಖವಿದ್ದರೂ ಮಯೂರವರ್ಮನ ಕುರಿತಾಗಲೀ, ಆತನಿಂದ ಗ್ರಾಮಗಳು ದಾನಕೊಡಲ್ಪಟ್ಟ ವಿಚಾರವಾಗಲೀ ತಿಳಿದು ಬರುವುದಿಲ್ಲ. ಎರೆಯಪ ನೀತಿಮಾರ್ಗನ ಕಾಲದ ಕ್ರಿ. ಶ. 904ರ ಶಾಸನದಿಂದ ಈ ಕೆಳಗಿನ ಸಂಗತಿ ದೊರಕುತ್ತದೆ. "ಯತಿಗಳ ಕೇಂದ್ರವಾದ, ಬ್ರಹ್ಮನ (ಪದ್ಮೋದ್ಭವ) ಸ್ಥಾನವಾದ ಅಹಿಚ್ಛತ್ರದಿಂದ, ದಕ್ಷಿಣದ ದೇಶಕ್ಕೆ ಅದನ್ನು ಪಾಪದಿಂದ ವಿಮುಕ್ತಗೊಳಿಸಿ, ಪರಿಶುದ್ಧವಾಗಿ ಮಾಡಲು, ವಿದ್ವಾಂಸರೂ, ಶೀಲ ಸಂಪನ್ನರೂ, ಬಲ್ಲಿದರೂ ಆದ ಬ್ರಾಹ್ಮಣರ ತಂಡಗಳು ಖ್ಯಾತಿವೆತ್ತ ವನವಾಸಿ 'ವಿಷಯ' (Province)ವನ್ನು ಪ್ರಥಮವಾಗಿ ಬಂದು ಸೇರಿದುವು. ಈ ಬ್ರಾಹ್ಮಣರ ಎಲ್ಲ ಗುಂಪುಗಳನ್ನು ಶ್ರೇಷ್ಠವಾದ ತಲಗುಂದ ಗ್ರಾಮದಲ್ಲಿ ನಿಲ್ಲಿಸಲಾಯಿತು. ಈ ದಾಖಲೆಯಿಂದ ಒಂದು ಪ್ರಾಮುಖ್ಯ ಸತ್ಯ ಸಂಗತಿಯನ್ನು ತಿಳಿಯಬಹುದು. ಹತ್ತನೆಯ ಶತಮಾನದ ಆದಿಯಲ್ಲಿ ಅಹಿಚ್ಛತ್ರವೆಂಬ ಪ್ರದೇಶಕ್ಕಾಗಲೀ ಪರಶುರಾಮನ ಕುರಿತಾದ ಕತೆಗಾಗಲೀ, ಮಯೂರವರ್ಮನ ಪರವಾದ ಐತಿಹ್ಯಕ್ಕಾಗಲೀ ಯಾವ ಸಂಬಂಧವೂ ನಿರ್ಮಿಸಲ್ಪಡಲಿಲ್ಲ. ತುಳುಗ್ರಾಮ ಪದ್ಧತಿಗಳಲ್ಲಿ ಕಂಡು ಬರುವ ಬ್ರಾಹ್ಮಣರಿಗಿತ್ತ 32 ಗ್ರಾಮಗಳೆಂಬುದು, ಹನ್ನೊಂದನೆಯ ಶತಮಾನದಲ್ಲಿ ಸ್ಥಾನಗುಂದ ಅಗ್ರಹಾರದ (ತಲಗುಂದ) ಬ್ರಾಹ್ಮಣರಲ್ಲಿ ಪ್ರಚಲಿತವಿದ್ದ (ಕ್ರಿ. ಶ. 1200ರ ಶಾಸನ ತಿಳಿಸುವಂತೆ) ಅಹಿಚ್ಛತ್ರದಿಂದ 12,000 ಅಗ್ನಿಹೋತ್ರಗಳಿಂದ ಶುದ್ಧೀಕರಣಗೊಂಡ 32 ಬ್ರಾಹ್ಮಣ ಕುಟುಂಬಗಳು ಎಂಬುದರ ಒಂದು ರೂಪಭೇದವೆಂದೇ ಹೇಳಬೇಕು.

ಸ್ಥಾನ ಗುಂದದಿಂದ ತುಳುವಕ್ಕೆ 11ನೇ ಶತಮಾನದಲ್ಲಿ ಬಂದಿರ ಬೇಕಾದ ಬ್ರಾಹ್ಮಣರಿಂದ 'ಗ್ರಾಮ ಪದ್ಧತಿ'ಯಲ್ಲಿ ಮಯೂರವರ್ಮನ ಕತೆ, ಹಾಗೂ ಬ್ರಾಹ್ಮಣರಿಗಿತ್ತ ಭೂದಾನ ಇತ್ಯಾದಿ ವಿವರಗಳು ಸೇರಿಸಲ್ಪಟ್ಟದು ಸಹಜವೇ ಆಗಿದೆ.

8. ಉತ್ತರ ಸಹ್ಯಾದ್ರಿಯಲ್ಲಿ ಉಲ್ಲೇಖಿತವಾದ ಪರಶುರಾಮನಿಂದ ನಿರ್ಮಿಸಲ್ಪಟ್ಟ ಏಳು ರಾಷ್ಟ್ರಗಳಲ್ಲಿ 'ಹವಿಗ' ಒಂದಾಗಿದೆ. ಈ ಹವಿಗ ದೇಶವನ್ನು ಹೈಗವೆಂದೂ ಬರೆದಿದೆ. ಈ ದೇಶದ ಮೂಲ ಹೆಸರು 'ಪಶುಕ' ಎಂದು ಶುದ್ಧ ಸಂಸ್ಕೃತ ಗ್ರಂಥವಾದ ಪ್ರಪಂಚ ಹೃದಯದಿಂದ ತಿಳಿಯುತ್ತದೆ. ಪಶು ಯಾ ಪಶುಕವೆಂದರೆ ಒಂದೇ ಆಗಿದೆ. ಈ 'ಪಶುಕ'ದ ರೂಪಾಂತರದಿಂದ ಆದ ಪ್ರಭೇದವೇ 'ಹೈಗ'ವಾಗಿರಬೇಕು. 'ಪ'ವು 'ಹ'ವಾಗಿ ಮಾರ್ಪಟ್ಟು ಉಪಯೋಗಿಸಲ್ಪಡುವ ಕ್ರಮ ಪ್ರಾರಂಭವಾದುದು ಕ್ರಿ.ಶ.12ನೆಯ ಶತಮಾನದ ಅನಂತರದಿಂದ ಎಂಬುದಾಗಿ ಭಾಷಾಶಾಸ್ತ್ರಜ್ಞರು ತಿಳಿಸುತ್ತಾರೆ. ಈ ಪಶುಕವೆಂದರೆ ಗೋರಾಷ್ಟ್ರವೇ. 'ಯಾವ ದೇಶದಲ್ಲಿ ದೇವತೆಗಳಿಗೋಸ್ಕರ ವಿಶೇಷವಾಗಿ ಹವಿಸ್ಸು ಕೊಡಲ್ಪಡುತ್ತದೋ ಅದರ ದೆಸೆಯಿಂದ ಹವ್ಯವೆಂತೆಂದು ಪ್ರಸಿದ್ಧವಾಗಿ' ಎಂದು ಉತ್ತರ ಸಹ್ಯಾದ್ರಿಯಲ್ಲಿ ಲಿಖಿತವಾಗಿರುವುದು ಅಷ್ಟೊಂದು ಸಮಂಜಸವಾಗಿಲ್ಲ ಹೈವ, ಹೈಗವೆಂಬುದು ಪಶು ಪಶುಕದ ಹನ್ನೆರಡನೆಯ ಶತಮಾನದ ಅನಂತರದ ರೂಪಾಂತರವೆಂಬುದರಲ್ಲಿ ಸಂದೇಹವಿಲ್ಲ.

9. ಗ್ರಾಮ ಪದ್ಧತಿಯಲ್ಲಿ ಬರುವ ಚೌಟ, ಬಂಗ, ಸಾವಂತ ಅರಸು ಮನೆತನಗಳೂ, ಚಿಟ್ಟುಪಾಡಿ ಮತ್ತು ನಿಡಂಬೂರು ಬಲ್ಲಾಳರುಗಳ ಪಕ್ಷನಾಥ ಸ್ಥಾನಗಳೂ ಹತ್ತನೆಯ ಶತಮಾನದ ಮುಂದಕ್ಕೆ ಅಸ್ತಿತ್ವಕ್ಕೆ ಬಂದುದೆಂದು ಇತಿಹಾಸವು ಹೇಳುತ್ತದೆ.

10. ಗ್ರಾಮ ಪದ್ಧತಿಯಲ್ಲಿ (ಪುತ್ತಿಗೆ ಪ್ರಭೇದ) ಶಂಕರಾಚಾರ್ಯರಿಗೂ ಮದನ ಪಂಡಿತರಿಗೂ ಆದ ಚರ್ಚೆಯು ಉಲ್ಲೇಖವಿದೆ. ಇಷ್ಟರ ವರೆಗಿನ ಚಾರಿತ್ರಿಕ ದಾಖಲೆ ಮೇಲೆ ನಿರ್ಧರಿಸಿ ಹೇಳುವುದಾದರೆ ಶಂಕರಾಚಾರ್ಯರ ಕಾಲವು ಕ್ರಿ.ಶ. 8ನೆಯ ಶತಮಾನವೆಂದು ಅಂಗೀಕರಿಸ ಬೇಕು. ಹಾಗಾದರೆ ಈ ಗ್ರಂಥದ ನಿರ್ಮಾಣ ಕಾಲದ ಕೆಳಮಿತಿಯನ್ನು ಕ್ರಿ.ಶ. 8ನೆಯ ಶತಮಾನದ ಮಧ್ಯಾವಧಿಗಿಂತ ಇಳಿಸಲು ಸಾಧ್ಯವಿಲ್ಲ. ಅಂತೆಯೇ 'ಬಾರಕನ್ಯಾಪುರ' ಎಂಬ ಶಬ್ದ ಪ್ರಯೋಗವು ಕ್ರಿ.ಶ. 10ನೆಯ ಶತಮಾನದ ಅನಂತರದ್ದೆಂದು ವಿದ್ವಾಂಸರ ಅಭಿಪ್ರಾಯ. ಗ್ರಾಮ ಪದ್ಧತಿಯು ಬಾರಕೂರನ್ನು 'ಬಾರಕನ್ಯಾಪುರ'ವೆಂದು ಹಲವೆಡೆ ಸಂಭೋದಿಸುತ್ತದೆ. ಈ ಗ್ರಂಥದ ಕಾಲ ನಿರ್ಣಯವನ್ನು ಮಾಡಲು ಅತ್ಯಂತ ಉಪಯುಕ್ತವಾದ ಸಾಧ

ನೀಯ ಸಂಗತಿ ಇನ್ನೊಂದಿದೆ. 'ವೀರಭೂಪ'ನ ಆಸ್ಥಾನದಲ್ಲಿ ಆದ ನ್ಯಾಯ ತೀರ್ಮಾನವನ್ನು ಕುರಿತಾಗಿ ಪ್ರಸ್ತಾಪವನ್ನು ಈ ಗ್ರಂಥವು ಮಾಡುತ್ತದೆ. ಈ ವೀರ ಭೂಪನು ವಿಜಯ ನಗರದ ವೈಸರಾಯನಾದ ವೀರಭೂಪನೇ ಇರಬೇಕು (ವಿಜಯನಗರದ ಚಕ್ರವರ್ತಿ ಎರಡನೆಯ ಹರಿಹರೀಯನ ಮೊಮ್ಮಗ) ಶಾಸನಾದಿಗಳಿಂದ ಈ ವೀರ ಭೂಪತಿಯು ಕ್ರಿ. ಶ. 1386ರ ಸುಮಾರಿಗೆ ಕರ್ನಾಟಕದ ನಗರಗಳಲ್ಲಿ ಒಂದಕ್ಕೆ ವೈಸರಾಯನಾಗಿ ನೇಮಕವಾದುದೆಂದು ತಿಳಿದು ಬರುತ್ತದೆ. ಗ್ರಾಮಪದ್ಧತಿಯು ಪ್ರಾಂತೀಯ ಕೇಂದ್ರದಲ್ಲಿ ಜರಗಿದ ನ್ಯಾಯ ಕ್ರಮವನ್ನು ವಿವರಿಸುವುದರಿಂದ, ಈ ಗ್ರಂಥವು ಖಂಡಿತವಾಗಿಯೂ ಕ್ರಿ. ಶ. 14ನೇ ಶತಮಾನದ ಅಂತ್ಯಭಾಗಕ್ಕೆ ಸೇರಿದ್ದೆಂದು ನಿರ್ಣಯಿಸ ಬಹುದು.

11 ಗ್ರಾಮಪದ್ಧತಿಯಲ್ಲಿ ಮಯೂರವರ್ಮನು ಗೋರಾಷ್ಟ್ರವು ಅಬ್ರಾಹ್ಮಣ್ಯ ದೇಶವೆಂದು ಗೋದಾವರಿತೀರದಿಂದ ಅಂದರೆ ಅಹಿಚ್ಛತ್ರದಿಂದ ಉತ್ತಮರಾದ ಬ್ರಾಹ್ಮಣರನ್ನು ಕರೆತಂದನೆಂದು ತಿಳಿಯಪಡಿಸಿದೆ. ಆದರೆ ಅಹಿಚ್ಛತ್ರವು ಗೋದಾವರಿ ತೀರದಲ್ಲಿ ಇದೇ ಎಂಬುದು ಚರಿತ್ರೆಗೆ ವಿರುದ್ಧವಾದ ಒಕ್ಕಣೆ. ಈ ವಿಷಯದಲ್ಲಿ ಮಹಾಭಾರತದ ಪ್ರಮಾಣದಂತೆ, ಜೈನ ಬೌದ್ಧ ಸಾಹಿತ್ಯಕಾರರ ಉಲ್ಲೇಖಗಳನ್ನು ಮಧ್ಯಕಾಲದ ಇತಿಹಾಸಗಳನ್ನು ಸೇರಿಸಿವಿಚಾರನಡೆಸಿದ ಎಲ್ಲಾ ಭಾರತೀಯ ಅಥವಾ ಐರೋಪ್ಯ ಜಾತಕರ ನಿರ್ಣಯಗಳ ನಿಷ್ಕರ್ಷವನ್ನೇ ನಂದಲಾಲ್ ದೇವ್ ಎಂಬವರು ಬರೆದ "The Geographical Dictionary of anceint and Medeival India" ಎಂಬಗ್ರಂಥದಲ್ಲಿ, ಅಹಿಚ್ಛತ್ರವೂ, ಅಹಿಕ್ಷೇತ್ರವೂ ಒಂದೇ ಎಂಬುದಾಗಿಯೂ, ಅದು ಉತ್ತರಪಾಂಚಾಲದ ಕೇಂದ್ರವೆಂಬುದಾಗಿಯೂ ವಿಶದವಾಗಿ ತಿಳಿಸಿದೆ.

12. ಸಹ್ಯಾದ್ರಿಖಂಡದ ಉತ್ತರಭಾಗದಲ್ಲಿ ಕೋಟೀಶ್ವರ ಗ್ರಾಮ ವಿಚಾರವೆಂಬ ಹದಿನೈದನೆಯ ಅಧ್ಯಾಯದಲ್ಲಿ ಪತಿತರಾದ ಕೋಟೀಶ್ವರಬ್ರಾಹ್ಮಣರ ಉದ್ಧಾರದ ಕುರಿತು ವಿವರವಿದೆ 'ಮಂದರಾದ್ರಿಗೆ ಸಮಾನನಾದ ವಿತಂಡ ಮುನಿಯು (ಕಲಿಯುಗದಲ್ಲಿ ಮಧ್ವಮತಶ್ರೇಷ್ಠರಾಗಿರುವವರು) ತಪ್ತಮುದ್ರೆಯನ್ನೊತ್ತಿ, ವೈಶ್ವಂಭರವೆಂಬ ಮತವನ್ನು ಕಲ್ಪನೆಮಾಡಿ, ಆ ಪಂಡಿತನು ಅನಂತರ ವಿಷ್ಣುನಾಮಾಂಕಿತವಾದ ಅಷ್ಟಾಕ್ಷರಿಯನ್ನು ಅವರಿಗೆ ಉಪದೇಶ ಮಾಡಿದನು. ಕೋಟದ ಬ್ರಾಹ್ಮಣರಿಗೂ ಕೋಟೀಶ್ವರದ ಬಾಹ್ಮಣರಿಗೂ ಯಾವುದೋ ಕಾರಣದಿಂದ ಭಿನ್ನಭಾವಗಳು ಬೆಳೆದು ಕೋಟೀಶ್ವರದವರು ಪತಿತರಾದವರೆಂದು ಪರಿಗಣಿಸಲ್ಪಟ್ಟ ಅನಂತರಅವ

ರನ್ನು ವೈಷ್ಣವಮತಕ್ಕೆ ಪರಿವರ್ತಿಸಿದುದು ಶ್ರೀ ಸೋದೆ ವಾದಿರಾಜಸ್ವಾಮಿಯುವ ರೆಂಬುದು ಎಲ್ಲರಿಗೂ ತಿಳಿದ ಸಂಗತಿ.ಆದುದರಿಂದ ಈ ಗ್ರಂಥದಲ್ಲಿ ಈ ಸಂಗತಿಗೆ ಪುರಾಣದ ಕವಚವನ್ನಿತ್ತುದು ಸ್ಪಷ್ಟವಾಗಿ ಕಂಡುಬರುತ್ತದೆ ಈ ಗ್ರಂಥದ ನಿರ್ಮಾಣವು ಹಾಗಾದರೆ 15 ನೆಯ ಶತಮಾನದಲ್ಲಿ ಎಂದು ತಿಳಿಯಲುಕಾರಣವಾಗುತ್ತದೆ.

13. "ಶ್ರೀ ಗೋಕರ್ಣ ಪ್ರಭಾವ" ಎಂಬ ಚಿಕ್ಕ ಪುಸ್ತಕದಲ್ಲಿ ಸಾಂಪ್ರದಾಯಿಕ ನಂಬಿಕೆಯಿಂದ ಸ್ವಲ್ಪ ವಿಭಿನ್ನವಾದ, ಅಂತೂ ಚರಿತ್ರೆಗೆ ಸಾಮಿಪ್ಯವಿರುವ ನಿರ್ದೇಶವಿದೆ.

"ಇಲ್ಲಿಯ ಜನತೆಯ ವಿಷಯವಾಗಿ ಮುಖ್ಯವಾಗಿ ಕ್ಷೇತ್ರವಾದುದರಿಂದ ಬ್ರಾಹ್ಮಣರ ವಿಷಯವಾಗಿ ವಿಚಾರಿಸಿದರೆ ಅದು ಅಸ್ಪಷ್ಟವಾಗಿಯೇ ಉಂಟು. ಈ ಭಾಗದ ಇತರ ಸ್ಥಳಗಳಂತೆ ಇಲ್ಲಿಯೂ ಮೂಲತಃ ಬ್ರಾಹ್ಮಣರಿರಲಿಲ್ಲವೆಂದು ತಿಳಿಯುತ್ತದೆ. ವೈಜಯಂತಿ (ಈಗಿನ ಶಿರ್ಸಿ ತಾಲೂಕಿನ ಬನವಾಸಿ) ನಾಡಿನಲ್ಲಿ ಆಳುತ್ತಿದ್ದ ಕದಂಬ ವಂಶದ ಮಯೂರ ವರ್ಮನೆಂಬ ರಾಜನು ಒಮ್ಮೆ ಯಾತ್ರೆಗೆಂದು ಬಂದಾಗ ಇಲ್ಲಿ ಬ್ರಾಹ್ಮಣರ ವಸತಿಯೇ ಇಲ್ಲದೆ ಕೇವಲ ಬೇಡರೇ ಇದ್ದುದನ್ನು ಕಂಡು ಆತನಿಗೆ ವ್ಯಸನವಾಯಿತು. ಆತನು ಅಹಿಚ್ಛತ್ರಕ್ಕೆ ಹೋಗಿ ಅಲ್ಲಿ ಬ್ರಾಹ್ಮಣರನ್ನು ಪ್ರಾರ್ಥಿಸಿ ಯಥೇಚ್ಛದ್ರವ್ಯದಿಂದ ತೃಪ್ತಿಪಡಿಸಿ ಕೆಲವು ಕುಟುಂಬಗಳು ಇಲ್ಲಿ ನೆಲೆಸುವಂತೆಮಾಡಿ ಅವರಿಗೆ ಜೀವನೋಪಾಯಗಳನ್ನು ಕಲ್ಪಿಸಿಕೊಟ್ಟನು. ಅಂದಿನಿಂದ ಇಲ್ಲಿ ಪೂಜಾದಿ ವಿನಿಯೋಗಗಳು ನಡೆಯಹತ್ತಿದುವು. ಆದರೆ ಮಯೂರ ವರ್ಮನು ಕಾಲವಾದ ನಂತರ ಇಲ್ಲಿ ಅವ್ಯವಸ್ಥೆಯಾಗಿ ಕಳ್ಳರ ಪೀಡೆಯ ಮೂಲಕ ಈ ಬ್ರಾಹ್ಮಣ ಕುಟುಂಬಗಳು ಸ್ವದೇಶಕ್ಕೆ ಹೋಗಿ ಬಿಟ್ಟವು. ಮುಂದೆ ಮಯೂರನ ಮಗ ತ್ರಿನೇತ್ರ ಕದಂಬನು ಅಹಿಚ್ಛತ್ರದಿಂದ ಮತ್ತೆ ಕೆಲವು ಬ್ರಾಹ್ಮಣಕುಟುಂಬಗಳನ್ನು ತಂದು ಇಲ್ಲಿ ನೆಲೆಸುವಂತೆ ಮಾಡಲಿಕ್ಕೆ ಪ್ರಯತ್ನಿಸಿದನು. ಪುಂಡರ ಹಾವಳಿಯ ಮೂಲಕ ಆ ಯತ್ನ ಯಶಸ್ವಿಯಾಗಲಿಲ್ಲ. ಆ ಮೇಲೆ ಈ ಭಾಗದ ರಾಜನಾದ ಲೋಕಾದಿತ್ಯನು ಅಹಿಚ್ಛತದಿಂದ ಮತ್ತೆ ಏಳು ಗೋತ್ರದ 24 ಬ್ರಾಹ್ಮಣ ಕುಟುಂಬಗಳನ್ನು ಗೋಕರ್ಣದಲ್ಲಿಟ್ಟನು. ಹಿಂದಿನವರಂತೆ ಇವರು ತಮ್ಮ ದೇಶಕ್ಕೆ ಓಡಿ ಹೋಗದಂತೆ ಮುಂಜಾಗ್ರತೆ ವಹಿಸಿದನು. ಮುಂದೆ ವಿಜಯ ನಗರದ ಸಾಮ್ರಾಜ್ಯ ಕಾಲದಲ್ಲಿ ಮಂತ್ರಿಗಳಾದ ಮಾಧವಾಚಾರ್ಯರು ಇಲ್ಲಿಯ ಬ್ರಾಹ್ಮಣರು ದೇವ ಪೂಜಾದಿಗಳನ್ನು ವ್ಯವಸ್ಥಿತವಾಗಿ ಮಾಡಿಕೊಂಡಿರುವಂತೆ ಗಟ್ಟದ ಮೇಲಿನ ಭಾಗದ 'ವತ್ತ' ಹಾಕಿಕೊಟ್ಟರು. ಇದು ಈಗಲೂ ವಸೂಲು ಬರುತ್ತಾ ಉಂಟು. ಈ ಭಾಗವು ವೈಸೂರಿನ ಆಳ್ವಿಕೆಗೆ ಒಳ

ಪಟ್ಟ ನಂತರ ಇಲ್ಲಿಯ ಬ್ರಾಹ್ಮಣರು ಕಾಲಕಾಲಕ್ಕೆ ಅಲ್ಲಿಯ ಕೆಳದಿ, ಬಿಳಗಿ ಮೊದಲಾದ ಸಂಸ್ಥಾನಿಕರ ಪರಿವಾರದಿಂದ ಪೂಜಾ ವಿನಿಯೋಗಗಳಿಗಾಗಿ ಉಂಬಳಿ ಪಡೆದು ಬರುತ್ತಿದ್ದರೆಂದು ತಿಳಿದು ಬರುತ್ತದೆ. ಈ ಪೂಜಾ ವಿನಿಯೋಗಿಗಳೇ 'ಉಪಾಧಿ' ಎಂದು ಹೆಸರು ಬಿದ್ದಿರಬೇಕು. ಹೀಗೆ ಉಪಾದಿ ಪಡೆದವರು 'ಉಪಾಧಿವಂತರು'"

ಮೇಲಿನ ವಿವರವು ಸಂಪ್ರದಾಯವನ್ನು ಬಿಟ್ಟಿಲ್ಲವಾದರೂ ಹಲಕೆಲವು ಸಂಪ್ರದಾಯಗಳಿಂದ ಚಾರಿತ್ರಿಕ ಸಂಗತಿಯನ್ನು ಎತ್ತಿ ಹಿಡಿಯಬಲ್ಲುದು. ಉತ್ತರ ಕನ್ನಡದಲ್ಲಿ ಬ್ರಾಹ್ಮಣರನ್ನಿರಿಸಲು ಯಾವ ಋಷಿಯ ಪ್ರೇರಣೆಯೂ ಇರಲಿಲ್ಲವೆಂದೂ, ಮಯೂರವರ್ಮನು ತಾನಾಗಿಯೇ ಸ್ವಯಂ ಪ್ರೇರಿತನಾಗಿ ಬ್ರಾಹ್ಮಣರನ್ನು ತರಿಸಿದನೆಂದೂ, ಈ ಅರಸನಿಗೆ ವಿರೋಧಿಗಳು ಬೇಡರೆಂದೂ (ಬೇಡರೆಂದರೆ ಬಿಲ್ಲವರೇ) ಲೋಕಾದಿತ್ಯನು ಕದಂಬ ಕುಲಕ್ಕೆ ಸೇರಿದವನಲ್ಲವೆಂದೂ ಕೆಲವು ಸೂಚನೆಗಳು ಇದರಿಂದ ದೊರಕುತ್ತವೆ.

14 ಅಲೂಪರ ಶಾಸನಗಳಲ್ಲಿ ಪುರೋಹಿತರು ಯಾ ಪೂಜಾರಿಗಳು ಕಂಡು ಬರುವುದಾದರೂ ಗ್ರಾಮ ಪದ್ಧತಿಗಳಲ್ಲಿ ಹೇಳಿದ ಯಾವುದೊಂದು ಕುಟುಂಬದವರಾದರೂ ತೋರಿ ಬರುವುದಿಲ್ಲ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ನಂತರ ಶಿಲಾಶಾಸನಗಳಲ್ಲಿ ಕೆಲವು ಕುಟುಂಬದವರು ಸಾರ್ವಜನಿಕ ಶಾಸನಗಳಿಗೆ ಸಾಕ್ಷಿಗಳಾಗಿ ಯಾ ದಾನಮಾಡಿದವರಾಗಿ ಕಂಡು ಬರುವರು. ವಿಜಯನಗರದ ಎರಡನೆಯ ಹರಿಹರನ ಕಾಲದಲ್ಲಿ ಬಾರ್ಕೂರಿನ ಮೂಡಕೇರಿಯಲ್ಲಿರುವ ಸೋಮೇಶ್ವರ ದೇವಸ್ಥಾನಕ್ಕೆ 1379-80ರಲ್ಲಿ ಮಾಡಿದ ದಾನ ಶಾಸನದಲ್ಲಿ ಪೊಳ್ಳರೂ, ವಿಜಯನಗರದ ಎರಡನೆಯ ದೇವರಾಯನ ಕಾಲದಲ್ಲಿ ಬಾರಕೂರ ಮಣಿಗಾರ ಕೇರಿಯಲ್ಲಿರುವ ಸೋಮನಾಥ ದೇವಸ್ಥಾನಕ್ಕೆ 1437–38ರಲ್ಲಿ ಮಾಡಿದ ದಾನಶಾಸನದಲ್ಲಿ ಮಯ್ಯರೂ ಎರಡನೆಯ ಹರಿಹರನ ಕಾಲದಲ್ಲಿ ಬಾರಕೂರಿನ ಮಣಿಗಾರ ಕೇರಿಯಲ್ಲಿರುವ ಸೋಮನಾಥ ದೇವರಿಗೆ1394-95ರಲ್ಲಿಮಾಡಿದ ದಾನಶಾಸನದಲ್ಲಿ ಕಾರಂತರೂ, ಯಾವ ಕಾಲದ್ದೆಂದು ಸೂಚಿಸದೆ ಮೇಲೆ ಹೇಳಿದ ಸೋಮನಾಥ ದೇವರಿಗೆ ಹಂದೆಯವರು ಮಾಡಿದ ದಾನ ಶಾಸನದಲ್ಲಿ ಹಂದೆಯರೂ, ವಿಜಯನಗರದ ಎರಡನೆಯ ವಿರೂಪಾಕ್ಷನ ಕಾಲದಲ್ಲಿ 1476–77ರಲ್ಲಿ ಮಾಡಿದ ಶಾಸನದಲ್ಲಿ ಚಿಟ್ಟುಪಾಡಿ ಕುಟುಂಬದವರೂ, ಶಂಕರ ಒಡೆಯರು ಬಾರಕೂರಿನ ವೈಸರಾಯರಾಗಿರುವಾಗ1395-96ರಲ್ಲಿ ಮಾಡಿದ ದಾನಶಾಸನದಲ್ಲಿಮೂಡಿಲ ನಿಡಂಬೂರು ಕುಟುಂಬದವರೂ ತೋರಿಬರುತ್ತಾರೆ. ಹೀಗಾದುದರಿಂದ ವಿಜಯನಗರ ಸಾಮ್ರಾಜ್ಯವು ಸ್ಥಾಪನೆಯಾಗುವ ವರೆಗೆ ಗ್ರಾಮಪದ್ಧತಿಯಲ್ಲಿ ಹೇಳಿ

ರುವ ಯಾವುದೊಂದು ಕುಟುಂಬಕ್ಕೂ ಇಲ್ಲಿಯ ಸಾರ್ವಜನಿಕ ದೇವಸ್ಥಾನಗಳಿಗೂ ಏನಾದರೂ ಸಂಬಂಧವಿರಬಹುದೆಂದು ತಿಳಿದುಕೊಳ್ಳಲು ಆಧಾರ ಕಂಡುಬರುವುದಿಲ್ಲ.

15ಪಾತಾಳಿವಿಚಾರ- ಉತ್ತರ ಸಹ್ಯಾದಿ ಖಂಡದ ಇಪ್ಪತ್ತಮೂರನೆಯ ಅಧ್ಯಾಯದಲ್ಲಿ ಪಾತಾಳಿ ಉತ್ಪತ್ತಿಯನ್ನು ವಿವರಿಸಿದೆ. ಆದರೆ ಈ ವಿವರವು ವಸ್ತುಸ್ಥಿತಿಯ ನಿಜವಾದ ನಿರೂಪಣೆಯಾಗಿರದೆ ಕೃತ್ರಿಮ ಉದ್ದೇಶದಿಂದ ಬರೆಯಲ್ಪಟ್ಟದೆಂದು ವಿಚಾರ ಅನ್ವೇಷಣೆಯಿಂದ ತಿಳಿದುಬರುತ್ತದೆ. ಪಾತಾಳಿ ಎಂಬುದು ಜಾತಿವಾಚಕವಲ್ಲ. ಕೆಲಸದ ಹೆಸರು ಆಗಿದ್ದು 'ಪಾರುಪತ್ಯಗಾರ'ವೆಂದು ನನಗೆ ಕಂಡುಬರುತ್ತದೆ. ಇದಕ್ಕೆ ಈಕೆಳಗಿನ ದೃಷ್ಟಾಂತಗಳು ಸಹಾಯಕಗಳಾಗಿವೆ. ನಾರಾಯಣ ಪೆರೋಡಿತ್ತಾಯ ಎಂಬವರು ಕ್ರಿ. ಶ. 1890ರಲ್ಲಿ ಪುತ್ತೂರು ದೇವಸ್ಥಾನದ ಮೆನೆಜರರೂ, ಪಾಟಾಳಿಯೂ ಆಗಿದ್ದರು. ಇವರು ಶಿವಳ್ಳಿ ಬ್ರಾಹ್ಮಣರು. ಅದೇ ದೇವಸ್ಥಾನದಲ್ಲಿ ಕ್ರಿ. ಶ 1916ರ ವರೆಗೆ ಶಿವಳ್ಳಿ ಬ್ರಾಹ್ಮಣರಾದ ಬಲಿನಾಡು ನೆಲ್ಲಿತ್ತಾಯ ದಾಸಪ್ಪನವರ ಮಗ ಸುಬ್ರಾಯರು ಪಾಟಾಳಿಯಾಗಿದ್ದರು. ಕುಂಬಳೆ ಕೂಡ್ಲು ಶ್ಯಾನುಭಾಗರ ಜಾತಿಯಲ್ಲಿ ಪಾತಾಳಿಯಿದ್ದು ಇವರು ಮನೆಯವರನ್ನು ಪಾತಾಳಿ ಎಂಬ ರೂಢಿಯು ಇಂದಿಗೂ ಇದೆ. ಈಗಲೂ ಪೆರಡೂರು, ಎಲ್ಲೂರು ದೇವಸ್ಥಾನಗಳಲ್ಲಿ ಪಾತಾಳಿಯು ಶಿವಳ್ಳಿ ಬ್ರಾಹ್ಮಣ ವರ್ಗಕ್ಕೆ ಸೇರಿದವರಾಗಿರುವರು. ಇನ್ನೂ ಅನೇಕ ದೃಷ್ಟಾಂತಗಳನ್ನು ಕೊಡಬಹುದು. ಆದುದರಿಂದ ಉತ್ತರ ಸಹ್ಯಾದ್ರಿಯಲ್ಲಿಹೇಳಿದಂತೆ ಪಾಟಾಳಿಯು ದಾಸಿಪುತ್ರನಾದುದು, ಸಹಪಂಙ್ತಿಭೋಜನ, ಪುರಾಣ ಶ್ರವಣ, ರುದ್ರಾಕ್ಷಮಾಲಾಧಾರಣ, ಸಾಲಿಗ್ರಾಮ ಪೂಜಾ, ತ್ರಿಪುಂಡ್ರಧಾರಣ, ಶಿರೋಭೂಷಣಧಾರಣ, ಬ್ರಾಹ್ಮಣ ಸಮೂಹದಲ್ಲಿ ಪ್ರವೇಶ, ಪಂಚಯಜ್ಞ ತರ್ಪಣ, ಕಾಮುವ್ರತಾದಿಗಳ ಆಚರಣೆ- ಇತ್ಯಾದಿಗಳನ್ನು ಮಾಡ ಬಾರದವನಾದುದು, ನೀಚಮಾರ್ಗಾವಲಂಬಿಯಾದುದುಹೇಗೆ ಎಂಬುದು ವಿಚಾರಕ್ಕೆ ನಿಲುಕದಾಗಿದೆ. ಈ ಪಾಟಾಳಿಯು ಶಿವ ನಿರ್ಮಾಲವನ್ನು ಭಕ್ಷಿಸುತ್ತಿರ ಬೇಕಾಗಿ ಉತ್ತರ ಸಹ್ಯಾದಿಯಲ್ಲಿ ಉಲ್ಲೇಖವಿರುವುದರಿಂದಲೂ ಶಿವ ನಿರ್ಮಾಲ್ಯ ತ್ಯಾಜ್ಯವಾದುದು ವೈಷ್ಣವ ಪಂಥದ ಪ್ರಚಾರದ ನಂತರ ಆದುದರಿಂದಲೂ ಈ ವೈಷ್ಣವ ಧರ್ಮವು ತುಳುನಾಡಿನಲ್ಲಿ ಹದಿಮೂರನೆಯ ಶತಮಾನದಲ್ಲಿ ಪ್ರಚಾರಕ್ಕಾರಂಭವಾದುದರಿಂದಲೂ ಈ ಸಂಗತಿಯನ್ನೊಳಗೊಂಡ ಸಹ್ಯಾದಿ ಖಂಡವು ಯಾ ಗ್ರಾಮಪದ್ಧತಿಯು ಹದಿಮೂರನೆ ಶತಮಾನದ ಅನಂತರವೇ ರಚಿಸಲ್ಪಟ್ಟದೆಂಬುದು ನಿಶ್ಚಯವಾಗುತ್ತದೆ. ಆದುದರಿಂದ ಪಾಟಾಳಿಯು ದೇವಸ್ಥಾನದ ಗೌರವಸ್ಥ ಉದ್ಯೋಗಸ್ಥನಾಗಿದ್ದು ಜಾತಿ ನಿರ್ದೇಶಕನಲ್ಲವೆಂದು ತಿಳಿಯುವುದು, ಅಗತ್ಯವಾಗಿದೆ.

ಮೇಲ್ಕಾಣಿಸಿದ ವಿಮರ್ಶೆಯಿಂದ ತುಳುಗ್ರಾಮ ಪದ್ಧತಿಯು ಹಾಗೂ ಸಹ್ಯಾದಿ ಖಂಡವು ಕ್ರಿ.ಶ.14 ನೇ ಶತಮಾನದಿಂದ ಈಚೆಗಿನ ಗ್ರಂಥವೆಂಬುವರಲ್ಲಿ ಸಂದೇಹ ವನ್ನು ತೊಲಗಿಸಲು ಬೇಕಷ್ಟು ಕಾರಣಗಳಿವೆ. ಈ ಗ್ರಂಥದಲ್ಲಿ ಬ್ರಾಹ್ಮಣರ ಪ್ರಾಚೀನ ಕುರುಹುಗಳ ನೆನಹೂ ಹಲಕೆಲವು ಬೇರೆ ಬೇರೆ ಕಾಲಗಳಿಗೆ ಸಂಬಂಧಿಸಿದ ಚಾರಿತ್ರಿಕ ವಿಷಯಗಳೂ ಹೊಸ ಬ್ರಾಹ್ಮಣ ಮನೆತನಗಳೂ ಗೋರಾಷ್ಟ್ರಕ್ಕೆ ಬಂದು ನೆಲೆಸಿ ಬೇರೆ ಬೇರೆ ವಿಭಾಗಗಳಾದುದರ ವಿವರವೂ ಅವುಗಳ ಶ್ರೇಷ್ಠತೆಯನ್ನು ಹೆಚ್ಚಿಸಲು ಮಾಡಿದ ಪ್ರಯತ್ನದ ಪ್ರತಿಫಲನವೂ—ಈ ಎಲ್ಲಾ ಸಂಗತಿಗಳು ವಿಚಿತ್ರ ರೀತಿಯಲ್ಲಿ ಪೋಣಿಸಲ್ಪಟ್ಟು ಪುರಾಣವಾಗಿದೆ.

ಕಳೆದ ಲೇಖನದಲ್ಲಿ ತುಳುನಾಡಿಗೆ ಬಂದ ಬ್ರಾಹ್ಮಣರ ಪ್ರಥಮ ವಲಸೆಯು ಸ್ಥಾನಿಕರದ್ದು ಎಂಬುದಾಗಿ ಚಾರಿತ್ರಿಕ ದೃಷ್ಟಿಯಲ್ಲಿ ವಿಮರ್ಶಿಸಿದ್ದೆ. 'ಸ್ಥಾನಿಕ' ಎಂಬ ಪದವು ಯಾವ ಅರ್ಥವನ್ನು ತೋರ್ಪಡಿಸುತ್ತದೆಎಂದು ತಿಳಿಯುವುದು ಅಗತ್ಯ. ಸ್ಥಾನಿಕ, ಸ್ಥಾನಾಧ್ಯಕ್ಷ ಮತ್ತು ಸ್ಥಾನಪತಿ ಎಂಬೀ ಮೂರು ವಾಚಕಗಳು ಒಂದೇ ಅರ್ಥವನ್ನೀಯುವುವು ಎಂದು ಆಧಾರಗಳು ಹೇಳುತ್ತವೆ. ಹೀಗಾಗಿ 'ಸ್ಥಾನಿಕ' ಎಂಬುದು ಜಾತಿ ಹೆಸರಾಗದೆ ಅಧಿಕಾರದ ಹೆಸರಾಗಿಯೂ ಮಾನ ಮರ್ಯಾದೆಯ ಗುರುತಿನ ಪ್ರತೀಕವಾಗಿಯೂ ಇರುವುದು ವಿಚಾರಣೀಯವಾಗಿದೆ. ಈ ಅಭಿಪ್ರಾಯವನ್ನು ಈ ಕೆಳಗಿನ ಆಧಾರ ಗ್ರಂಥಗಳು ಕೊಡುತ್ತವೆ

European Languages and Literature in the University of Oxford by Max Muller; ಶಬ್ದಾದಿ ಚಿಂತಾಮಣಿ; Sanskrit Dictionary by Apte, L. R. Vaidya and V. Vaman Bide; ಶಬ್ದ ಕಲ್ಪೋದ್ರುಮ; Manual of Administration of Madras Presidency (Vol. III); Studies in Ancient Polity by Narendranath Lall; V. R. Ganapathi Iyer's Commentary on the Religious Endowment Act XX of 1863; Kannada into English Dictionary of W. R. Reeve. Temil—English Dictionary by Rotter I. P.

ಚರಿತ್ರೆಯು ಹೇಳುವಂತೆ ಸ್ಥಾನಿಕರ ಸ್ಥಾನಮಾನಗಳ ಕುರಿತಾದ ಈ ಕೆಳಗಿನ ಅಭಿಪ್ರಾಯವನ್ನು ವಿದ್ವಾಂಸರ ವಿಮರ್ಶೆಗೂ ಸರಿಯೊಪ್ಪುವಂತೆ ವ್ಯಕ್ತಪಡಿಸಲು ಇಚ್ಛಿಸುತ್ತೇನೆ.

'ಸ್ಥಾನಿಕ' ವೆಂಬ ಶಬ್ದ ಮೊದಲು ಕಂಡುಬಂದುದು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ. ಸರಕಾರದ ನಾಗರಿಕ ಅಧಿಕಾರಿಯೊಬ್ಬನನ್ನು ಅಂದು 'ಸ್ಥಾನಿಕ' ನೆಂದು ಕರೆಯಲಾಗುತ್ತಿತ್ತು. ಭಾರತದ ಚರಿತ್ರೆಯುದ್ದಕ್ಕೂ ಅವಲೋಕಿಸುವಾಗ ಸ್ಥಾನಿಕನು ಮೊದಲಿನಿಂದಲೂ ಅಧಿಕಾರಿಯಾಗಿದ್ದನೆಂದು ಕಂಡುಬರುತ್ತದೆ. ಇದರೊಂದಿಗೆ 'ಸ್ಥಾನಿಕ' ವೆಂಬ ಅಧಿಕಾರಪದ ಜೈನ, ಶ್ರೀವೈಷ್ಣವ ಹಾಗೂ ಶೈವ ಈ ಮೂರು ಪಂಥಗಳಲ್ಲಿಯೂ ಇದ್ದುದು ಕಂಡುಬರುತ್ತದೆ. ಪುರೋಹಿತವರ್ಗದಂತೆ ನಿಷ್ಠ ಬ್ರಾಹ್ಮಣರಾಗಿದ್ದ ಈ ಸ್ಥಾನಿಕರು ಎಂದೂ ಪ್ರತ್ಯೇಕ ಜಾತಿ ಅಥವಾ ಪಂಗಡಕ್ಕೆ ಸೇರಿದ್ದಿಲ್ಲ. ದೇವಸ್ಥಾನಗಳ ಅಧಿಕಾರಿಗಳಾಗಿ ಅಲ್ಲಿಯ ಆಸ್ತಿಪಾಸ್ತಿಗಳ ಮೇಲ್ವಿಚಾರಕರಾಗಿ, ಅರ್ಚಕರಾಗಿ, ಒಡೆಯರಾಗಿ, ಅದೂ ಅಲ್ಲದೆ, ಸಾಹಿತಿಗಳಾಗಿ ಈ ಸ್ಥಾನಿಕರು ಹೆಸರಾಂತರಾಗಿದ್ದರು. ಆದರೆ ಹೆಚ್ಚಾಗಿ ಅವರು ದೇವಾಲಯಗಳಲ್ಲಿ 'ಸ್ಥಾನ' ವೆಂಬ ಅಧಿಕಾರ ಪದವಿಯಲ್ಲಿದ್ದು ದೇವರ ಹೆಸರಿನಲ್ಲಿದ್ದ ಭೂಸಂಪತ್ತನ್ನು ನೋಡಿಕೊಳ್ಳುತ್ತಿದ್ದರು. ಈ ಅಧಿಕಾರ ದೇವರ ಹೆಸರಿನಲ್ಲಿ ನಡೆಯುತ್ತಿತ್ತೇ ವಿನಾ, ಸ್ಥಾನಿಕರ ಸ್ವಂತ ಹೆಸರಿನಲ್ಲಿ ನಡೆಯುತ್ತಿದ್ದಿಲ್ಲ. ಇದರಿಂದಾಗಿ ಶಾಸನಗಳ ಪರಿಶೀಲನೆಯು ತಿಳಿಸುವಂತೆ ಆಯಾ ದೇವಸ್ಥಾನದ ಸ್ಥಾನಿಕರೆಂಬುದರ ಜೊತೆಗೆ ಆಯಾದೇವರ ಸ್ಥಾನಿಕರೆಂದು ಈ ಅಧಿಕಾರಿಗಳನ್ನು ಹೆಸರಿಸಿರುವುದನ್ನು ಕಾಣುತ್ತೇವೆ. ದೇವಸ್ಥಾನದ ಪೂಜೆ ಸ್ಥಾನಿಕರ ಮೇಲ್ವಿಚಾರಣೆಗೆ ಒಳಪಟ್ಟೇ ಇರುತ್ತಿತ್ತು. ದೇವಸ್ಥಾನಕ್ಕೆ ಅರ್ಚಕರನ್ನು ನೇಮಿಸುವ ಅಧಿಕಾರವನ್ನು ಸ್ಥಾನಿಕರಿಗೆ ಕೊಡಲಾಗಿತ್ತು. ನಮ್ಮ ಚರಿತ್ರೆಯ ಯಾವ ಕಾಲದಲ್ಲೂ 'ಸ್ಥಾನಿಕ' ವೆಂಬ ಹೆಸರನ್ನು ಕರ್ನಾಟಕ, ತಮಿಳು ಹಾಗೂ ತೆಲುಗು ದೇಶಗಳಲ್ಲಿ ದೇವಸ್ಥಾನಗಳಲ್ಲಿ ಬೇರೆ ಬೇರೆ ಹೆಸರಿನಿಂದ, ಊಳಿಗ ಮಾಡಿಕೊಂಡಿರುವ ಜನರಿಗೆಂದೂ ಅನ್ವಹಿಸುವಂತಿಲ್ಲ (ತುಳುನಾಡು ಹೊರತಾಗಿ) ಈ ಜನರಿಗೆ ಸ್ಥಾನಿಕರಿಗೆ ಇದ್ದಂತೆ ಅಧಿಕಾರಗಳೂ ಇಲ್ಲ; ಸವಲತ್ತುಗಳೂ ಇಲ್ಲ. ದೇವಸ್ವದ ಹಾಗೂ ದೇವಸ್ಥಾನದ ಮೇಲ್ವಿಚಾರಣೆಯನ್ನು ನಡೆಸುತ್ತಿದ್ದ ಸ್ಥಾನಿಕರು, ಅರಸರಿಂದಲೋ ಸಾರ್ವಜನಿಕರಿಂದಲೋ (ಇವರಲ್ಲಿ ಬ್ರಾಹ್ಮಣರು ಇದ್ದರು) ಉಂಬಳಿಯಾಗಿ ಭೂಮಿಯನ್ನು ಪಡೆಯುತ್ತಿದ್ದರು.ಕೆಲವೊಮ್ಮೆ ಅರಸರುದೇವಸ್ಥಾನಕ್ಕೆ ಆಸ್ತಿಯನ್ನು ಸಮರ್ಪಿಸುವಸಂದರ್ಭದಲ್ಲಿಈ ಸ್ಥಾನಿಕರ ಪಾದಪೂಜೆಯನ್ನು ಮಾಡುತ್ತಿದ್ದರು.ದೇವಸ್ಥಾನಕ್ಕೆ ಬಿಟ್ಟ ಈ ಆಸ್ತಿಗಳನ್ನು ಕೌಟಿಲ್ಯನ ದಿನಗಳಲ್ಲಿ ಹಸ್ತಾಂತರ ಮಾಡುವಂತಿದ್ದಿಲ್ಲ.ಆದರೆಅನಂತರದ ಕೆಲವು ಸಂದರ್ಭಗಳಲ್ಲಿ ಸ್ಥಾನಿಕರು, ಉಂಬಳಿಯಾಗಿ ಬಿಟ್ಟ ಭೂಮಿಯನ್ನು ಪರಾಭಾರಮಾಡುವ ಹಕ್ಕನ್ನೂ ಉಂಬಳಿ ಕೊಟ್ಟವರಿಂದ ಪಡೆದಂತೆ ತೋರುತ್ತದೆ. ಹದಿನೇಳನೆಯ ಶತಮಾನದ ಹಿಂದೂ ಶಾಸನದಲ್ಲಿ ಈ ಪದ್ಧತಿಯನ್ನು ನಿಷೇಧಿಸಲಾಗಿದೆ.

ದೇವಸ್ಥಾನದ ಅಧಿಕಾರಿಗಳಾಗಿದ್ದ ಸ್ಥಾನಿಕರು ಸಾರ್ವಜನಿಕ ಉಂಬಳಿಯ ಸಂದರ್ಭದಲ್ಲಿ ಸಾಕ್ಷಿದಾರರಾಗಿ ನಿಲ್ಲುತ್ತಿದ್ದರು. ಮಹೇಶ್ವರ ಹಾಗೂ ಮಹಾಜನರೊಂದಿಗೆ ಸಮಾನವಾದ ಅಧಿಕಾರಿಗಳಾಗಿದ್ದ ಸ್ಥಾನಿಕರು ಅವರೊಂದಿಗೇ ದೇವಸ್ಥಾನಕ್ಕೆ ಬರುತ್ತಿದ್ದ ಹಣದ ಹಾಗೂ ಬೆಳೆಯ ಕಾಣಿಕೆಗಳನ್ನು ಸ್ವೀಕರಿಸುತ್ತಿದ್ದರು. ಕಟ್ಟುಕೊಡಗೆ, ಧರ್ಮಶಾಸನ ಎಂಬ ಬಿರುದುಗಳನ್ನು ಉತ್ತಮ ಜನರಿಗೆ ಕೊಡುವಲ್ಲಿ ಇವರು ನಾಡು ಹಾಗೂ ಗಾವುಡರ ಪ್ರತಿನಿಧಿಗಳಾದ ಅಧಿಕಾರಿಗಳೊಂದಿಗೆ ಸಹಕರಿಸುತ್ತಿದ್ದರು. ವಿಶಿಷ್ಟ ಕಾರ್ಯಗಳನ್ನು ನೆರವೇರಿಸಿದ ಬ್ರಾಹ್ಮಣರಿಗೆ ಭೂಮಿಯನ್ನು ಬಹುಮಾನವಾಗಿ ಕೊಡುವ ಅಧಿಕಾರವೂ ಸ್ಥಾನಿಕರಿಗಿತ್ತೆಂಬುದು ಗಮನಿಸತಕ್ಕುದಾದ ಅಂಶ. ಇದಕ್ಕೆಬೇಕಾದ ಅಧಿಕಾರ ಪತ್ರಗಳನ್ನು ಮಾಡಿಕೊಡುವ ಅಧಿಕಾರವೂ ಅವರಿಗಿತ್ತು. ವಿಜಯನಗರದ ಕಾಲದಲ್ಲಿ ಮತ್ತಿತರ ಸಂದರ್ಭಗಳಲ್ಲಿ ದೇವಸ್ಥಾನದ ಆಡಳಿತೆಗೆ ಅರಸರು ನೇಮಿಸಿದ ಪಾರುಪತ್ಯಗಾರರ ಅಧಿಕಾರಕ್ಕೂ ಈ ಸ್ಥಾನಿಕರು ಒಳಪಟ್ಟಿರಲಿಲ್ಲವೆಂದರೆ ಅವರ ಪ್ರಾಮುಖ್ಯತೆಯು ಸ್ಪಷ್ಟವಾಗುತ್ತದೆ.

ಸರಕಾರದ ಅಧೀನವಿದ್ದ ದೇವಸ್ಥಾನಗಳಲ್ಲಿ ಸ್ಥಾನಿಕರನ್ನು ಅರಸರೇ ನೇಮಕ ಮಾಡುತ್ತಿದ್ದರು. ನಾಗರಿಕ ಆಡಳಿತದ ಉಚ್ಚ ಅಧಿಕಾರಿಗಳಾಗಿದ್ದುದರಿಂದ ರಾಜನೊಂದಿಗೆ ನೇರ ಮನವಿಗಳನ್ನರ್ಪಿಸಲೂ ಅವರು ಅರ್ಹರಾಗಿದ್ದರು. ರಾಜನೊಂದಿಗೆ ಅವರು ಬೇಡಿಕೆಗಳನ್ನು ಸಲ್ಲಿಸಲುಮುಂದಾಳುಗಳಾಗಿ ಹೋಗಬಹುದಿತ್ತು. ಸಾಮಾನ್ಯ ಪ್ರಜೆಗಳನ್ನು ಪ್ರತಿನಿಧಿಗಳ ಮೂಲಕ ಮಾತನಾಡಿಸುತ್ತಿದ್ದ ರಾಜನು ಸ್ಥಾನಿಕರನ್ನು ತಾನೇ ಮಾತನಾಡಿಸುತ್ತಿದ್ದನು. ತಮ್ಮ ಕರ್ತವ್ಯವನ್ನು ಸರಿಯಾಗಿ ಪಾಲಿಸದಿದ್ದ ಸ್ಥಾನಿಕರನ್ನು ಕೂಡಲೇ ಸ್ಥಾನಚ್ಯುತಿಗೊಳಿಸಲಾಗುತ್ತಿತ್ತು. ಕಠಿಣ ಪರಿಸ್ಥಿತಿಯಲ್ಲಿ ಉಂಬಳಿ ಭೂಮಿಯನ್ನು ಅಡವಿಟ್ಟ ಸ್ಥಾನಿಕರ ಬೆಂಬಲಕ್ಕೆ ರಾಜರು ತಾವಾಗಿಯೇ ಮುಂದಾಗಿ ಅಡವನ್ನು ಬಿಡಿಸಿ ಕೊಡುತ್ತಿದ್ದರು.

ಸ್ಥಾನ ಗುಂಡದಿಂದ ತುಳುವಕ್ಕೆ 11ನೇ ಶತಮಾನದಲ್ಲಿ ಬಂದಿರ ಬೇಕಾದ ಬ್ರಾಹ್ಮಣರಿಂದ 'ಗ್ರಾಮ ಪದ್ಧತಿ'ಯಲ್ಲಿ ಮಯೂರವರ್ಮನ ಕತೆ, ಹಾಗೂ ಬ್ರಾಹ್ಮಣರಿಗಿತ್ತ ಭೂದಾನ ಇತ್ಯಾದಿ ವಿವರಗಳು ಸೇರಿಸಲ್ಪಟ್ಟಿದು ಸಹಜವೇ ಆಗಿದೆ.

8. ಉತ್ತರ ಸಹ್ಯಾದ್ರಿಯಲ್ಲಿ ಉಲ್ಲೇಖಿತವಾದ ಪರಶುರಾಮನಿಂದ ನಿರ್ಮಿಸ ಲ್ಪಟ್ಟ ಏಳು ರಾಷ್ಟ್ರಗಳಲ್ಲಿ 'ಹವಿಗ' ಒಂದಾಗಿದೆ. ಈ ಹವಿಗ ದೇಶವನ್ನು ಹೈಗ ವೆಂದೂ ಬರೆದಿದೆ. ಈ ದೇಶದ ಮೂಲ ಹೆಸರು 'ಪಶುಕ' ಎಂದು ಶುದ್ಧ ಸಂಸ್ಕೃತ ಗ್ರಂಥವಾದ ಪ್ರಪಂಚ ಹೃದಯದಿಂದ ತಿಳಿಯುತ್ತದೆ. ಪಶು ಯಾ ಪಶುಕವೆಂದರೆ ಒಂದೇ ಆಗಿದೆ. ಈ 'ಪಶುಕ'ದ ರೂಪಾಂತರದಿಂದ ಆದ ಪ್ರಭೇದವೇ 'ಹೈಗ'ವಾಗಿರ ಬೇಕು. 'ಪ'ವು 'ಹ'ವಾಗಿ ಮಾರ್ಪಟ್ಟು ಉಪಯೋಗಿಸಲ್ಪಡುವ ಕ್ರಮ ಪ್ರಾರಂಭ ವಾದುದು ಕ್ರಿ.ಶ.12ನೆಯ ಶತಮಾನದ ಅನಂತರದಿಂದ ಎಂಬುದಾಗಿ ಭಾಷಾಶಾಸ್ತ್ರ ಜ್ಞರು ತಿಳಿಸುತ್ತಾರೆ. ಈ ಪಶುಕವೆಂದರೆ *ಗೋರಾಷ್ಟ್ರವೇ*. 'ಯಾವ ದೇಶದಲ್ಲಿ ದೇವತೆಗಳಿಗೋಸ್ಕರ ವಿಶೇಷವಾಗಿ ಹವಿಸ್ಸು ಕೊಡಲ್ಪಡುತ್ತದೋ ಅದರ ದೆಸೆಯಿಂದ ಹವ್ಯವೆಂತೆಂದು ಪ್ರಸಿದ್ಧವಾಗಿ' ಎಂದು ಉತ್ತರ ಸಹ್ಯಾದ್ರಿಯಲ್ಲಿ ಲಿಖಿತವಾಗಿರು ವುದು ಅಷ್ಟೊಂದು ಸಮಂಜಸವಾಗಿಲ್ಲ ಹೈವ, ಹೈಗವೆಂಬುದು ಪಶು ಪಶುಕದ ಹನ್ನೆರಡನೆಯ ಶತಮಾನದ ಅನಂತರದ ರೂಪಾಂತರವೆಂಬುದರಲ್ಲಿ ಸಂದೇಹವಿಲ್ಲ.

9. ಗ್ರಾಮ ಪದ್ಧತಿಯಲ್ಲಿ ಬರುವ ಚೌಟ, ಬಂಗ, ಸಾವಂತ ಅರಸು ಮನೆತನ ಗಳೂ, ಚಿಟ್ಟಿಪಾಡಿ ಮತ್ತು ನಿಡಂಬೂರು ಬಲ್ಲಾಳರುಗಳ ಪಕ್ಷನಾಥ ಸ್ಥಾನಗಳೂ ಹತ್ತನೆಯ ಶತಮಾನದ ಮುಂದಕ್ಕೆ ಅಸ್ತಿತ್ವಕ್ಕೆ ಬಂದುದೆಂದು ಇತಿಹಾಸವು ಹೇಳು ತ್ತದೆ.

10. ಗ್ರಾಮ ಪದ್ಧತಿಯಲ್ಲಿ (ಪುತ್ತಿಗೆ ಪ್ರಭೇದ) ಶಂಕರಾಚಾರ್ಯರಿಗೂ ಮದನ ಪಂಡಿತರಿಗೂ ಆದ ಚರ್ಚೆಯ ಉಲ್ಲೇಖವಿದೆ. ಇಷ್ಟರ ವರೆಗಿನ ಚಾರಿತ್ರಿಕ ದಾಖಲೆ ಮೇಲೆ ನಿರ್ಧರಿಸಿ ಹೇಳುವುದಾದರೆ ಶಂಕರಾಚಾರ್ಯರ ಕಾಲವು ಕ್ರಿ.ಶ. 8ನೆಯ ಶತಮಾನವೆಂದು ಅಂಗೀಕರಿಸ ಬೇಕು. ಹಾಗಾದರೆ ಈ ಗ್ರಂಥದ ನಿರ್ಮಾಣ ಕಾಲದ ಕೆಳಮಿತಿಯನ್ನು ಕ್ರಿ.ಶ. 8ನೆಯ ಶತಮಾನದ ಮಧ್ಯಾವಧಿಗಿಂತ ಇಳಿಸಲು ಸಾಧ್ಯವಿಲ್ಲ. ಅಂತೆಯೇ 'ಬಾರಕನ್ಯಾಪುರ' ಎಂಬ ಶಬ್ದ ಪ್ರಯೋಗವು ಕ್ರಿ.ಶ. 10ನೆಯ ಶತಮಾನದ ಅನಂತರದ್ದೆಂದು ವಿದ್ವಾಂಸರ ಅಭಿಪ್ರಾಯ. ಗ್ರಾಮ ಪದ್ಧ ತಿಯು ಬಾರಕೂರನ್ನು 'ಬಾರಕನ್ಯಾಪುರ'ವೆಂದು ಹಲವೆಡೆ ಸಂಭೋದಿಸುತ್ತದೆ. ಈ ಗ್ರಂಥದ ಕಾಲ ನಿರ್ಣಯವನ್ನು ಮಾಡಲು ಅತ್ಯಂತ ಉಪಯುಕ್ತವಾದ ಸಾಧ

ದೇವಸ್ಥಾನದ ಅಧಿಕಾರಿಗಳಾಗಿದ್ದ ಸ್ಥಾನಿಕರು ಸಾರ್ವಜನಿಕ ಉಂಬಳಿಯ ಸಂದರ್ಭದಲ್ಲಿ ಸಾಕ್ಷಿದಾರರಾಗಿ ನಿಲ್ಲುತ್ತಿದ್ದರು. ಮಹೇಶ್ವರ ಹಾಗೂ ಮಹಾಜನರೊಂದಿಗೆ ಸಮಾನವಾದ ಅಧಿಕಾರಿಗಳಾಗಿದ್ದ ಸ್ಥಾನಿಕರು ಅವರೊಂದಿಗೇ ದೇವಸ್ಥಾನಕ್ಕೆ ಬರುತ್ತಿದ್ದ ಹಣದ ಹಾಗೂ ಬೆಳೆಯಕಾಣಿಕೆಗಳನ್ನು ಸ್ವೀಕರಿಸುತ್ತಿದ್ದರು. ಕಟ್ಟುಕೊಡಗೆ, ಧರ್ಮಶಾಸನ ಎಂಬ ಬಿರುದುಗಳನ್ನು ಉತ್ತಮ ಜನರಿಗೆ ಕೊಡುವಲ್ಲಿ ಇವರು ನಾಡು ಹಾಗೂ ಗಾವುಡರ ಪ್ರತಿನಿಧಿಗಳಾದ ಅಧಿಕಾರಿಗಳೊಂದಿಗೆ ಸಹಕರಿಸುತ್ತಿದ್ದರು. ವಿಶೇಷಕಾರ್ಯಗಳನ್ನು ನೆರವೇರಿಸಿದ ಬ್ರಾಹ್ಮಣರಿಗೆ ಭೂಮಿಯನ್ನು ಬಹುಮಾನವಾಗಿ ಕೊಡುವ ಅಧಿಕಾರವೂ ಸ್ಥಾನಿಕರಿಗಿತ್ತೆಂಬುದು ಗಮನಿಸತಕ್ಕುದಾದ ಅಂಶ. ಇದಕ್ಕೆಬೇಕಾದ ಅಧಿಕಾರ ಪತ್ರಗಳನ್ನು ಮಾಡಿಕೊಡುವ ಅಧಿಕಾರವೂ ಅವರಿಗಿತ್ತು. ವಿಜಯನಗರದ ಕಾಲದಲ್ಲಿ ಮತ್ತಿತರ ಸಂದರ್ಭಗಳಲ್ಲಿ ದೇವಸ್ಥಾನದ ಆಡಳಿತೆಗೆ ಅರಸರು ನೇಮಿಸಿದ ಪಾರುಪತ್ಯಗಾರರ ಅಧಿಕಾರಕ್ಕೂ ಈ ಸ್ಥಾನಿಕರು ಒಳಪಟ್ಟಿರಲಿಲ್ಲವೆಂದರೆ ಅವರ ಪ್ರಾಮುಖ್ಯತೆಯು ಸ್ಪಷ್ಟವಾಗುತ್ತದೆ.

ಸರಕಾರದ ಅಧೀನವಿದ್ದ ದೇವಸ್ಥಾನಗಳಲ್ಲಿ ಸ್ಥಾನಿಕರನ್ನು ಅರಸರೇ ನೇಮಕ ಮಾಡುತ್ತಿದ್ದರು. ನಾಗರಿಕ ಆಡಳಿತದ ಉಚ್ಚ ಅಧಿಕಾರಿಗಳಾಗಿದ್ದುದರಿಂದ ರಾಜನೊಂದಿಗೆ ನೇರ ಮನವಿಗಳನ್ನರ್ಪಿಸಲೂ ಅವರು ಅರ್ಹರಾಗಿದ್ದರು. ರಾಜನೊಂದಿಗೆ ಅವರು ಬೇಡಿಕೆಗಳನ್ನು ಸಲ್ಲಿಸಲುಮುಂದಾಳುಗಳಾಗಿ ಹೋಗಬಹುದಿತ್ತು. ಸಾಮಾನ್ಯ ಪ್ರಜೆಗಳನ್ನು ಪ್ರತಿನಿಧಿಗಳ ಮೂಲಕ ಮಾತನಾಡಿಸುತ್ತಿದ್ದ ರಾಜನು ಸ್ಥಾನಿಕರನ್ನು ತಾನೇ ಮಾತನಾಡಿಸುತ್ತಿದ್ದನು. ತಮ್ಮ ಕರ್ತವ್ಯವನ್ನು ಸರಿಯಾಗಿ ಪಾಲಿಸದಿದ್ದ ಸ್ಥಾನಿಕರನ್ನು ಕೂಡಲೇ ಸ್ಥಾನಚ್ಯುತಿ ಗೊಳಿಸಲಾಗುತ್ತಿತ್ತು. ಕಠಿಣ ಪರಿಸ್ಥಿತಿಯಲ್ಲಿ ಉಂಬಳಿ ಭೂಮಿಯನ್ನು ಅಡವಿಟ್ಟ ಸ್ಥಾನಿಕರ ಬೆಂಬಲಕ್ಕೆ ರಾಜರು ತಾವಾಗಿಯೇ ಮುಂದಾಗಿ ಅಡವನ್ನು ಬಿಡಿಸಿ ಕೊಡುತ್ತಿದ್ದರು.

# ದಕ್ಷಿಣ ಕನ್ನಡದಲ್ಲಿ ಸ್ಥಾನಿಕರ ಚರಿತ್ರೆ

ತುಳುನಾಡಿನ ಬ್ರಾಹ್ಮಣರಲ್ಲಿ ಮೊದಲಿಗರು ಸ್ಥಾನಿಕರೆಂಬುದನ್ನು ಈ ಮೊದಲಿನ ಲೇಖನಗಳಲ್ಲಿ ಖಚಿತ ಪಡಿಸಿದ್ದಾಯಿತು. ಶಾಸನಾದಿಗಳ ದಾಖಲೆಯ ಆಧಾರದಿಂದಲೂ, ಕರ್ನಾಟಕ, ತೆಲುಗು, ತಮಿಳು ನಾಡುಗಳಲ್ಲಿ ಇವರಿಗಿದ್ದ ಗೌರವ, ಸ್ಥಾನಮಾನಗಳಿಂದಲೂ, ಸ್ಥಾನಿಕರು ಸಮಾಜದ ಮೇಲೆ ವಿಶಿಷ್ಟವಾದ ಪ್ರಭಾವವನ್ನು ಬೀರಿರಿದ್ದರು ಎಂದು ನಿರ್ಧರಿಸಬಹುದು. ತುಳುನಾಡಿನಲ್ಲಿ, ಅದರಲ್ಲೂ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಅವರು ಬ್ರಾಹ್ಮಣ ವರ್ಗದಲ್ಲಿ ಅತಿ ಪ್ರಾಚೀನರು ಆಗಿದ್ದರೂ, ಕಾಲಾನುಗತಿಯಿಂದ ತಮ್ಮ ಗೌರವಾನ್ವಿತ ಸ್ಥಾನವನ್ನು ಕಳಕೊಂಡು ಇತ್ತೀಚಿಗಿನ ವರೆಗೆ ಅಬ್ರಾಹ್ಮಣರೆಂದು (ಪತಿತ ಬ್ರಾಹ್ಮಣರೆಂದು) ಪರಿಗಣಿಸಲ್ಪಟ್ಟು, ಅಪಾಂಕ್ತೇಯರಾಗಿದ್ದುದು ಅವರು ಸಮಾಜದಲ್ಲಿ ದುರ್ಬಲರಾದುದರಿಂದಲೂ, ಹಾಗೂ ತಮ್ಮ ಅಧಿಕಾರವನ್ನು ನಷ್ಟಪಡಿಸಿಕೊಂಡುದುದರಿಂದಲೂ ಆಯಿತೆಂದು ತಿಳಿಯಬೇಕು. ನಮ್ಮ ನಾಡಿನಲ್ಲಿ ಸ್ಥಾನಿಕರ ಇತಿಹಾಸವನ್ನು ಸೂಕ್ಷ್ಮವಾಗಿ ಜನತೆಯ ಅವಗಾಹನೆಯ ಬಗ್ಗೆ ಹಾಗೂ ವಿಮರ್ಶೆ ಬಗ್ಗೆ ಈ ಕೆಳಗಿನಂತೆ ಕೊಡಲು ಇಚ್ಛಿಸುತ್ತೇನೆ. ಚಾರಿತ್ರಿಕ ಸತ್ಯ ಸಂಗತಿಯನ್ನು ತಿಳಿಯುವುದರಿಂದ ತಪ್ಪು ಅಭಿಪ್ರಾಯಗಳನ್ನು ನೀಗಿಸಿ, ಸರಿದಾರಿಯಲ್ಲಿ ಮುನ್ನಡೆಯಲು ಆಸ್ಪದ ದೊರೆಯುತ್ತದೆ.

ಸ್ಥಾನಿಕ ಬ್ರಾಹ್ಮಣರನ್ನು ತುಳುವದ ಆರ್ಯೀಕರಣದ ಪ್ರಥಮ ಪ್ರವರ್ತಕರೆಂದು ಹೇಳಬಹುದು. ಸ್ಥಾನಿಕ ಬ್ರಾಹ್ಮಣರೆಂದರೆ ಸ್ಥೂಲವಾಗಿ ಹೇಳುವುದಾದರೆ, ಸ್ಥಳದ ಬ್ರಾಹ್ಮಣರೆಂದು ಅರ್ಥವಲ್ಲದೆ, ಸ್ಥಾನಿಕ ಶಬ್ದವು ಜಾತಿವಾಚಕವಲ್ಲ. ಈ ವಿಷಯವನ್ನು ಹಿಂದೆ ನಿಷ್ಕರ್ಷಿಸಿದೆ. ಕಾಲಕ್ರಮೇಣ ಅಹಿಚ್ಛತ್ರದಿಂದ ಬಂದ ಬ್ರಾಹ್ಮಣರು ಸ್ಥಳದ ಬ್ರಾಹ್ಮಣರನ್ನು ಸ್ಥಾನಿಕ ಬ್ರಾಹ್ಮಣರೆಂದು ಕರೆದರು. ನಮ್ಮ ತುಳುವದಲ್ಲಿ ಹೊರಗಿನಿಂದ ಬಂದವರು ತಾವು ನಿಂತ ಸ್ಥಳದ (ಗ್ರಾಮದ) ಹೆಸರನ್ನು ಇಟ್ಟುಕೊಂಡರು. ಸ್ಥಳವಂದಿಕರಿಗೆ ಸ್ಥಳ ಸೂಚಕ ಹೆಸರಿರಲು ಕಾರಣ ಅವರು ಇತ್ತಲಾಗಿ ಎಂದರೆ 11ನೇ ಶತಮಾನದಲ್ಲಿ ಬಂದು ನೆಲೆಸಿದವರಲ್ಲ. ಬ್ರಾಹ್ಮಣರ ಮೂರನೆಯ ವಲಸೆಯ ಪರಿಣಾಮವಾಗಿ ಬಂದು ನೆಲೆನಿಂತವರು. ತಾವು ಪ್ರಥಮ ನಿಂತ ಸ್ಥಳಗಳ ಹೆಸರನ್ನು ಇಟ್ಟುಕೊಂಡರು. ಹೀಗೆ ಕೋಟದವರು, ಶಿವಳ್ಳಿಯವರು, ಕಂದಾವರದವರು, ಪಂಚ ಗ್ರಾಮದವರು ಇತ್ಯಾದಿ ಹೆಸರು ಬಂತು. ಇತರ ದ್ರಾವಿಡ ದೇಶಗಳಾದ ತಮಿಳು, ತೆಲುಗು ದೇಶದ ಬ್ರಾಹ್ಮಣರಲ್ಲಿ ಅಯ್ಯರ್, ಅಯ್ಯಗಾರು,

ಅಯ್ಯಡು ಎಂದಿರುವಂತೆ ಸ್ಥಾನಿಕರಲ್ಲಿ ಅಯ್ಯನೆಂಬ ಹೆಸರೇ ಹೆಚ್ಚಿರುವುದು. ಕೆಲವರಿಗೆ ಅವರ ಉದ್ಯೋಗ ಸೂಚಕವಾದ ಹೆಬ್ಬಾರ, ಶಾಸ್ತ್ರಿ, ಶರ್ಮ, ಭಟ್ಟ, ಉಪಾಧ್ಯಾಯ, ಅಧಿಕಾರಿ ಎಂಬ ಹೆಸರುಗಳೂ ಇವೆ. ಶಿವಳ್ಳಿಯವರಲ್ಲಿ ಇದ್ದಂತೆ ತ್ತಾಯ, ಲ್ಲಾಯ, ನಾಯ, ರಾಯ ಇತ್ಯಾದಿ ಹೆಸರುಗಳಿಲ್ಲ.

ಸ್ಥಾನಿಕ ಎಂಬುದಕ್ಕೆ ನ್ಯಾಯದ ಪರವಾಗಿ ತನಿಕೆ ನಡೆಸಿ ನ್ಯಾಯತೀರ್ಮಾನವನ್ನು ಮಾಡುವವನೆಂಬ ಅರ್ಥವೂ ಇದೆ. ಮುಂಚಿನ ಕಾಲದಲ್ಲಿ ಎಲ್ಲರಿಗೂ ನ್ಯಾಯಾಸ್ಥಾನವು ದೇವಾಲಯವಾಗಿತ್ತು. ಆ ದೇವಸ್ಥಾನದ ಅಧಿಕಾರಿಯೇ ಸ್ಥಾನಿಕನು. ಪ್ರತಿ ಗ್ರಾಮದಲ್ಲೂ (ಈಗಿನ 3—4 ಗ್ರಾಮಗಳು ಸೇರಿ ಒಂದು ಗ್ರಾಮ) ಒಂದೊಂದು ದೇವಸ್ಥಾನವಿದ್ದು, ಅಲ್ಲಿ ಗ್ರಾಮಸ್ಥರ ನ್ಯಾಯವನ್ನು ದೇವಸ್ಥಾನದ ನಡೆಯಲ್ಲಿ ಸತ್ಯ ಹೇಳಿಸಿ ದೇವಳದ ಸ್ಥಾನಿಕನು ಕೊಡುವವನಾಗಿದ್ದನು. ಆದುದರಿಂದ ಶಾಸನಾದಿಗಳಲ್ಲಿ ದೇವರ ಸ್ಥಾನಿಕ ಎಂದಿರುವುದು ಮಾತ್ರವಲ್ಲದೆ ಗ್ರಾಮದ ಸ್ಥಾನಿಕ ಪಟ್ಟಣದ ಸ್ಥಾನಿಕ ಎಂದು ಕಂಡುಬರುವುದೂ ಗಣನೀಯವಾಗಿದೆ. ಈಗ ನ್ಯಾಯಾಲಯಗಳಲ್ಲಿ ಅಂತಸ್ತುಗಳಿದ್ದಂತೆ, ಹಿಂದೆ ಗ್ರಾಮ ದೇವಸ್ಥಾನ, ಸೀಮೆ ದೇವಸ್ಥಾನ, ಮಂಡಲ ದೇವಸ್ಥಾನಗಳೆಂದು ಇದ್ದುವು. ಇವುಗಳಲ್ಲಿ ನ್ಯಾಯ ತೀರ್ಮಾನಿಸುವ ಅಧಿಕಾರಿಯು ಸ್ಥಾನಿಕನು. ಈ ಸ್ಥಳಗಳಲ್ಲಿ ತೀರ್ಮಾನವಾಗದಲೇವಾದೇವಿಯು ಅರಸನ ಸ್ಥಾನಕ್ಕೆ ಒಯ್ಯಲ್ಪಡುತ್ತಿತ್ತು. The Third Dynasty of Vijayanagar by Venkatramana ಎಂಬ ಪುಸ್ತಕದಲ್ಲಿ ತಿಳಿಸುವಂತೆ ವಿಜಯನಗರವು ಮುಸಲ್ಮಾನರಿಂದ ಆಕ್ರಮಿಸಲ್ಪಡುವ ಕಾಲದಲ್ಲಿ ದೇವಾಲಯದ ಎಲ್ಲಾ ಹಕ್ಕುಗಳನ್ನು ಸ್ಥಾನಿಕ ಬ್ರಾಹ್ಮಣರಿಗೆ ಬಿಟ್ಟು ಕೊಡಲಾಗಿವೆ ಎಂದು ತಿಳಿದು ಬರುತ್ತದೆ

ನಮ್ಮ ನಾಡಿನಲ್ಲಿ ಶಿವ ಬ್ರಾಹ್ಮಣರೂ ಸ್ಥಾನಿಕರೂ ಬೇರೆ ಬೇರೆ ಪಂಗಡವಲ್ಲ. ಸ್ಥಾನಿಕರೇ ಶಿವಬ್ರಾಹ್ಮಣರು. ಸ್ಥಾನಿಕರಿಗೆ ಶಿವಬ್ರಾಹ್ಮಣರೆಂಬ ಹೆಸರು ಹೇಗೆ ಬಂತು ಮತ್ತು ಏಕೆ, ಯಾವಾಗ ಬಂತು ಎಂಬ ಪ್ರಶ್ನೆಯನ್ನು ಉತ್ತರಿಸುವುದು ಉಚಿತ.

ಸ್ಥಾನಿಕವೆಂಬುದು ಜಾತಿವಾಚಕವಲ್ಲ ಎಂಬ ವಿಚಾರ ಈ ಮೊದಲೇ ಹೇಳಿದೆ. ಸ್ಥಾನಿಕ ಯಾ ಶಿವಬ್ರಾಹ್ಮಣರಿಗೆ ಮೂಲಸ್ಥಳವು ಸುಬ್ರಹ್ಮಣ್ಯವೇ ಆಗಿತ್ತು. ಆದುದರಿಂದ ಇವರಿಗೆ ಸುಬ್ರಹ್ಮಣ್ಯ ಸ್ಥಾನಿಕರೆಂದು ಹೆಸರು. ಈ ಸ್ಥಾನಿಕರು ಅನಾದಿಯಿಂದಲೂ ಶ್ರೀ ಶ್ರಿಂಗೇರಿ ಜಗದ್ಗುರು ಸಂಸ್ಥಾನದ ಶಿಷ್ಯರು. ಈ ಕನ್ನಡ ಜಿಲ್ಲೆಯ ಈ ಸ್ಥಾನಿಕರಿಗೂ, ಇತರರಿಗೂ ಶೃಂಗೇರಿಯ ಶಾಖಾ ಮಠವಿರುವುದು. ಶ್ರೀ ಸುಬ್ರಹ್ಮಣ್ಯದಲ್ಲಿ ಅದು ಈಗಲೂ ಇದೆ. ಈ ಸ್ಥಳೀಯ ಸ್ಥಾನಿಕ ಬ್ರಾಹ್ಮಣರು ಶೃಂಗೇರಿಯ ಆಚಾರ ವಿಚಾರಾಧಿಕಾರಿಗಳ ಕಡೆಯಿಂದ ಮಠ

ಮುದ್ರಾಧಿಕಾರಿಗಳಾಗಿದ್ದರು. ಅಲ್ಲದೆ ಶ್ರೀ ಸುಬ್ರಹ್ಮಣ್ಯ ದೇವರನ್ನು ಪೂಜಿಸಿಕೊಂಡು ದೇವಳದ ಅಧಿಕಾರವನ್ನು ನಡೆಸಿಕೊಂಡಿದ್ದರು. ಇವರ ಅಧಿಕಾರ ಸಾಧಾರಣ ಕ್ರಿ. ಶ. 1843ರ ನಂತರ ಹೆಚ್ಚಿನ ಅಂಶ ಮಾಧ್ವರ ಪಾಲಾಯಿತು. ಕ್ರಿ. ಶ. 1817ರ ವರೆಗೆ ಪೂರ್ಣ ಇವರ ಕೈಯಲ್ಲೇ ಇದ್ದು ಅನಂತರ ರೆಗ್ಯುಲೇಟಿಂಗ್ ಆಕ್ಟು ಪ್ರಕಾರ ಆಡಳಿತೆಯನ್ನು ಸರ್ಕಾರ ವಹಿಸಿಕೊಂಡು 1843ರ ವರೆಗೆ ಇವರನ್ನೇ ಆಡಳಿತೆ ಮುಕ್ತೇಸರರನ್ನಾಗಿ (Trustee) ಮಾಡಿತ್ತು. ಆಕಾಲದಲ್ಲಿ ಆಡಳಿತೆದಾರರೂ, ದೇವಳದ ಮೂಲಸ್ಥಾಪಕರೂ ಆದ ಸ್ಥಾನಿಕ ಹೆಬ್ಬಾರರು ಒಬ್ಬ ಮುತ್ಸದ್ಧಿಯಾ ಮೆನೆಜರರನ್ನು ಇಟ್ಟುಕೊಂಡು ಸರ್ಕಾರಕ್ಕೆ ಲೆಕ್ಕ ಪತ್ರಗಳನ್ನು ಕಳುಹಿಸುತ್ತಿದ್ದರು. ಆಗ ಸುಬ್ರಹ್ಮಣ್ಯಕ್ಕೆ ಬಂಟ್ವಾಳ ತಾಲೂಕಿನ ತಹಶಿಲ್ದಾರರೇ ಅಧಿಕಾರಿಗಳಾಗಿದ್ದರೆಂದು ತಿಳಿದು ಬರುತ್ತದೆ. ಈ ಹೆಬ್ಬಾರರ ಆಡಳಿತೆ ಸಮಯದಲ್ಲಿ 'ಮರೋಜ'ರೆಂಬವರೇ ಅರ್ಚಕರಾಗಿದ್ದರು. ಮೊರೋಜ ಎಂಬ ಪದಕ್ಕೆ ಮಯೂರ ವಾಹನನ ಅರ್ಚಕವೆಂದರ್ಥ (ಮೊರ—ಮಯೂರ; ಓಜ—ಆಚಾರ್ಯ) ಈ ಅರ್ಚಕರ ಮೂಲ ಸುಬ್ರಹ್ಮಣ್ಯಕ್ಕೆ ಹತ್ತು ಮೈಲು ದೂರದಲ್ಲಿರುವ ಬಳಪ (ಬಳ್ಪ) ಎಂಬ ಗ್ರಾಮದಲ್ಲಿಯಾಗಿತ್ತು. ಇಲ್ಲಿ ಕೂಡ ಇವರಿಗೆ ಶ್ರೀ ದುರ್ಗಾಪರಮೇಶ್ವರೀ ದೇವಳದ ಅರ್ಚಕತನವಿದೆ. ಅದು ಈಗಲೂ ಇದೆ. ಅದಕ್ಕೆ ಸರಕಾರದಿಂದ 120 ರೂಪಾಯಿ ತಸದೀಕು ಇದೆ. ಈ ಮೊರೋಜ ಅರ್ಚಕತನವು ಸಾಧಾರಣ ಕ್ರಿ. ಶ. 1820ರಲ್ಲಿ ಹೋಗಿರಬಹುದು ಎಂದು ತಿಳಿದುಬರುತ್ತದೆ.

ಸ್ಥಾನಿಕ ಬ್ರಾಹ್ಮಣರಿಗೆ ಶಿವ ಬ್ರಾಹ್ಮಣರೆಂಬ ಹೆಸರು ಹೇಗೆ, ಯಾವಾಗ ಏಕೆ ಬಂತು? ಹಿಂದಿನಿಂದ ಕನ್ನಡ ಜಿಲ್ಲೆಯ ಎಲ್ಲಾ ಶಿವ ಸಂಬಂಧವಾದ, ದುರ್ಗಾ, ಗಣಪತಿ, ಸುಬ್ರಹ್ಮಣ್ಯ ದೇವಾಲಯಗಳು ಹಾಗೂ ವಿಷ್ಣು ದೇವಾಲಯಗಳು ಕೂಡಾ ಸ್ಥಾನಿಕರ ಆಡಳಿತೆ ಮತ್ತು ಪೂಜೆಯಲ್ಲಿದ್ದುವು. ಹೊಸತಾಗಿ ಬಂದ ಬ್ರಾಹ್ಮಣ ಪಂಗಡಗಳು ಆಯಾಯ ಗ್ರಾಮಗಳಲ್ಲಿ ನೆಲಸಿ, ಕ್ರಮೇಣ ತಮ್ಮ ಜನಸಂಖ್ಯೆಯು ಹೆಚ್ಚಿದಂತೆ ಸ್ಥಾನಿಕ ಬ್ರಾಹ್ಮಣರಿಂದ, ಅವರ ಅಧಿಕ ಸಂಪಾದನೆಯುಳ್ಳ ದೇವಾಲಯಗಳಲ್ಲಿ ಪೂಜೆ ಮಾಡುವ ಉದ್ಯೋಗವನ್ನು ಸಂಬಳಕ್ಕೆ ವಹಿಸಿಕೊಂಡವು. ದೇವಳದಲ್ಲಿ ವರ್ಷ ಕಳೆದಂತೆ ಸ್ಥಾನಿಕರಲ್ಲದ ಬ್ರಾಹ್ಮಣರ ವರ್ಚಸ್ಸು ಬೆಳೆಯಿತು. ದೇವಸ್ಥಾನಗಳಿಗೆ ನೈವೇದ್ಯಕ್ಕೆ ಅಕ್ಕಿ ಮತ್ತು ಪೂಜಾದಿ ಸಲಕರಣೆಗಳನ್ನು ಒದಗಿಸಿಕೊಡುತ್ತಿದ್ದ ಅಧಿಕಾರಿಯಾದ ಸ್ಥಾನಿಕರೂ ಅವರ ಮನೆಯವರೂ ಪ್ರಾಮುಖ್ಯತೆಯನ್ನು ಕಳಕೊಂಡವರಾಗಿ ಕ್ರಮೇಣ, ದೇವಳದ ಪಾರಾಳಿತನದ ಕೆಲಸ ಅವರ ಪಾಲಿಗೆ ಉಳಿಯಿತು. ಈ ಸ್ಥಾನಚ್ಯುತಿಯ ಪರಿಣಾಮವಾಗಿ ಹಲವಾರು ಸ್ಥಾನಿಕ ಕುಟುಂಬಗಳು ದೇವಳದ ಸಂಪರ್ಕಗಳನ್ನು ಸಂಪೂರ್ಣವಾಗಿ ಕಡಿದುಕೊಂಡುವು.

ಆಗ ದೇವಸ್ಥಾನಕ್ಕೆ ಪರಿಚಾರಕರು ಅವಶ್ಯವಿದ್ದುದರಿಂದ, ಮಲೆಯಾಳದಿಂದ ನಂಬೀಶರನ್ನೂ, ಇಲ್ಲಿಯ ಮಾಲೆಯವರನ್ನೂ ಆ ಸ್ಥಳದಲ್ಲಿ ಇರಿಸಿ, ಅವರಿಗೂ ಸ್ಥಾನಿಕರೆಂಬ ಹೆಸರಿಟ್ಟು ಕರೆವದುಂಟು. ಇದು ಸುಮಾರು ಹತ್ತೊಂಭತ್ತನೆಯ ಶತಮಾನದಲ್ಲಿ ನಡೆಯಿತು. ಆಗ ಕೆಲವು ಸ್ಥಾನಿಕರ ಮುಖ್ಯಸ್ಥರು ಒಟ್ಟು ಸೇರಿ ತಾವು ಸ್ಮಾರ್ತಶೈವರಾದುದರಿಂದಲೂ, ಶೈವ ದೇವಾಲಯದ ಅರ್ಚಕರಿಗೆ ಸನತ್ಕುಮಾರ ಸಂಹಿತೆಯಲ್ಲಿ ಹೇಳಲ್ಪಟ್ಟ ಶಿವದ್ವಿಜ ಯಾ ಶಿವ ಬ್ರಾಹ್ಮಣರೆಂಬ ಹೆಸರನ್ನು ಇಟ್ಟುಕೊಂಡರು. ಆ ವರೆಗೆ ಸ್ಥಾನಿಕ ಬ್ರಾಹ್ಮಣರಿಗೆ ತಮ್ಮ ಉದ್ಯೋಗ ವಾಚಕ ಹೆಸರಿರಲಿಲ್ಲ. ಈ ಸನತ್ಕುಮಾರ ಸಂಹಿತೆಯಲ್ಲಿ ಸುಬ್ರಹ್ಮಣ್ಯವೇ ಇವರ ಮೂಲ ಅಧಿಕಾರ ಸ್ಥಳವೆಂದು ತಿಳಿದುಬರುತ್ತದೆ. ಸನತ್ಕುಮಾರ ಸಂಹಿತೆಯಲ್ಲಿ ಶಿವಸಂಬಂಧದ ದೇವಳದ ಅರ್ಚಕರನ್ನು ಶಿವದ್ವಿಜರೆಂದು ಹೇಳಲ್ಪಟ್ಟಿದೆ. ಈ ಸ್ಥಾನಿಕ ಯಾ ಶಿವ ಬ್ರಾಹ್ಮಣರಿಗೆ ಸುಬ್ರಹ್ಮಣ್ಯದಲ್ಲಿ ಶೃಂಗೇರಿ ಶಾಖಾಮಠವಿದ್ದು ಅದು ದೇವಳದ ಆಡಳಿತೆಯಲ್ಲಿರುವುದು. ದೇವಳವು ಬಹಳ ಹಿಂದಿನಕಾಲದಿಂದ ಸ್ಥಾನಿಕ ಹೆಬ್ಬಾರರ ಆಡಳಿತೆಯಲ್ಲಿದ್ದು ಅಲ್ಲಿ ಮಡಿಗೆ ಸ್ನಾನಮಾಡಿ ಗರ್ಭಗೃಹದವರೆಗೆ ಒಳಹೊಕ್ಕುವ ಅಧಿಕಾರ ಈಗಲೂ ಸ್ಥಾನಿಕನಿಗೆ ಇರುವುದು, ದೇವಳದಲ್ಲಿ ಈಗಲೂ ಹೊಸ್ತಾರೋಗಣೆ ದಿವಸ ಮಹಾಪೂಜೆಗೆ ಮುಂಚೆ 'ಚಪ್ಪೆ ಬ್ರಹ್ಮಭೋಜನ' ಇರುವುದು— ಇತ್ಯಾದಿಗಳಿಂದ ಸ್ಥಾನಿಕರು ಶೃಂಗೇರಿ ಮಠದ ಶಿಷ್ಯರೆಂದೂ, ಸುಬ್ರಹ್ಮಣ್ಯವು ಇವರ ಮೂಲ ಸ್ಥಾನವೆಂದೂ ಖಚಿತವಾಗುತ್ತದೆ. ಸ್ಥಾನಿಕರಿಗೆ ಅನಾದಿಯಲ್ಲಿ ದೇವಳದ ಅರ್ಚಕತನವಿತ್ತು ಎಂಬುದಕ್ಕೆ ಇವರಲ್ಲಿ ನಟ್ಟೋಜ ಮತ್ತು ಮೊರೋಜ ಎಂಬ ಮನೆತನದವರು ಈಗಲೂ ಇರುವುದು ಸಾಕ್ಷಿಯಾಗಿದೆ. (ನಟ್ಟೋಜ ಎಂದರೆ ಪ್ರತಿಷ್ಠಾಪನಾಚಾರ್ಯ; ಮೊರೋಜ ಮಯೂರದ ಆಚಾರ್ಯ ಮಯೂರವಾಹನನ ಅರ್ಚಕ- ಎಂಬ ಅರ್ಥವಿದೆ. (ನಟ್ಟೋಜರು ಪೊಳಲಿ ಮತ್ತು ಪುತ್ತೂರು ದೇವಸ್ಥಾನಗಳ ಸ್ಥಾಪಕರೂ ಆಗಿರುತ್ತಾರೆ.)

ನಮ್ಮ ನಾಡಿನ ಸ್ಥಾನಿಕರ ಪೂಜೆಯಲ್ಲಿ ಸರಕಾರಿ ತಸದೀಕು ಇರುವ ಪ್ರಾಮುಖ್ಯವಾದ ಕೆಲವು ದೇವಳಗಳ ಹೆಸರುಗಳನ್ನು ಕೆಳಗೆ ಕೊಟ್ಟಿದ್ದೇನೆ.

1. ಸುಬ್ರಹ್ಮಣ್ಯಕ್ಕೆ ಹತ್ತಿರವಿರುವ ಬಹಳ ಹಳೆಗಾಲದ ಶಿಲೆಯಿಂದ ಮುಚ್ಚಿದ ದುರ್ಗಾಪರಮೇಶ್ವರಿ ದೇವಸ್ಥಾನ (ರೂಪಾಯಿ 120 ತಸದೀಕು) ಇದು ಸುಬ್ರಹ್ಮಣ್ಯದ ಅನಾದಿ ಅರ್ಚಕರಾದ ಮೊರೋಜರ ಅರ್ಚಕತನದಲ್ಲಿ ಇದೆ.

2. ಸುಳ್ಯದ ಹತ್ತಿರವಿರುವ ತುದಿಯಡ್ಕ ಸದಾಶಿವ ದೇವಸ್ಥಾನ (ರೂಪಾಯಿ 36 ತಸದೀಕು)

3. ಕಾರ್ಕಳ ತಾಲೂಕು ಕೊಕ್ಕರಾಡಿ ಸುಬ್ರಹ್ಮಣ್ಯ ದೇವಸ್ಥಾನ (ರೂಪ್ಯಾ 28 ತಸದೀಕು.)

4. ಬಟ್ರಪಾಡಿ (ಪುತ್ತೂರು ತಾಲೂಕು) ವಿಷ್ಣುಮೂರ್ತಿ ದೇವಸ್ಥಾನ (ರೂಪ್ಯಾ 33 ತಸದೀಕು.)

5. ಬಂಗಾಡಿ ಪಂಚಲಿಂಗ ದೇವಸ್ಥಾನ (ಬೆಳ್ತಂಗಡಿ ತಾಲೂಕು) 36 ರೂಪ್ಯಾ ತಸದೀಕು.

6. ನೆಟ್ಲ ವೆಂಕಟ್ರಮಣ ಮಠ ಯಾ ದೇವಸ್ಥಾನ (ರೂಪ್ಯಾ40 ತಸದೀಕು)

7. ಕಜಕ್ಕಾರು (ಕಾರ್ಕಳ ತಾಲೂಕು)ಷಣ್ಮುಖ ದೇವಸ್ಥಾನ ರೂ 3-9-7 ತಸದೀಕು.)

8. ಕಜಕ್ಕಾರ ವಿನಾಯಕ ದೇವಸ್ಥಾನ (ರೂ. 8-10-0 ರ ತಸದೀಕು.

9 ಮತ್ತು 10 ಪೊಳಲಿಯ ಹತ್ತಿರ ಅಮ್ಮುಣಜೆಯಲ್ಲಿ ಎರಡು ದೇವಳಗಳು.

ನಿಜವಾಗಿ ಸ್ಥಾನಿಕರು ಯಾ ಶಿವಬ್ರಾಹ್ಮಣರು ಅರ್ಚಕರಾಗದೇ ಇರುತ್ತಿದ್ದರೆ ಈ ಪುರಾತನವಾದ ತಸದೀಕಿನ ದೇವಾಲಯಗಳು ಹೇಗೆ ಅವರ ಪೂಜೆಯಲ್ಲಿ ಉಳಿದುವು? ಈ ದೇವಾಲಯಗಳ ಪೈಕಿ ಬಳ್ಪ ರಾಜರಾಜೇಶ್ವರೀ ದೇವಳದ ಅರ್ಚಕತನವು ಮಧ್ಯೆ 9 ವರ್ಷಕಾಲ ಶಿವಳ್ಳಿಯವರ ಪೂಜೆಯಲ್ಲಿ ಇತ್ತು. ಇನ್ನೊಂದು ಸ್ವಾರಸ್ಯದ ಸಂಗತಿ ಇದೆ. ಕೊಕ್ಕರಾಡಿ ದೇವಸ್ಥಾನದ ಹತ್ತಿರವಿರುವ ಶಿವಾಲಯದ ಅರ್ಚಕತನವನ್ನು ಆ ದೇಗುಲದ ಸಮೀಪ ಮನೆಇರುವ ಅರ್ಚಕರು ವಹಿಸಿಕೊಂಡು ತಮಗೆ ದೂರವಿರುವ ಸುಬ್ರಹ್ಮಣ್ಯ ದೇವಳದ ಅರ್ಚಕತನವನ್ನು ಬಿಟ್ಟು ಕೊಟ್ಟದು. ಈ ರೀತಿ ಅರ್ಚಕತನವು ಅದಲಿ ಬದಲಿಯಾದುದು ಸ್ಥಾನಿಕರ ಬ್ರಾಹ್ಮಣ್ಯವನ್ನೂ, ಅವರಿಗೂ ಇತರ ಬ್ರಾಹ್ಮಣರಿಗೂ ಇದ್ದ ಸಮಾನತೆಯನ್ನೂ ಅಭೇದವನ್ನೂ ಸೂಚಿಸುವಂತದ್ದಾಗಿದೆ. ಪೊಳಲಿಯ ಹತ್ತಿರವಿರುವ ಎರಡು ದೇವಾಲಯಗಳಲ್ಲಿ ಸ್ಥಾನಿಕರೂ ಕೋಟದವರೂ ಜೊತೆಯಲ್ಲಿ ಪೂಜೆ ನಡೆಸುತ್ತಾರೆ.ದೇವಳದ ಪೂಜೆ ಸ್ಥಾನಿಕರದ್ದು,ಅವರ ಅಸಾನುಕೂಲದ ಸಮಯದಲ್ಲಿ ಪೂಜೆಯನ್ನು ಕೋಟದವರು ಮಾಡುತ್ತಾರೆ.ಇದರಿಂದ ಅವರೊಳಗೆ ವಿಶೇಷ ತಾರತಮ್ಯವಿದ್ದಿಲ್ಲವೆಂಬ ಅಭಿಪ್ರಾಯ ಕಂಡು ಬರುತ್ತದೆ.

ದಕ್ಷಿಣಕನ್ನಡ ಜಿಲ್ಲೆಯ ದೇವಾಲಯಗಳು ಬಹಳ ಹಿಂದಿನ ಕಾಲದಿಂದ ಸ್ಥಾನಿಕ ಯಾ ಶಿವಬ್ರಾಹ್ಮಣರ ಅರ್ಚಕತನದಲ್ಲಿತ್ತೆಂಬುವದಕ್ಕೆ ಇನ್ನೂ ಕೆಲವು ಆಧಾರಗಳಿವೆ. ಪಶ್ಚಿಮಂಟಿಗೆ ಮುಂಚಿನ ಮೂಲವರ್ಗಗಳ ಪರಿಶೀಲನೆಯನ್ನು ಮಾಡಿದರೆ ಕನ್ನಡ ಜಿಲ್ಲೆಯ ಹೆಚ್ಚಿನ ದೇವಾಲಯಗಳು ಸ್ಥಾನಿಕರ ಮೂಲಿವರಿ ವಲ್ಲೇ ಇದ್ದುದು ಕಂಡುಬರುತ್ತದೆ. ಹಳೆದುಮ್ಮಿಖಿ ಚಿಟ್ಟಿಯನ್ನು ನೋಡಿದರೆ ಈ ವಿಷಯ ತಿಳಿದುಬರುತ್ತದೆ. ಸುಬ್ರಹ್ಮಣ್ಯ ದೇವಸ್ಥಾನ ಸ್ಥಾನಿಕ ಹೆಬ್ಬಾರರ

ಧರ್ಮಸ್ಥಳದ ವಿಚಾರವು ತಿಳಿಯಲು ಯೋಗ್ಯವಾದುದು. ಇಲ್ಲಿಯ ಆಡಳಿತೆಯು ವೈಲಕ್ಷಣ್ಯವುಳ್ಳುದಾಗಿದೆ ಧರ್ಮಸ್ಥಳದ ಮೂಲಿವರ್ಗ ದುರ್ಮುಖಿಚಿಟ್ಟೆ ಪ್ರಕಾರದ ಸ್ಥಾನಿಕ ಲಿಂಗಯ್ಯನದ್ದು. ಇಲ್ಲಿ ಮಂಜುನಾಥೇಶ್ವರ ಹಿಂಗೂ ದೇವಾಲಯ. ಇಲ್ಲಿಯ ಮುಕ್ತೇಸರರು ಜೈನ ಹೆಗ್ಗಡೆಯವರು. ಪೂಜೆಯು ಮಾಧ್ವ ಶಿವಳ್ಳಿಯವರ ಕೈಯಲ್ಲಿದೆ. ಈಗಲೂ ಧರ್ಮಸ್ಥಳದಲ್ಲಿ ದೇವಳಕ್ಕೆ ಸಂಬಂಧಿಸಿದ ನಾಲ್ಕು ಹೆಗ್ಗಡೆಗಳಿದ್ದಾರೆ. ಜೈನರಲ್ಲಿ ಒಬ್ಬರು (ಮುಖ್ಯ ಆಡಳಿತದಾರರು), ಸ್ಥಾನಿಕರಲ್ಲಿ ಒಬ್ಬರು, ಶಿವಳ್ಳಿಯವರಲ್ಲಿ ಒಬ್ಬರು ಮತ್ತು ಬಂಟರಲ್ಲಿ ಒಬ್ಬರು. ಅಲ್ಲಿಯ ಸ್ಥಾನಿಕ ಹೆಗ್ಗಡೆಯು ಜೈನಹೆಗ್ಗಡೆಯಂತೆ ರುಮಾಲುಕಟ್ಟಬೇಕು. ಇವರಿಗೆ ದೇಲಂಪಾಡಿ ಎಂಬ ಹೆಸರಿದೆ. ಇವರು ಭಕ್ತರಿಂದ ಹಣ್ಣುಕಾಯಿ ತೆಗೆದುಕೊಂಡು, ಅವರ ಹಾಲಾವಲೆಯನ್ನು ಮುಖ್ಯ ಜೈನ ಹೆಗ್ಗಡೆಯವರಿಗೆ ಹೇಳಿ, ಅವರ ತೀರ್ಪನ್ನು ಭಕ್ತರಿಗೆ ತಿಳಿಸಿಅವರಿಂದ ಕಾಣಿಕೆ ಹಾಕಿಸಿ, ಪ್ರಸಾದವನ್ನು ಅರ್ಚಕರಿಂದ ತೆಗೆದುಕೊಂಡು ಬಂದು ಭಕ್ತರಿಗೆ ಒಳ್ಳೆತನವನ್ನು ಬಯಸುವುದು. ಇದರಿಂದ ತಿಳಿಯಬಹುದಾದ ವಿಷಯವೇನೆಂದರೆ ಧರ್ಮಸ್ಥಳವು ಒಂದು ಕಾಲದಲ್ಲಿ ಸ್ಥಾನಿಕರದ್ದೆ ಆಗಿತ್ತೆಂಬುದು. ಇಲ್ಲಿಯ ಮುಂಚಿನ ಸ್ಥಳವಂದಿಗರು ಪೂತ್ತೂರು ನಟ್ಟೋಜ ಮನೆತನದವರಾಗಿರಬೇಕು. ಇಲ್ಲಿಯವರಿಗೂ, ನಟ್ಟೋಜರಿಗೂ ಭಿನ್ನಾಭಿಪ್ರಾಯದಿಂದ ದೇವರ ಮೇಲಿನ 'ಆಣೆ' ಇದ್ದುದರಿಂದ ಈಗಲೂ ಧರ್ಮಸ್ಥಳಕ್ಕೆ ನಟ್ಟೋಜಮನೆಯವರು ಹೋಗುವುದಿಲ್ಲವೆಂದಿದೆ.

ಟಿಪ್ಪುವಿಗೆ ವಿರೋಧವಾಗಿ ಬ್ರಿಟಿಷರಿಗೆ ಸಹಾಯವಿತ್ತ ಕುಮಾರ ಹೆಗ್ಗಡೆ ಎಂಬವನಿಗೆ ಬ್ರಿಟಿಷರು ಇಲ್ಲಿಯ ಆಡಳಿತೆಯನು ಬಿಟ್ಟದ್ದಾಗಿ ತಿಳಿದು ಬರುತ್ತದೆ. ಈ ಸ್ಥಳಕ್ಕೆ ಹಿಂದಿನ ಹೆಸರು ಕುಡುಮವೆಂದು. ಈ ಧರ್ಮಸ್ಥಳದ ಮೂಲಿಗರ ಒಂದು ಪಾಲಿನವರು ಮಂಗಳೂರಿನ ಕದಳಿವನ ಅಂದರೆ ಈಗಿನ ಕದ್ರಿ ಎಂಬಲ್ಲಿ ನೆಲೆಸಿ ಇಲ್ಲಿ ಮಂಜುನಾಥೇಶ್ವರನನ್ನು ಪ್ರತಿಷ್ಠಿಸಿದರು ಎಂಬ ಪ್ರತೀತಿ.

ಸ್ಥಾನಿಕರ ಯಾ ತುಳುಶಿವಬ್ರಾಹ್ಮಣರ ಸಂಖ್ಯೆ ಇತರಬ್ರಾಹ್ಮಣರಾದ ಅಹಿಚ್ಛತ್ರ ಬ್ರಾಹ್ಮಣರಿಗಿಂತ ಕಡಿಮೆ ಆದುದರಿಂದ ಸ್ಥಾನಿಕರ ಅರ್ಚಕತನವು ಹೆಚ್ಚಿನ ದೇವಾಲಯಗಳಲ್ಲಿ ತಪ್ಪಿಹೋಯಿತು. ಇದರಿಂದ ಪೂಜೆಯು ಕೋಟ, ಶಿವಳ್ಳಿಯವರ ವಶವಾಯಿತು. ಬ್ರಾಹ್ಮಣೇತರರ ಮಟ್ಟಿಗೆ ಅರ್ಚಕ ಪರಿಚಾರಕರೆಂಬ ಕರ್ತವ್ಯದಲ್ಲಿ ಭೇದ ಕಂಡು ಮೇಲು ಕೀಳೆಂಬ ಭಾವನೆ ಉತ್ಪನ್ನವಾದುದಷ್ಟೆ ವಿನಾ ದೇವಳದಲ್ಲಿ ಕೆಲಸಮಾಡುವವರು ಎಲ್ಲರೂ ದೇವರ ಕೆಲಸದವರಾಗಿದ್ದಾರೆ. ಈ ಭಾವನೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಇದ್ದುದು ಭಿನ್ನಭಾವಕ್ಕೆ ಕಾರಣವಾಯಿತೆನ್ನಬೇಕು. ತಮಿಳು ನಾಡಿನಲ್ಲಿ ಎಂದರೆ ಚಿದಂಬರಂ, ತಿರುನಲ್ವೇಲಿ, ಮಧುರೈ ಇತ್ಯಾದಿ

ಈ ಪ್ರದೇಶಗಳಲ್ಲಿ ಸಂಬಳ ತೆಗೆದುಕೊಂಡು ಪೂಜೆ ಮಾಡುವವರು ನಿಷಿದ್ಧರು ಆಗಿದ್ದು, ದೇವಳದ ಪರಿಚಾರಕರಾಗಿರುವ ಅಯ್ಯರ್ ಬ್ರಾಹ್ಮಣರೇ ಶ್ರೇಷ್ಠರಾಗಿ ಇರುವರು. ಅಲ್ಲಿ ಅವರೇ ವೇದಾಧಿಕಾರಿಗಳಾಗಿದ್ದು ಪೂಜೆ, ಮಾಡುವವರು, ಆಗಮ ಮಾತ್ರ ಓದುವವರಾಗಿದ್ದಾರೆ. ಅಡ್ಡ, ನೀಟ, ಪಂಙ್ತಿ ಎಂಬ ವಿಚಾರ ಅಲ್ಲಿ ಯಾ ಇತರ ಯಾವ ಕಡೆಯಲ್ಲೂ ಕಂಡು ಬರುವುದಿಲ್ಲ. ಈ ಪದ್ಧತಿಯು (ಸ್ಥಾನಿಕರಿಗೆ ಅಡ್ಡ ಪಂಙ್ತಿಯೆಂಬುದು) ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಾತ್ರ ಪ್ರಚಲಿತವಿದ್ದು ಅದು ಇಲ್ಲಿನ ಬ್ರಾಹ್ಮಣ ಜಾತಿಯ ಆಂತರಿಕ ಸಂಘರ್ಷಗಳ ಪರಿಣಾಮವೆನ್ನಬಹುದು. ಆದರೆ ಹವಿಕರು ಮಾತ್ರ ಸ್ಥಾನಿಕರ ದೇವಳವನ್ನು ನಮ್ಮ ಜಿಲ್ಲೆಯ ಮಂಗಳೂರು ಪುತ್ತೂರು, ಕಾಸರಗೋಡು ಯಾ ಉಡುಪಿ ತಾಲೂಕುಗಳಲ್ಲಿ ಆಕ್ರಮಿಸಿದ್ದು ಹೆಚ್ಚು ಕಂಡು ಬರುವುದಿಲ್ಲ. ಈ ಸ್ಥಾನಿಕ ತುಳುವರ ಯಾ ಸ್ಥಾನಿಕರಲ್ಲಿ ಕನ್ನಡ ಮಾತನಾಡುವ ಕನ್ನಡಿಗರ ದೇವಾಲಯಗಳನ್ನೆ ಅಹಿಚ್ಛತ್ರದ ಬ್ರಾಹ್ಮಣರು ಆಕ್ರಮಿಸಿದ್ದರಿಂದ ಈ ಎರಡು ಗುಂಪುಗಳೊಳಗೆ ಮಾತ್ರ ವಿಶೇಷ ತಾರತಮ್ಯ ಬಂತು. ಈ ರೀತಿಯ ತಾರತಮ್ಯ ಮೊದಮೊದಲು ಹವೀಕ—ಕಾರಡ ಬ್ರಾಹ್ಮಣರ ಬಗೆಗೂ ಅನ್ವಯಿಸುತ್ತಿದ್ದು ಕ್ರಮೇಣ ಸ್ಥಾನಿಕರ ಮಟ್ಟಿಗೆ ಮಾತ್ರ ಅದು ನೆಲೆಯಾಗಿ ನಿಂತಂತೆ ಕಾಣುತ್ತದೆ.

ಪಶ್ಚಿಮ ಕರಾವಳಿಯು ಪರಶುರಾಮ ಕ್ಷೇತ್ರೇ ಎಂದು ಸಂಬೋಧಿಸಲ್ಪಟ್ಟಿದೆ. ಇದು ಸನತ್ಕುಮಾರ ಸಂಹಿತೆ ಹಾಗೂ ಬ್ರಹ್ಮಾಂಡ ಪುರಾಣಗಳಲ್ಲಿ ಉಲ್ಲೇಖಿತವಾದ ಪರಶುರಾಮ ಸೃಷ್ಟಿಯೇ ಆಗಿರಬೇಕೆಂಬುದು ನಿಶ್ಚಿತ. ಪರಶುರಾಮನ ಕಾಲವು ಸಾಧಾರಣ ತ್ರೇತಾಯುಗದಲ್ಲಿರಬೇಕು. ಈ ಪರಶುರಾಮನಿಗೂ ಈಗಿನ ಬ್ರಾಹ್ಮಣರಿಗೂ ಏನು ಸಂಬಂಧವೆಂದು ತಿಳಿಯುವುದಿಲ್ಲ. ಹಾಗಿದ್ದರೂ ಸ್ಥಳವಂದಿಕರಾದ ಸ್ಥಾನಿಕರೇ ಆ ಕಾಲದ ಇಲ್ಲಿಯ ಬ್ರಾಹ್ಮಣರಿರಬೇಕು. ಈ ಮೊದಲೇ ಕೂಲಂಕಷ ವಿಮರ್ಶೆ ಮಾಡಿದಂತೆ ಹೊಸತಾಗಿ ಬಂದ ಬ್ರಾಹ್ಮಣರು ಪ್ರಾದುರ್ಭಾವಕ್ಕೆ ಬಂದ ನಂತರ ತಮ್ಮ ಸ್ಥಾನವನ್ನು ಸ್ಥಿರ ಮಾಡಲಿಕ್ಕಾಗಲೀ, ಯೋಗ್ಯತೆ, ಖ್ಯಾತಿಗಳನ್ನು ಹೆಚ್ಚಿಸುವುದಕ್ಕಾಗಲೀ ಬೇರೆ ಬೇರೆ ನಮೂನೆಯ ಕತೆಗಳನ್ನು ಕಟ್ಟಿದಂತೆ ಕಂಡು ಬರುತ್ತದೆ.

ನಮ್ಮ ನಾಡಿನಲ್ಲಿ ಸ್ಥಾನಿಕರು ಅಪಾಂಙ್ತೀಯರಾಗಲು ಅವರು ತ್ಯಾಜ್ಯವಾದ ಶಿವನಿರ್ಮಾಲ್ಯವನ್ನು ಸೇವಿಸುವುದರಿಂದಾಗಿದೆ ಎಂಬ ಅಭಿಪ್ರಾಯವೂ ಇದೆ. ಪಾಂಚರಾತ್ರ ಆಗಮ ರೀತಿಯಲ್ಲಿ ಶಿವನಿರ್ಮಾಲ್ಯ ನಿಷಿದ್ಧವಾದರೂ, ಸ್ಮಾರ್ತಸಂಪ್ರ

ದಾಯದಲ್ಲಿ ಅ ನಿಷೇಧ ಇಲ್ಲ. ಉದಾ: ಅಥ ಶಿವ ನಿರ್ಮಾಲ್ಯ ಗ್ರಾಹ್ಯಂ (ಬೃಹಜ್ಜಾಬಾಲೋಪನಿಷದ್)

ರುದ್ರಭುಕ್ತಂ ತು ಭುಂಜಿಯಾತ್।
ರುದ್ರಪೀತಂ ಪಿಬೇತ್।
ರುದ್ರಘ್ರಾತಂ ಜಿಘ್ರೇತ್।
ರುದ್ರೇಣ ಪೀತಂ ಪಿಬೇತಿ।
ತಸ್ಮಾತ್ ನಿರ್ಮಾಲ್ಯಮೇವ ಭಕ್ಷಯಿತ।
ನಿರ್ಮಾಲ್ಯಾಮೇವ ನಿಶೇವೇತ॥

ಬಾಣಲಿಂಗೇ ಚ ಲೌಹೇಚ।
ಸಿದ್ಧಲಿಂಗೇ ಸ್ವಯಂಭುವಿ।
ಪ್ರತಿಮಾಸು ಚ ಸರ್ವಾಸು।
ನ ದೋಷೋ ಮಾಲ್ಯಧಾರಣೇ॥

ದ್ರವ್ಯಮನ್ಯಫಲಂ ತೋಯಂ ।
ಶಿವಸ್ವಂ ನ ಕ್ವಚಿತ್ ಸ್ಪಶೇತ್।
ನಿರ್ಮಲತ್ವಾಚ್ಚ (ನಿರ್ಮಾಲ್ಯ) ನೃಣಾಂ ನೈರ್ಮಲ್ಯ
ಕಾರಣಾತ್ ।

ತಿಲಶೋಡಷ ಭಾಗಂಚ ।
ತೃಣಾಗ್ನ ಅಂಬುಕಣೋಷಮಂ ।
ಪಾದೋದಕಪ್ರಸಾದಾನ್ನ ।
ಸಂಘೃಣ್ಣನ್ ಮೋಕ್ಷಮಾಪ್ನುಯಾತ್ ।

ಲಿಂಗೇ ಸ್ವಯಂ ಭವೇ ಬಾಣೇ ।
ರತ್ನಜೇ ರಸನಿರ್ಮಿತೇ।
ಸಿದ್ಧ ಪ್ರತಿಷ್ಠಿತೇ ।
ತಾಮ್ರ, ರೌಪ್ಯ, ಕಾಂಚನಲೋಹಜೇ।

ಪ್ರತಿಮಾಸು ಚ ಸರ್ವಾಸು ।
ನ ಚಂಡಾಧಿಕೃತಿರ್ಭವೇತ್ ।
ಚಂಡಾದಿಕಾರೋ ನೊ ಯತ್ರ ।
ಭೋಕ್ತವ್ಯಂ ತತ್ರಭಕ್ತಿತಃ ।

ಸ್ಮಾರ್ತ ಸಾಂಪ್ರದಾಯವನ್ನವಲಂಬಿಸಿ ಹೊರಟಿರುವ ಮೇಲಿನ ಪ್ರಮಾಣದ ಮೇರೆಗೆ ಶಿವನಿರ್ಮಾಲ್ಯ ತ್ಯಾಜ್ಯವೆಂಬುದು ಆ ಸಂಪ್ರದಾಯಕ್ಕೆ ಸಮ್ಮತವಲ್ಲ. ಕಡುವೈಷ್ಣವ ಧರ್ಮ ಪ್ರಕಾರ ವಿಷ್ಣು ವಿರಹಿತ ಶಿವ ಆರಾಧನೆ ನಿಷೇಧಿಸಲ್ಪಡುತ್ತದೆ. ಆಗಮೋಕ್ತ ಶಿವಾಲಯಗಳಲ್ಲಿ ಶಾಲಿಗ್ರಾಮವಿಟ್ಟು ಪೂಜೆ ಮಾಡುವುದು ಮೇಲೆ ಹೇಳಿದ ನಿಷೇಧದ ಬಾಧೆಯ ಪರಿಹಾರಕ್ಕಾಗಿ ರೂಢಿಗೆ ಬಂದ ಸಂಪ್ರದಾಯ. ನೈವೇದ್ಯವನ್ನು ಶಿವನಿಗೆ ಸಮರ್ಪಿಸಬೇಕೇ ವಿನಹ, ಶಾಲಿಗ್ರಾಮಕ್ಕೇ ಮೊದಲು ಸಮರ್ಪಿಸುವ ವಿಧಾನ ಆಗಮೋಕ್ತಶಿವಾಲಯಗಳಿಗೆ ಒಪ್ಪುವ ಕಾರ್ಯವಲ್ಲವೆಂಬುದು ಸ್ಥಳ ಸಂಪ್ರದಾಯವಾದಿಗಳ ದೃಷ್ಟಿಗೆ ಸರಿಹೋದೀತು. ಸ್ಥಳದ ರಿವಾಜು ಏನೇ ಇರಲಿ, ಪೂಜೆ ಮಾಡುವ ಅರ್ಚಕರು ತನ್ನ ಕುಲಸಂಪ್ರದಾಯಕ್ಕನುಸಾರವಾಗಿ ಪೂಜೆ ನಡೆಸುವುದು ಶ್ರೇಯಸ್ಕರ ಎಂಬುದು ಕುಲಸಂಪ್ರದಾಯವಾದಿಗಳ ದೃಷ್ಟಿಗೆ ಸರಿಹೋದೀತು. ಈ ಚರ್ಚೆಯ ನಿರ್ಣಯ ಹೇಗೂ ಇರಲಿ, ಶಿವ-ವಿಷ್ಣು ಎಂಬ ಹೆಸರಿನ ಎರಡು ದೇವತಾಶಕ್ತಿಗಳೊಳಗಿನ ಭೇದ ಹಾಗೂ ತಾರತಮ್ಯವನ್ನು ನಿಮಿತ್ತವಾಗಿಟ್ಟುಕೊಂಡು ಈ ಚರ್ಚೆ ಬೆಳೆದಂತಿದೆ. ಆ ಭೇದದ ಸ್ವರೂಪ ನಿರ್ವಚನ ಶಾಸ್ತ್ರ ಬಲ್ಲವರ ಪಾಲಿಗೆ ಸೇರಿದ ಕಾರ್ಯ. ಪ್ರಸ್ತುತ, ಶೈವ-ವೈಷ್ಣವ ಎಂಬ ಎರಡು ಪಂಗಡಗಳೊಳಗಣ ಚಾರಿತ್ರಿಕ ಭಿನ್ನಭಾವಕ್ಕೂ ವಿಷ್ಣು-ಶಿವರನ್ನು ಸಂಬಂಧಿಸಿದ ಶಾಸ್ತ್ರೀಯ ವಿಚಾರಗಳಿಗೂ ಪರಸ್ಪರ ಸಂಬಂಧವನ್ನು ಕಲ್ಪಿಸ ಬೇಕೇ? ಎಂಬುದನ್ನು ಇಲ್ಲಿ ನಿಶ್ಚಯಿಸಿಕೊಳ್ಳಬೇಕು. ಪ್ರಾಯಶಃ ಈ ರೀತಿಯ ಸಂಬಂಧವನ್ನು ನಾವು ಕಲ್ಪಿಸಿಕೊಳ್ಳ ಬೇಕಾಗಿಲ್ಲ. ಯಾಕೆಂದರೆ, ಶಾಸ್ತ್ರೀಯ ದೃಷ್ಟಿ ಕೋಣಕ್ಕೆ ವಿಷ್ಣು-ಶಿವ ಇವರೊಳಗೆ ಭೇದ ಕಂಡರೂ, ಅವರೊಳಗೆ ಪರಸ್ಪರ ವಿರೋಧ ಕಾಣಲಾರದು. "ಶೈವ-ವೈಷ್ಣವ" ಎಂಬ ವಿವಾದವನ್ನೊಳಗೊಂಡ ಇತಿಹಾಸದಲ್ಲಾದರೋ ದ್ವೇಷ-ವಿರೋಧಗಳದ್ದೇ ಮೇಲುಗೈಯಾದಂತಿದೆ. ಇತಿಹಾಸಕ್ಕೆ ಸಂಬಂಧಿಸಿದ ಈ ಚರ್ಚೆಯನ್ನು ಇತಿಹಾಸದ ಯಥಾರ್ಥಜ್ಞಾನದ ನೆರವಿನಿಂದಲೇ ನೀಗಿಸುವುದು ಪ್ರಾಮಾಣಿಕ ಮಾರ್ಗವಷ್ಟೆ?

# ಶಾಸನಾದಿಗಳಲ್ಲಿ ಸ್ಥಾನಿಕರು

ವಿಮರ್ಶೆಯ ಬಗ್ಗೆ ಹಾಗೂ ವಿಚಾರಕ್ಕೆ ಈ ಕೆಳಗಿನ ಶಾಸನಗಳ ಅಭಿಪ್ರಾಯ ವನ್ನು ಸ್ಥಾನಿಕರು ಚಾರಿತ್ರಿಕವಾಗಿ ಯಾವ ಸ್ಥಾನಮಾನಗಳನ್ನು ಹೊಂದಿದ್ದರು ಎಂಬುದನ್ನು ತಿಳಿಯುವುದಕ್ಕೋಸ್ಕರ ಕೊಟ್ಟಿದ್ದೇನೆ.

1. ವಿನೀತಾತ್ಮಾಚಾರ್ಯರ ಶಿಷ್ಯ ಕೋಳೂರು ನಖಾರೇಶ್ವರದೇವಳದ ಅರ್ಚಕ **ಪರಮೇಶ್ವರ ಸಾಂದೇವ ಸಾಂತಿಗ** (ಕ್ರಿ. ಶ. 815-ಸಾಂತಿಗವೆಂಬುದು ಸ್ಥಾನಿಕದ ಅಪೂರ್ವ ಪ್ರಭೇದವೆಂದು ಪರಿಗಣಿಸಲ್ಪಟ್ಟಿದೆ.)

2. ಕರುವೂರು ಶಹರಿನ ವಿಶ್ವಾಮಿತ್ರಗೋತ್ರಕ್ಕೆ ಸೇರಿದ **ಸ್ಥಾನಿಕ ಮಾಧು ರವಜ** (ಗಂಗ ಅರಸನಾದ ರಾಚಮಲ್ಲನ ಕ್ರಿ.ಶ.828ರತಾಮ್ರಶಾಸವನ್ನು ಬರೆದಾತ)

3 ಅವನಿ ದೇಶದ ನೊಲಂಬ ಅರಸು ಮನೆತನಕ್ಕೆ ಸೇರಿದ ದಿಲೀಪ ಇರಿವ ನೊಲಂಬನ ಕಾಲದ ಒಂಭತ್ತು ಶಾಸನಗಳಲ್ಲಿ **ಸ್ಥಾನಿಕ ತ್ರಿಭುವನ ಕರ್ತಾರ ಭಟ್ಟಾರರು** ಪ್ರಖ್ಯಾತಿ ಹೊಂದಿದ್ದರು (ಕ್ರಿ. ಶ. 970-ಕ್ರಿ ಶ. 1007)

4. ಕ್ರಿ.ಶ. 891ರಿಂದ ಕ್ರಿ ಶ. 931ರ ವರೆಗೆ **ಸ್ಥಾನಾಚಾರ್ಯ ತ್ರಿಭುವನ ಕರ್ತಾರ ಭಟ್ಟಾರರು** ಧಾರ್ಮಿಕ ಕ್ಷೇತ್ರದಲ್ಲಿ ಪ್ರಮುಖರಾಗಿದ್ದ ಸಂಗತಿ ತಿಳಿದು ಬರುತ್ತದೆ.

5. ಕೋಲಾರ ಜಿಲ್ಲೆಯ ಕುರುಡುಮಲೆ ಸೀಮೆಯ ಹತ್ತನೆಯ ಶತಮಾನ ದ್ದೆಂದು ತಿಳಿಯಲ್ಪಟ್ಟ ಶಿಲಾಲೇಖದಲ್ಲಿ ಸಂಗಮೇಶ್ವರ ದೇವಸ್ಥಾನದ ಅಧಿಕಾರಿ ಯಾಗಿದ್ದು ಖಾಯದತ್ತವಾಗಿ ಕರಪನ ಹಳ್ಳಿ ಎಂಬ ಗ್ರಾಮವನ್ನು ಸ್ವೀಕರಿಸಿದ **ಸ್ಥಾನಿಕ ಕಣ್ಣಪ್ಪ.**

6. ಸೊರಬ ತಾಲೂಕಿನ ಕುಪ್ಪೆತ್ತೂರ ಅಗ್ರಹಾರದಲ್ಲಿಯ 77 ದೇವಸ್ಥಾನ ಗಳ ಧರ್ಮಗುರುವಾಗಿದ್ದ ರಾಜಗುರು ಎಕ್ಕೋಟಿ ಸಮಯ ಚಕ್ರವರ್ತಿ ಸಪ್ತಾಹ **ತ್ತರಿ ಸ್ಥಾನಾಚಾರ್ಯ ಸರ್ವೇಶ್ವರ ಶಕ್ತಿದೇವ.**

7. ಕುಪ್ಪೆತ್ತೂರು ಕೋಟೀಶ್ವರ ಮೂಲಸ್ಥಾನ ದೇಗುಲದ ಮತ್ತಿತರ 18 ದೇವಾಲಯಗಳ ಅರ್ಚಕರನ್ನು ಕ್ರಿ. ಶ. 1077ರಲ್ಲಿ '**ಕೋಟೀಶ್ವರ ಮೂಲಸ್ಥಾನ ಪ್ರಮುಖ ಪದಿನೆಂಟು ಸ್ಥಾನದ ಆಚಾರ್ಯರುಂ**' ಎಂದು ಉಲ್ಲೇಖಿಸಿದೆ.

8. ರಾಷ್ಟ್ರಕೂಟರ ಪ್ರಭುತ್ವದ ಕಾಲದ ಕ್ರಿ. ಶ. 1107ರ ಶಾಸನದಲ್ಲಿ "ಸರ್ವ ಭಾದಾಪರಿಹಾರಂ ಆಗಿ **ಸಕಲ ಸ್ಥಾನೀಗರುಂ** ಗಂಡ ಮಾಡದವರ ಹದನವರಿಯಲು ಬಿಟ್ಟಧರ್ಮ" ಎಂದಿರುವ ಉಲ್ಲೇಖವು ಪ್ರಾಮುಖ್ಯವಾಗಿದೆ.

9 ಕ್ರಿ.ಶ. 1129ರಲ್ಲಿ ಭೂದಾನವನ್ನು ಮಾಡಿದ ಹಳೆ ಸೊರಬದ ರಾಮೇಶ್ವರ ದೇವಸ್ಥಾನದ ಶಾಸನದಲ್ಲಿ ಸ್ಥಾನೀಕ **ಬೊಪ್ಪಯ್ಯಜೀಯನು** ಆ ಶಾಸನವನ್ನು **ಕೆತ್ತಿ**ದವನೆಂದಿದೆ.

10 ಬಳಕನ ಹಳ್ಳಿಯಲ್ಲಿ ಮಲ್ಲಿದೇವರ ಗುಡಿಶಿಲಾ ಶಾಸನದಲ್ಲಿ (ಕ್ರಿ.ಶ.1139) ಹೊಯ್ಸಳ ಅರಸನಾದ ತ್ರಿಭುವನ ಮಲ್ಲ ವಿಷ್ಣುವರ್ಧನ ಅರಸನ ಕಾಲದಲ್ಲಿ ಎರೆಯಮ ಸೆಟ್ಟಿಯು ತನ್ನ ದೇವರಿಗೆ ದತ್ತವಾಗಿ ಕೊಟ್ಟ ಭೂಮಿಯನ್ನು ಸ್ಥಾನಿಕ **ತತ್ವಪಥ ಪಂಡಿತನ** ಅಧಿಕಾರದಲ್ಲಿ ಇರಿಸಿದನು.

11. ಕ್ರಿ. ಶ. 1153ರ ಸುಮಾರಿಗೆ ಅನ್ವಯಿಸುವ ಶಾಸನದ ಪ್ರಕಾರ **ಏಳು ಪೇಟೆಗಳ ಮತ್ತು ಐದುಮಠಗಳ ಸ್ಥಾನಪತಿಯಾಗಿ ಪದ್ಮದೇವ ಗಂಗಣ್ಣ** ಎಂದು ಕಂಡು ಬರುತ್ತದೆ. (ತಲಕಾಡು ರಾಜರಾಜಪುರಂ) ಅಂತೆಯೇ ತಲಕಾಡಿನ **ಕೇದಾರಂ ಕೊಂಡೇಶ್ವರ ದೇವಸ್ಥಾನದ ಸ್ಥಾನಪತಿಗಳು** ಎಂಬುದಾಗಿ ಕ್ರಿ. ಶ. 1153ರ ಲೇಖನದಲ್ಲಿ ಕಂಡು ಬರುತ್ತದೆ.

12. ಬೇಲೂರಿನ ಕೇಶವ ದೇವಸ್ಥಾನದಲ್ಲಿ ದೊರಕಿದ ಕ್ರಿ. ಶ. 1174ರ ಶಾಸನಪ್ರಕಾರ **ತೇಜೋನಿಧಿ ಪಂಡಿತರ್ಗೆ ಸ್ಥಾನಮುಂ** ಧಾರಾಪೂರ್ವಕಂ **ಬಿಟ್ಟುಬೋವಂ ಕೊಟ್ಟಂ** ಎಂದಿದೆ.

13. **ತೇಜೋನಿಧಿ** ಪಂಡಿತರ ಶಿಷ್ಯರಾದ ದೇವೇಂದ್ರ ಪಂಡಿತರನ್ನು ಕ್ರಿ. ಶ. 1159ರ ಅರಸೀಕೆರೆ ತಾಲೂಕು ಸೂಳಕೇರಿ ಮಾಧವೇಶ್ವರದೇವಸ್ಥಾನದಲ್ಲಿ ದೊರಕಿದ ಶಿಲಾಲೇಖದಲ್ಲಿ ಸ್ಥಾನಪತಿದೇವೇಂದ್ರಪಂಡಿತ ಎಂದು ಸಂಬೋಧಿಸಿದೆ. ಆ ವರ್ಷದಲ್ಲಿ ಮೂಲಸ್ಥಾನ ದೇವರ ಪರವಾಗಿ ಆತನು ಭೂದಾನವನ್ನು ಭಾವಹೆಗ್ಗಡೆಯಿಂದ ಪಡೆದನು.

14. ಹೊಯ್ಸಳ ಅರಸನಾದ ಎರಡನೆಯ ವೀರ ಬಲ್ಲಾಳನ ಕಾಲದ ಕ್ರಿ. ಶ. 1185ರ ಒಂದು ಶಾಸನವು ಮಹಾದೇವ ಎಂಬಾತನನ್ನು ಅಂತರ್ಪಳ್ಳಿ ಹಳ್ಳಿಯ **ದೇವಸ್ಥಾನದ ಸ್ಥಾನಪತಿಯನ್ನಾಗಿ** ನೇಮಿಸಿದ ದಾಖಲೆ ಇದೆ.

15. ಮೈಸೂರು ರಾಜ್ಯದ ಶಿಕಾರಪುರ ತಾಲೂಕಿನ ಬೆಳ್ಳಿಗಾಮೆ ಎಂಬಲ್ಲಿಯ ಕೇದಾರವೆಂಬ ಸುಪ್ರಸಿದ್ಧ ದೇಗುಲದ ಸ್ಥಾನಾಚಾರ್ಯನನ್ನಾಗಿ ಪ್ರಖ್ಯಾತ ವಾಮಶಕ್ತಿ ದೇವನನ್ನು ನೇಮಿಸಿದಂತೆ ಕ್ರಿ. ಶ. 1193ರ ಶಾಸನ ತಿಳಿಸುತ್ತದೆ.

16. ಕ್ರಿ.ಶ.1203ರ ಅರಸೀಕೆರೆ ದೇವಸ್ಥಾನದಲ್ಲಿ ದೊರಕಿದ ಶಾಸನಪ್ರಕಾರ ಹೊನ್ನಾಳಿ ತಾಲೂಕಿನ ನಾಗೇಶ್ವರ ದೇಗುಲದ ಅಧಿಕಾರಿಗಳಾದ **ಸ್ಥಾನಾಚಾರ್ಯ ಸೋಮಾಚಾರ್ಯ** ಎಂಬವರಿಗೆ ದಾನವು ಕೊಡಲ್ಪಟ್ಟಿತ್ತು.

17. ಬಂದಣಿಕೆಯ ಸೋಮನಾಥದೇವರಿಗೆ ಎಳಿಬಳ್ಳಿ ಮತ್ತು ಸಿರಿವೂತಗ್ರಾಮ ಗಳನ್ನು ಉಂಬಳಿಯಾಗಿ ಕೊಟ್ಟಾಗ (ಕ್ರಿ. ಶ. 1216) ಈ ಕೆಳಗಿನ **ಸ್ಥಾನಪತಿಗಳ** ಅವಗಾಹನೆಯಿಂದ ಮಾಡಿದ್ದಾಗಿತ್ತು.

ಬಂದಣಿಕೆಯ ಸೋಮನಾಥ ದೇವ**ಸ್ಥಾ**ನದ **ಸ್ಥಾನಪತಿಯಾದ ಭೈರವ** ಜೀಯ; ನಖರೇಶ್ವರ ದೇವರ **ಸ್ಥಾನಪತಿಯಾದ** ನಾಕೆಯಜೀಯ; ಕುಪ್ಪೆತ್ತೂರಿನ ಕೋಟೀಶ್ವರ ದೇವರ **ಸ್ಥಾನಪತಿಯಾದ ಸರ್ವೇಶ್ವರ ದೇವ;** ಮತ್ತು ಯಮ್ಮನೂರು ಗ್ರಾಮದ ರಾಮೇಶ್ವರ **ದೇವಸ್ಥಾನದ ಸ್ಥಾನಪತಿಯಾದ** ರುದ್ರಧ್ವಜ.

18. ಕ್ರಿ. ಶ. 1231ರ ಶಿಲಾಲೇಖದಲ್ಲಿ ರುದ್ರಶಕ್ತಿ **ಪಂಡಿತದೇವನನ್ನು ಸಪ್ತ** ಹತ್ತಾರಿ ಸ್ಥಾನಾಚಾರ್ಯನೆಂಬುದಾಗಿ ಸಂಬೋಧಿಸಿದೆ.

19. ಮೂರನೆಯ ರಾಜೇಂದ್ರ ಚೋಳನ ಆಡಳಿತೆಯಲ್ಲಿ ಕೆಲವು ದೇವಸ್ಥಾನಗಳ ತನಿಕೆಯನ್ನು ನಡೆಸುವುದಕ್ಕೋಸ್ಕರ ನೇಮಿಸಿದ ಮಂಡಳಿಯಲ್ಲಿ ಸೋಮಯ್ಯ ದಂಡನಾಯಕ, ಸೇವಯ್ಯ ದಂಡನಾಯಕ, ಸೋಮನಾಥ ವಿಟ್ಟಯ್ಯ, ಮಹೇಶ್ವರರು, **ಸ್ಥಾನಿಕರು** ಮತ್ತು ವ್ಯಾಪಾರಸ್ಥರು ಸೇರಿಸಲ್ಪಟ್ಟುದು ತಿಳಿದು ಬರುತ್ತದೆ.

20. ಶಂಕರನಾಯಿನರ್‌ಕೊಯಿಲ್ (ತಿನ್ನವೆಲ್ಲಿ ಜಿಲ್ಲೆ) ಎಂಬ ತಾಲೂಕಿನಲ್ಲಿಯ ಶಾಸನ ಒಂದರಲ್ಲಿ **ದೇವಸ್ಥಾನದ ಸ್ಥಾನಿಕರಿಗೆ** ವಿಕ್ರಮ ಪಾಂಡ್ಯರಾಜನು ತನ್ನ ಆಳ್ವಿಕೆಯ ಆರನೆಯ ವರ್ಷದಲ್ಲಿ ಭೂದಾನ ಕೊಟ್ಟ ದಾಖಲೆ ಗಣನೀಯವಾಗಿದೆ.

21. ಹಿರಿದಾದ ಹಾಗೂ ಪ್ರಾಮುಖ್ಯ ಘಟನೆಗಳಿಗೆ **ಸ್ಥಾನಿಕರು** ಸಾಕ್ಷಿಗಳಾಗಿದ್ದುದು ದಾಖಲೆಗಳಿಂದ ತಿಳಿದು ಬರುತ್ತದೆ. ಕ್ರಿ. ಶ. 1288ರ. ಶಿಲಾಲೇಖದಲ್ಲಿ ಮಲ್ಲಯ್ಯನ ಹಳ್ಳಿಗೋರೇಶ್ವರ ದೇವರಿಗೆ ಬಿಟ್ಟ ಉಂಬಳಿಯು ಮೊಸಳೆಯ 120 **ಸ್ಥಾನಿಕರ** ಸಮಕ್ಷಮ ನಡೆದುದಾಗಿದೆ. ಅದೇ ರೀತಿಯಲ್ಲಿ 120 **ಸ್ಥಾನಿಕರ** ಸಾಕ್ಷಿಯು ಗೌರೇಶ್ವರ ದೇವಸ್ಥಾನದ ಇನ್ನೊಂದು ಶಾಸನದಲ್ಲಿ ಕಂಡು ಬರುತ್ತದೆ.

22. ಕ್ರಿ. ಶ. 1252ರ ಶಾಸನವು ಹೆಚ್ಚಿನ ಪ್ರಾಮುಖ್ಯತೆಯುಳ್ಳದ್ದಾಗಿದೆ. ರಾಮನಾಥಪುರದ ರಾಮೇಶ್ವರ ದೇವಸ್ಥಾನದಲ್ಲಿ ದೊರಕಿದ ಈ ಶಾಸನವು ಕೈಲಾಸ ಶಿವಜೀಯ, ಮಾದಜೀಯ, ಕಾಳಜೀಯ, ಅಪ್ಪಜೀಯ, ಅರಸಜೀಯ, ಮತ್ತು ಗೋವಣ್ಣ ಎಂಬ **ಸ್ಥಾನಪತಿಗಳು** ರಾಮನಾಥ ದೇವರ ಪ್ರಸಾದವನ್ನು ವೈಸರಾಯರುಗಳಾದ ಸೋಮದೇವ ರಸ ಮತ್ತು ಬೊಪ್ಪ ದೇವರಸರಲ್ಲಿಗೆ ಕೊಂಡು ಹೋಗಿ ಅವರನ್ನು ಹರಸಿದ ದಾಖಲೆ ಇದೆ.

23. ಕ್ರಿ.ಶ. 1255ರ ಶಾಸನದಲ್ಲಿ ಕುಂಜೇಶ್ವರ ದೇವಸ್ಥಾನವು ವ್ಯವಹಾರದಲ್ಲಿ 120 ದೇವಸ್ಥಾನಗಳ ಸ್ಥಾನಿಕರ ಪ್ರತಿನಿಧಿಯಾದ ಕಂಪಸಾಚಾರ್ಯನೆಂಬುವನ್ನು ಇತರ ಗೌರವಾನ್ವಿತರಾದ ಪುರಜನರೊಡನೆ ಸಹಕರಿಸಿದ ರೀತಿ ತಿಳಿದು ಬರುತ್ತದೆ.

24. ಕ್ರಿ. ಶ. 1256ರರ ಮಲ್ಲೇಶ್ವರ ಶಿಲಾಶಾಸನದಲ್ಲಿ ಸ್ಥಾನಿಕರು ತಮ್ಮ ಅಧೀನದಲ್ಲಿದ್ದ ಸಾರ್ವಜನಿಕ ಉಂಬಳಿಯನ್ನು ಯಾವ ರೀತಿಯಲ್ಲಿ ನಿಷ್ಪಕ್ಷಪಾತ ವಾಗಿ ವ್ಯವಹರಿಸಿದರೆಂಬುದರ ಉಲ್ಲೇಖವಿದೆ.

25. ಮೈಸೂರು ರಾಜ್ಯದ ತರಿಕೆರೆ ತಾಲೂಕಿನ ಸೋಮಪುರದಲ್ಲಿ ದೊರಕಿದ ಸೋಮನಾಥ ದೇವಾಲಯಕ್ಕೆ ಸಂಬಂಧಿಸಿದ ಕ್ರಿ. ಶ. 1260ರ ಶಿಲಾಲೇಖದಲ್ಲಿ ಸ್ಥಾನಿಕ ಸಂಕಯ್ಯನಿಗೆ ದೇಗುಲದ ಸೇವಾರ್ಥವಾಗಿ ತೆರಿಗೆ ರಹಿತವಾಗಿ ಭೂಮಿ ಯನ್ನು ಕೊಟ್ಟ ದಾಖಲೆ ಇದೆ.

26. ಪಾಂಡ್ಯ ದೇಶದ ಹೆಗ್ಗಡೆ ದೇವನ ಕೋಟೆ ತಾಲೂಕಿನ ಕ್ರಿ.ಶ.1264ರ ಶಿಲಾಲೇಖದಲ್ಲಿ ಹರಿಪಿಜೀಯನ ಮಗನಾದ ನಾಗದೇವನು ಸ್ಥಾನಿಕನಾಗಿ ದ್ದುದ್ದು ಕಂಡು ಬರುತ್ತದೆ.

27. ಕ್ರಿ. ಶ. 1267ರ ಚೋರಪುರದ (ಕೃಷ್ಣರಾಜ ಪೇಟೆ ತಾಲೂಕು) ಈಶ್ವರ ದೇವಸ್ಥಾನದ ಶಾಸನದಲ್ಲಿ ಇರುವ ಉಲ್ಲೇಖ "ಮಾಚನೆಕಟ್ಟೆ ಸ್ಥಾನಿಕರ ತಮ್ಮಳಿಯ ಆಚಾರ್ಯ ಭಂಡಾರದ ಮೆಂಡಯ್ಯದ ಮಾರಯ್ಯ"ನಿಗೆ ದೇವಕ್ಕದತ್ತ ಮಾಡಿದ ಪ್ರೀತಿಯ ಉಂಬಳಿ.

28. ಸ್ಥಾನಿಕರಿಗೆ ಸಿಕ್ಕುತ್ತಿದ್ದ ಗೌರವವು ಕ್ರಿಸ್ತಶಕ 1268ರ ಹಿರೇಕೋಗಿಲೂರು ಶಾಸನದಿಂದಲೂ ಮತ್ತು ಕ್ರಿ.ಶ.1285ರ ಹಿರಿಯ ಹಳ್ಳಿಗೊಟ್ಟಗನ ಕೆರೆಯ ಶಾಸನ ದಲ್ಲಿ ಸ್ಪಷ್ಟ ತಿಳಿದುಬರುತ್ತದೆ. ದಕ್ಷಿಣಾದಿತ್ಯ ಪೊಳಲು ಯಾ ಕೋಗಿಲೂರು ಅಗ್ರ ಹಾರದ ಪ್ರಸಿದ್ಧ ಬಿಲ್ಲೇಶ್ವರ ದೇವರ ಯಾವತ್ತು ದೇವತಾ ಕಾರ್ಯಗಳಿಗೆ ಚಂಡರಸ ನೆಂಬ ನೊಲಂಬವಾಡಿ, 32000 ಪ್ರಾಂತ್ಯದ ಬಂಡೆಯನ್ನು ಉಂಬಳಿಯಾಗಿ, ಭೂಮಿಯನ್ನು ದಾನವಾಗಿ ತೆತ್ತಾಗ, ಸ್ಥಾನಿಕ ದಂಡ ಪ್ರಾಣಿಗುರು ಎಂಬವನ ಪಾದಗಳನ್ನು ತೊಳೆದು, ಇನ್ನಿತರ ಗ್ರಾಮದ ಸಭ್ಯ ಗೃಹಸ್ಥರ ಸಮಕ್ಷಮ ಮಾಡಿದು ದೆಂದು ಬರೆದಿದೆ. ಅಂತೆಯೇ ಮೇಲಿನ ಎರಡನೆಯ ಶಾಸನದ ಪ್ರಕಾರ ಮಂಜೇಶ್ವರ ದೇವರ ಪೂಜಾದಿ ವಿನಿಯೋಗಗಳಿಗೆ ಉಪಯೋಗಿಸಲೋಸುಗ, ಲಲಾಮದೇವ ಮತ್ತು ಆತನ ಸಹೋದರನು ಬಿಟ್ಟ ಭೂಮಿಯನ್ನು ಆ ದೇವಸ್ಥಾನದ ಸ್ಥಾನಿಕನ ವಶ, ಆತನ ಪಾದಗಳನ್ನು ತೊಳೆದುಕೊಟ್ಟಿದೆ.

29. ಸ್ಥಾನಿಕರು 13ನೆಯ ಶತಮಾನದಲ್ಲಿ ದೇವಸ್ಥಾನದ ವ್ಯವಸ್ಥಾಪಕರಾಗಿದ್ದರೆಂಬುದನ್ನು ಕ್ರಿ.ಶ.1268ರ ಶಾಸನವು ವಿಶದೀಕರಿಸುತ್ತದೆ. ನಿರುಗುಂದ **ಸಿದ್ಧೇಶ್ವರ ದೇವಸ್ಥಾನದ ಸ್ಥಾನಿಕ ಪುರೋಹಿತನಾದ** (ಪೂಜಾರಿ) **ನಲ್ಲಜೀಯನ ಮಗ ಸಿದ್ಧಜೀಯನ** ಮರಣಾನಂತರ ದೇವಸ್ಥಾನದಲ್ಲಿ ಅರ್ಚಕರಿಲ್ಲದೆಹೋಯಿತು.

30. ಕ್ರಿ. ಶ. 1246 ಹಳೆಬೀಡು ರಂಗನಾಥ ದೇವಸ್ಥಾನದ ಶಾಸನದ ಪ್ರಕಾರ **ದೋರ ಸಮುದ್ರದ ಯೋಜೇಶ್ವರ** ದೇವಳದ ಸ್ಥಾನಿಕನಾದ ಸೋಮಜೀಯನು ಮೃತಪಟ್ಟನಂತರ ರಾಜಗುರು ಚಂದ್ರಭೂಷಣದೇವ ಮತ್ತು **ದೋರ ಸಮುದ್ರದ 120 ಸ್ಥಾನಿಕರು ಸೇರಿ** ಆತನ ಆಸ್ತಿಯನ್ನು ಅವನ ಹೆಂಡತಿ, ಅಳಿಯ ಮತ್ತು ಇನ್ನೋರ್ವನು— ಇವರೊಳಗೆ ವಿಂಗಡಿಸಿದರು. ಈ ವ್ಯವಸ್ಥೆಗೆ ವಿರುದ್ಧವಾಗಿ ವರ್ತಿಸುವವರು ರಾಜಗುರುವನ್ನು ಅಗೌರವಿಸಿದಂತೆಯೇ ಎಂಬುದಾಗಿ ಪರಿಗಣಿಸಲ್ಪಡುವುದೆಂದು ಅದೇ ಶಾಸಸನದಲ್ಲಿ ಕಂಡುಬರುತ್ತದೆ.

31. ಹೊಯ್ಸಳ ಅರಸನಾದ ರಾಮನಾಥ ದೇವನ ಆಳ್ವಿಕೆಯ 40ನೇ ವರ್ಷದಲ್ಲಿ ರಾಜರಾಜ ಕರ್ಕಟ ಮಹಾರಾಜನ್ ಕಾಮತ್ತಾಮುವರ್ ಎಂಬಾತನು ಎರಡು ಗ್ರಾಮಗಳನ್ನು ಬ್ರಾಹ್ಮಣ ಸಂರ್ಪಣೆಗೋಸುಗ ಹೋಳಿಯನಕೆರೆ ಗ್ರಾಮದ 28 ಜನರಿಗೆ **ತಾನಪತಿ** (ಸ್ಥಾನಿಕರ) **ಗಳ ಕರ್ತವ್ಯಗಳನ್ನು** ಮಾಡುವ ಶರ್ತದ ಮೇಲೆ ಧಾರಾಪೂರ್ವಕವಾಗಿ ದಾನ ಮಾಡಿಕೊಟ್ಟನು.

32. ಬಾಬಜೀಯನ ಮಗನಾದ **ಸ್ಥಾನಿಕ ಗುರುಪ್ಪನು,** ಗುರುಚಿತ್ತ ದೇವನ ಮಗನಾದ ಗಂಗಿ ದೇವನಿಗೆ ಆಸ್ತಿಯನ್ನು ಮಾರಾಟ ಮಾಡಿದ ದಾಖಲೆ ಇದೆ. (ಮೈಸೂರು ರಾಜ್ಯದ ಮಾಗಡಿ ತಾಲೂಕಿನ ವೀರಪುರದ ಶಾಸನ)

33. ಹೊಯ್ಸಳ ಅರಸನ ಮೂರನೆಯ ನರಸಿಂಹ ದೇವನ ಕಾಲದ ಕ್ರಿ. ಶ. 1729ರ ಶಾಸನ ಇದರಲ್ಲಿ ದಾಸನೂರಿನ ಸಮಸ್ಥರು ಸೇರಿ ವಿಶ್ವನಾಥ ದೇವರಿಗೆ ಶಾಶ್ವತನಂದಾದೀಪವನ್ನು ಉರಿಸುವುದಕ್ಕೂ, ದೇಗುಲದಲ್ಲಿ ಮಾಳಿಗೆ ಗೋಪುರ ರಚಿಸುವುದಕ್ಕೂ ದಾನ ಮಾಡಿ ಭೂಮಿಯನ್ನು **ಸ್ಥಾನಿಕ ಜೀಯರಾಂಡಿ ಹಸ್ತಾಂಡಿಯ** ಹಸ್ತಗತ ಮಾಡಿದೆ. ಅಂತೆಯೇ ಸ್ಥಾನಪತಿಗಳಾದ **ಮಾಯಿಜೀಯ ಮತ್ತು ಮಲ್ಲಜೀಯರಿಗೆ** ನಿಟ್ಟೂರಿನ ಸ್ವಯಂಭು ಅಂತನಾಥ ದೇವರ ಕಾರ್ಯ ನೆರವೇರಿಸುವುದಕ್ಕೋಸ್ಕರ ದಾನವಾಗಿ ಕೊಟ್ಟ ವಿವರವು ಕ್ರಿ. ಶ. 1299ರ ಶಾಸನದಲ್ಲಿ ತಿಳಿಯುತ್ತದೆ.

34. ಮಳವಳ್ಳಿ ಗ್ರಾಮದ ಕ್ರಿ..ಶ. 1334ರ ಶಿಲಾಲೇಖದಲ್ಲಿ ಮಹಾಮಂಡಲೇಶ್ವರ ಸೋಮೆಯ ದಣ್ಣಾಯಕನ ಮಗ ಬಳಪ್ಪ ದಣ್ಣಾಯಕನೂ, ತಲಕಾಡಿನ ಐದು ಮಠಗಳ ಮತ್ತು ಏಳು ಪಟ್ಟಣಗಳ ಸ್ಥಾನಪತಿಯಾದ ಸೋಮೆಯಣ್ಣ ಒಡೆ

ಯಣ್ಣನೂ ಸೇರಿ ಮಾಡಿದ ಭೂದಾನ. ಕ್ರಿ. ಶ. 1338ರಲ್ಲಿ **ಈ ಏಳು ಪಟ್ಟಣ ಗಳ ಮತ್ತು ಐದು ಮಠಗಳ ಸ್ಥಾನಪತಿಯು** ನಾಗ ಪಂಡಿತನ ಮಗನಾದ ಮಲ್ಲಪ್ಪನೆಂಬವನಿದ್ದನು.

35. ಕ್ರಿ. ಶ. 1349ರ ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳ ತಾಲೂಕಿನ ಕಾಂತಾವರದಲ್ಲಿ ದೊರಕಿದ ಶಿಲಾಶಾಸನದಲ್ಲಿ **ಕಾಂತಾವರ ದೇವಸ್ಥಾನವನ್ನು ಸ್ಥಾನಿಕರು** ಆಳುತ್ತಿದ್ದರೆಂದು ಕಂಡು ಬರುತ್ತದೆ. **ಈ ಸ್ಥಾನಿಕರು** ಸಂಖ್ಯೆಯಲ್ಲಿ 300 ಇದ್ದು ತಮ್ಮದೇ ಆದ ಗ್ರಾಮವನ್ನು ಹೊಂದಿ ಕೊಂಡಿದ್ದರು [**ಕಾಂತಾವರದ ದೇವಾಲಯದ ಸ್ಥಾನಿಕರ ಮುನ್ನೂರ್ವರಂ**]. ಈ ಶಾಸನವು ವಿಜಯ ನಗರದ ಶ್ರೀಮತುಮಹಾಮಂಡಲೇಶ್ವರ ಹರಿಯಪ್ಪ ಒಡೆಯರ ಕಾಲದಲ್ಲಿ ಮಂಗಳೂರು ರಾಜ್ಯದ ವೈಸರಾಯರಾಗಿ ಕಡಪದ ಗೌತರಸನು ನೇಮಿಸಲ್ಪಟ್ಟಾಗ ಕೆತ್ತಿಸಲ್ಪಟ್ಟುದಾಗಿದೆ.

36- ಗೋಬೂರು ನರಹರಿ ದೇವ (**ಬೇಬನಾಥ ದೇವರ ಸ್ಥಳಾಚಾರ್ಯ—ಸ್ಥಾನಿಕ**) ನಿಗೆ ಕೊಡಲ್ಪಟ್ಟ ಭೂದಾನವು ನಾಲ್ಕಂಶವನ್ನೂ, ಪುರಾಣಿಕನಿಗೆ ಕೊಡಲ್ಪಟ್ಟುದು ಒಂದಂಶವನ್ನೂ ಕೂಡಿತ್ತು (ಕ್ರಿ. ಶಕ 1328)

37. ಮಹಾಮಂಡಲೇಶ್ವರ ಸೋಮೋಯ ನಾಯಕನ ಮಗನಾದ ಮಲ್ಲಿನಾಥ ಒಡೆಯನು ಸ್ಥಾನಿಕ ಪುರೋಹಿತ ಸಿದ್ದಣ್ಣನ ಮಗನಾದ **ಸ್ಥಾನಿಕ ಸೋಮಣ್ಣನಿಗೆ** ಬೆಮ್ಮತ್ತನ ಕಲ್ಲು ಸಿದ್ಧನಾಥ ದೇವರ ಪರವಾಗಿ ಕ್ರಿ. ಶ. 1355 ರಲ್ಲಿ ಭೂದಾನವಿತ್ತನು.

38. ವಿಜಯನಗರದ ಅರಸನಾದ ಬುಕ್ಕರಾಯನ ಮಗನಾದ ವಿರೂಪಾಕ್ಷ ರಾಯನು ಕ್ರಿ. ಶ. 1367ರ ಶಾಸನ ಒಂದರಲ್ಲಿ ಹೀಗಿದೆ. ವಿರೂಪನ ಸಾಮ್ರಾಜ್ಯವು ಶಾಶ್ವತವಾಗುವಂತೆ 50 ನಾಡುಗಳ ಪ್ರತಿನಿಧಿಗಳು ಒಟ್ಟು ಸೇರಿ ಬಂಡಿಗನಳ್ಳಿ ಗ್ರಾಮದ ಶಂಕರ ದೇವರಿಗೆ ಪೂಜೆ ಉತ್ಸವಾದಿಗಳನ್ನು ನಡೆಸಿಕೊಂಡು ಬರುವರೆ ಭೂದಾನವನ್ನು ಮಾಡಿದರು. ಮತ್ತು ಅದೇ ಶಾಸನದಲ್ಲಿ ಈ ಧರ್ಮವನ್ನು ದೇವರ ಸ್ಥಾನಿಕ........ನೂ, ಆತನ ಮಕ್ಕಳು, ಮೊಮ್ಮಕ್ಕಳೂ ತಪ್ಪದೆ ನಡೆಸಿಕೊಂಡು ಬರಬೇಕೆಂದಿದೆ.

39. ಕ್ರಿ.ಶ. 1365ರಲ್ಲಿ **ಸ್ಥಾನಿಕ ತಮ್ಮಣ್ಣ ಜೀಯನು** ಕೌಶಿಕ ಗೋತ್ರದ ಸೋಮಣ್ಣ ದೇವನಿಗೆ ಸಂಬೀಶ್ವರಂ ಉದ್ಯೆಯಾರ್ ದೇವಸ್ಥಾನದಲ್ಲಿ ಇತ್ತ ದಾನವನ್ನು ವೆಪ್ಪೂರಿನ ಸಭೆಯು ಮಂಜೂರು ಮಾಡಿತ್ತು.

ಸಾಮ್ರಾಜ್ಯದ ಆಡಳಿತವನ್ನು ನಡೆಸಿಕೊಂಡಿರುವಾಗ ತುಳುವದ ಬಾರಕೂರು ರಾಜ್ಯವನ್ನು ವಿತ್ತರಸ ಒಡೆಯನು ಆಳುತ್ತಿದ್ದನು. ಸ್ಥಳೀಯ ಆಡಳಿತೆಯು ಚೌಟರ ಮತ್ತು ಬಂಗರ ಅಧೀನವಿತ್ತು. ಅದರ ನಾಲ್ಕು **ಸ್ಥಾನಿಕರಾದ ರವಾಳಪಳಿ, ಗಣಪಣ್ಣ ಆಳುವ, ರಾಯರ ಸೇನ ಬೋವ ಮತ್ತು ಗೊಮ್ಮಸೇನ ಬೋವರು** ಒಟ್ಟಾಗಿ ಒಪ್ಪಿಕೊಂಡು ಮಂಗಳನಾಥ ಒಡೆಯನಿಗೆ ಒಂದು ಆಸ್ತಿಯ ವಿಕ್ರಯ ಮಾಡಿದರು.

51. ಕ್ರಿ. ಶ. 1407ರ ಮುಳ್ಬಾಗಲ್ ತಾಲೂಕಿನ ವಾಣಿಕ ವಾಣಿಗನ ಹಳ್ಳಿಯ ಶಾಸನ ಒಂದರಲ್ಲಿ ಲತ್ತನೂರು ಮಡವಾಳದ **ಗೌರಿದೇವಸ್ಥಾನದ ಸ್ಥಾನಿಕರ** ಆಸ್ತಿ ಸಂಬಂಧವಾದ ಉಲ್ಲೇಖವಿದೆ.

52. ಮುಳ್ಬಾಗಲ್ ರಾಜ್ಯದ ಅಧಿಕಾರವು ಪ್ರಧಾನ ನಾಗಣ್ಣ ಒಡೆಯರ ಕೈಯಲ್ಲಿರುವಾಗ ಕ್ರಿ. ಶ. 1416ರ ಶಿಲಾಲೇಖದಲ್ಲಿ ಮುಳುವಾಯಿ ನಾಚಿ ದೇವಿಯ ಅಪ್ಪಣೆ ಮೇರೆಗೆ, ಆ ದೇವರ ಸ್ಥಾನಿಕರಾದ ಕೇಶವ ಪೆರುಮಾಳ ಎಂಬವರ ಮಗ ಬಲಿಪ, ಮಣಿಯ ಮತ್ತು ಮಾರಪ್ಪ ಎಂಬವರೂ ಮತ್ತು ಕೇಶವನ ಸಹೋದರನಾದ ಆನಂಬಳನೂ ಸೇರಿ ಶಿವರಾತ್ರಿ ಮಿತ್ತಣ್ಣ, ಮಲ್ಲಣ್ಣ, ಮತ್ತು ಇತರ ಬ್ರಾಹ್ಮಣರಿಗೆ ಶಾಸನ ಬರೆದ ದಾಖಲೆ ಇದೆ. ಅಂತೆಯೇ ಕ್ರಿ. ಶ. 1482ರಲ್ಲಿ ಕೋಲಾರ ತಾಲೂಕಿನ ಕೇಶವ ವಿನಾಯಕನ ಹಳ್ಳಿಯಲ್ಲಿ ದೊರೆತ ಶಾಸನವು ಇಂತಹ ದಾನವನ್ನು **ಭೈರವ ದೇವರ ಸ್ಥಾನಿಕರು** ಮಾಡಿದುದು ಕಂಡುಬರುತ್ತದೆ. ಮುಳ್ಬಾಗಲ್ ತಾಲೂಕಿನ ರಾಯಗುಂಡ ಹಳ್ಳಿಯ ಇನ್ನೊಂದು ಶಿಲಾಲೇಖದಿಂದ ಸಾರ್ವಜನಿಕ ಉದ್ದೇಶದ ಬಗ್ಗೆ ಕೊಂಡಪ್ಪ ತಿಮ್ಮಣ್ಣ ಮಗ, ಹಾಗೂ ನರಸಿಂಹ ದೇವಸ್ಥಾನದ ಸ್ಥಾನಿಕನಾದ ದೇವಪ್ಪ ಎಂಬಾತನು ಮಾಡಿದ ದಾನಶಾಸನವಿದೆ (1496 ಕ್ರಿ. ಶ.)

53. ಸ್ಥಾನಿಕರು ಸಾರ್ವಜನಿಕ ದಾಖಲೆಗೆ ಸಾಕ್ಷಿಯಾಗಿ ನಿಂತ ಅನೇಕ ಉದಾಹರಣೆಗಳಿವೆ. ಕ್ರಿ. ಶ. 1423ರಲ್ಲಿ ತಿಪ್ಪೆ ಸೆಟ್ಟಿ ಎಂಬಾತನು ಕಟ್ಟಿಸಿದ ಕೆರೆಯನ್ನು, ಹುಣಸೂರು ತಾಲೂಕಿನ ದೊಡ್ಡ ಬೆಳಹಾಳಿನ ಈಶ್ವರಾಲಯದ ತಿರುಮಲ ದೇವರಿಗೆ ಬಿಟ್ಟು ಕೊಡುವಾಗ ವೈದಿಕ ಬ್ರಾಹ್ಮಣರೂ, **ದೇಗುಲದ ಸ್ಥಾನಿಕರೂ**, ನಂಬಿಯರೂ, ತಿರುಮಲ ದೇವರ ಚಾಕರಿಯವರೂ ಸಾಕ್ಷಿಗಳಾಗಿ ಅವರ ಸಮಕ್ಷಮ ದಾನ ಮಾಡಲಾಯಿತು.

54. ಕ್ರಿ. ಶ. 1406ರ ವಿಜಯನಗರ ದೇವರಾಯನ ಶಾಸನ ಪ್ರಕಾರ ಕೋಲಾರು ತಾಲೂಕಿನ, ಬೆಳ್ಳೂರಿನ ಕಣ್ವೇಶ್ವರದ ದೇವಾಲಯದ ಸ್ಥಾನಿಕರಿಗೆ, ಯಾವ ವಿಶೇಷ ಹಕ್ಕುಗಳೂ, ಅಧಿಕಾರಗಳೂ ಇದ್ದುವೆಂದು ತಿಳಿದುಬರುತ್ತದೆ.

55. ಸ್ಥಾನದ ಭೂಮಿಯು ಸ್ಥಾನಿಕರ ವಶವಿರುವುದು ದಾಖಲೆಯಿಂದ ತಿಳಿದು ಬರುತ್ತದೆ. ಕ್ರಿ. ಶ. 1420ರ ಮೈಸೂರಿನ ಸಿದರವಳ್ಳಿಯ ಸೋಮೇಶ್ವರ ದೇವಾಲ

ಯದ ಲೇಖದಲ್ಲಿ ಸ್ಥಾನಿಕರಾದ, ರಯಡೆ, ಸೋಮಯಡೆ ಮತ್ತು ಕೇತಡೆ, ಎಂಬವರ ಸ್ವಾಧೀನವಿದ್ದುದು ಖಚಿತವಾಗಿದೆ.

56. ಅಂತೆಯೇ ಇಮ್ಮಡಿ ನರಸಿಂಹರಾಯನು ಕ್ರಿ. ಶ. 1495ರಲ್ಲಿ ಕೆತ್ತಿಸಿದ ಶಾಸನದಲ್ಲಿ ಭೈರವ ದೇವರ ಸ್ಥಾನಿಕರಿಗೆ ಮಾಡಿದ ಭೂದಾನ ಕಂಡುಬರುತ್ತದೆ.

57. ಸ್ಥಾನಿಕ ನಾಡಾಂಡಜೀಯನು ಮೈಸೂರು ರಾಜ್ಯದ ಚಿಂತಾಮಣಿ ತಾಲೂಕಿನ ಭೀಮೇಶ್ವರ ದೇಗುಲದ ಅರ್ಚಕನಾಗಿದ್ದುದು ಕ್ರಿ. ಶ. 1500ರ ಲೇಖದಿಂದ ತಿಳಿದು ಬರುತ್ತದೆ. ಅಂತೆಯೇ ತೆಂಕಲ್ಸೀಮೆ ಶ್ರೀ ದೇವರಸ್ಥಾನಿಕನಾದ ನಯನಾರಯ್ಯನು ದೇವಾಲಯದ ಅರ್ಚಕನಾಗಿದ್ದನು. ಈ ನಯನಾರಯ್ಯನು ಸೋಮಯ ಮತ್ತು ರಾಮಯ ಲಿಂಗದೇವರ ಸ್ಥಾನಿಕನಾಗಿಯೂ ಇದ್ದನು.

58. ಕೆರೆಗ ತಿಮ್ಮರಸನಿಗೆ ವಿಜಯನಗರದ ಅರಸನು ಕ್ರಿ. ಶ. 1532ರಲ್ಲಿ ಧರ್ಮೇಶ್ವರ ದೇವರ ಮತ್ತು ಬಲಿಮೂರ್ತಿ ಚಂದ್ರಶೇಖರ ದೇವರ ವಿನಿಯೋಗಕ್ಕೋಸುಗ ಒಗರ ಹಳ್ಳಿಯನ್ನು ಕೊಟ್ಟಿದ್ದು ಆತನು ಈ ಇಡೀ ದತ್ತಿಯನ್ನು ಸ್ಥಾನಿಕ ಅರ್ಚಕರಾದ ದೇವರು ಭಟ್ಟರ ವಶ ವಿವರಿಸಿದ ದಾಖಲೆ ಇದೆ. ಈ ಶಿಲಾಲೇಖವು ಹಾಸನ ತಾಲೂಕಿನ ಗ್ರಾಮ ಎಂಬಲ್ಲಿಯ ಧರ್ಮೇಶ್ವರ ದೇವಾಲಯದಲ್ಲಿ ದೊರಕಿದೆ.

59. ಭಟ್ಟ ವೃತ್ತಿಯನ್ನು ಸ್ಥಾನಿಕರು ಪಡೆದ ದೃಷ್ಟಾಂತಗಳೂ ಲಿಖಿತವಾಗಿದೆ. ಮೂಳ್ಬಾಗಲ್ ಸೋಮೇಶ್ವರ ದೇವರಸ್ಥಾನಿಕರು ಸದಾಶಿವರಾಯನ ಕಾಲದಲ್ಲಿ ಭಟ್ಟವೃತ್ತಿಯನ್ನು ಪಡೆದವರಾಗಿದ್ದು ದೇಗುಲದ ಅರ್ಚಕರಾಗಿದ್ದರು.

60. ಸ್ಥಾನಿಕರಿಗೆ ದಾನ ಯಾ ಉಂಬಳಿಯನ್ನು ಕೊಟ್ಟ ಕಾರಣವನ್ನು ಕ್ರಿ. ಶ. 1562ರ ಹಾಸನ ತಾಲೂಕಿನ ಕುದಿರಿಗುಂಡಿಯ ಶಾಸನದಿಂದ ತಿಳಿಯಬಹುದು. ಅದರಲ್ಲಿ ಸ್ಥಾನಿಕರಿಗೆ ಮಾಡಿದುದು ಧರ್ಮ ಶಾಸನವೆಂದೂ, ದೇವರಿಗೆ ಮಧ್ಯಾಹ್ನ ಮತ್ತು ಸಂಜೆ ನೈವೇದ್ಯದ ಏರ್ಪಾಡು ಮಾಡಬೇಕೆಂದೂ ಇತರ ಸೇವಾದಿಗಳನ್ನು ನಡೆಸಬೇಕೆಂದೂ ಅವರ ಕರ್ತವ್ಯವನ್ನು ನಿರೂಪಿಸಿದೆ.

61. ಕದಿರಿ ನರಸಿಂಹ ಎಂಬಾತನು ಒಂದು ಕೆರೆಯನ್ನು ಕಡಿಸಲಾಗಿ ಅದನ್ನು ನರಸಿಂಹ ದೇವರ ಸ್ಥಾನಿಕರಾದ ವಿತ್ತಯ್ಯ ಮತ್ತು ಕುಪ್ಪಯ್ಯ ಎಂಬವರ ವಶ ಕೊಟ್ಟುದು ಕ್ರಿ. ಶ. 1503ರ ಶಾಸನದಿಂದ ತಿಳಿದು ಬರುತ್ತದೆ.

62. ಕಾಲ ನಿರೂಪವಿಲ್ಲದ ಚಾಮರಾಜ ನಗರ ತಾಲೂಕಿನಲ್ಲಿಯ ರಾಮೇಶ್ವರ ದೇವಾಲಯದ ಶಿಲಾಲೇಖವೊಂದು ಆ ದೇವಸ್ಥಾನದ ಸ್ಥಾನಿಕ ಸಿಂಗಯ್ಯನಿಗೆ ಮಾಡಿದ ಭೂದಾನ ಶಾಸನವನ್ನು ಒಳಗೊಂಡಿದೆ.

63. ನೆಲ್ಲೂರು ಜಿಲ್ಲೆಯ ಚಿಲಮುಕೂರು ಎಂಬಲ್ಲಿಯ **ಕೈಲಾಸ ದೇವಾಯದ ಸ್ಥಾನಿಕರನ್ನು ಸಂಸ್ಥಾನಕುಲು** ಎಂದು ಉಲ್ಲೇಖಿಸಿದೆ.

64. ರಾಷ್ಟ್ರದ ಅಧಿಕಾರಿಗಳೊಡನೆ ಸ್ಥಾನಿಕರು ಸಹಕರಿಸಿ, ಮಾಡಿದ ಸತ್ಕಾರಗಳಿಗೆ ಜನರನ್ನು ಬಹುಮಾನಿಸುವ ಪದ್ಧತಿಗೆ ದೃಷ್ಟಾಂತವಾಗಿ ಕ್ರಿ·ಶ 1530ರ ಮಲೂರು ತಾಲೂಕಿನ ಎಲವಗುಳಿ ಶಿಲಾ ಲೇಖವು ನಿಂತಿದೆ. ತೆಂಕಲ್ನಾಡಿನ ಸ್ಥಾನಿಕರು ವಿಜಯನಗರದ ವೈಸರಾಯರ ಏಜಂಟರೊಬ್ಬರೊಡನೆ ಸಹಕರಿಸಿ ಸೇನಬೋವ ತಿಮ್ಮರಸನಿಗೆ ಕೆರೆಯನ್ನೊಂದು ಕಟ್ಟಿಸಿದುದಕ್ಕಾಗಿ ಭೂಮಿಯನ್ನು ಕೊಟ್ಟುದುದರ ದಾಖಲೆ ಇದೆ. ಅಂತೆಯೇ ಹೊಸಹಳ್ಳಿಗ್ರಾಮದ **ಧರ್ಮೇಶ್ವರ ದೇವರ ಸ್ಥಾನಿಕರಾದ ಹರಿಯಪ್ಪ, ಚಿಕ್ಕಣ್ಣ, ನರಸಯ್ಯ ಅಣ್ಣಪ್ಪಯ್ಯ ಮತ್ತು ಹರಿಯಣ್ಣ ಎಂಬವರ ಕಪ್ಪಯ್ಯ** ಪುರುಷ ಎಂಬಾತನಿಗೆ ಕ್ರಿ. ಶ. 1562ರಲ್ಲಿ ಕೊಟ್ಟ ಭೂಮಿಯ ದಾಖಲೆಯು ಶಾಸನದಲ್ಲಿ ಕಂಡು ಬರುತ್ತದೆ. ಸಾರ್ವಜನಿಕ ಕಾರ್ಯಮಾಡಿದುದರ ಉದ್ದೇಶಕ್ಕೋಸ್ಕರ ಇಂತಹ ದತ್ತಕೊಡಲ್ಪಡುತ್ತಿತ್ತು.

65. ಕೃಷ್ಣದೇವರಾಯನ ಕಾಲದ ಶಿಲಾಶಾಸನ ಒಂದರಲ್ಲಿಯ ಉಲ್ಲೇಖವು ಸ್ಥಾನಿಕರ ಸ್ಥಾನಮಾನಗಳನ್ನು ನಿರ್ದೇಶಿಸುವ ಅತ್ಯಂತ ಮೌಲ್ಯದ್ದಾಗಿದೆ. ಕ್ರಿ.ಶ. 1519ರಲ್ಲಿ ಪೇರುಮಾಳ್ಕರಯಿವರ್ ಎಂಬ **ದೇವಸ್ಥಾನದ ಮೂರು ಸ್ಥಾನಿಕರು ಚಕ್ರವರ್ತಿಗೆ ಮನವಿಯೊಂದನ್ನು ಕೊಂಡುಹೋದರು.** ಈ ಮನವಿಯಲ್ಲಿ ಸರಕಾರದ ಅಧಿಕಾರಿಗಳು ಮಾಡಿದ ಅನ್ಯಾಯವನ್ನು ಕಾಣಿಸಲಾಗಿತ್ತು ಚಕ್ರವರ್ತಿಯು ಇವರ ಮನವಿಯನ್ನು ಅಂಗೀಕರಿಸಿ, ಆದ ಅನ್ಯಾಯಗಳನ್ನು ಹೋಗಲಾಡಿಸಿ ಪ್ರತಿಯೊಬ್ಬನಿಗೂ ಒಂದು ಹೂಮಾಲೆ, ತಲೆವಸ್ತ್ರ, ಒಂದು ಕುದುರೆ ಮತ್ತು ಒಂದು ಛತ್ರಿಯನ್ನು ಬಹುಮಾನವಾಗಿಯೂ, ಗೌರವಾರ್ಥವಾಗಿಯೂ ಕೊಟ್ಟು 900 ಕುಳಿ ಭೂಮಿಯನ್ನು ಸರ್ವಮಾನ್ಯವಾಗಿ ಅನುಗ್ರಹಿಸಿತ್ತನು.

66. ವಿಜಯನಗರದ ಆಳ್ವಿಕೆ ಕಾಲದಲ್ಲಿ ಸ್ಥಾನಿಕರು ಸರಕಾರದ ಅಧಿಕಾರಿಗಳಾಗಿದ್ದು ರಾಷ್ಟ್ರಕ್ಕೆ ಅಧೀನರಾಗಿದ್ದರು ಎಂಬುದಕ್ಕೆ ಕ್ರಿ.ಶ.1521ರ ಶಾಸದ ದಾಖಲೆಯು ದೃಷ್ಟಾಂತವಾಗಿದೆ. ಹಾಳುಬಿದ್ದ ಸೋಮೇಶ್ವರ ದೇವಾಲಯವನ್ನು ಜೀರ್ಣೋದ್ಧಾರಮಾಡಿದ ನಂತರ ಅದರ ಪೂಜಾದಿ ವಿನಿಯೋಗಗಳನ್ನು ನಡೆಸುವರೆ **ಕಾಶ್ಯಪ ಗೋತ್ರದ ಚಂದಪ್ಪಯ್ಯನ ಮಗದಡುಗನನ್ನು** ಸ್ಥಾನಿಕನಾಗಿ ವಿಜಯನಗರದ ವೈಸರಾಯನಾದ ಅಣ್ಣದಾನ ಒಡೆಯನ ಅನುಮತಿ ಮೇರೆಗೆ ನೇಮಿಸಲಾಗಿತ್ತು. [ಅನ್ನದಾನ ಒಡೆಯರ ನಿರೋಪವಿದು]

67 ಕ್ರಿ. ಶ. 1523ರ ಶಿಲಾಲೇಖವು ಈ ಕೆಳಗಿನಂತಿದೆ.

"ಏನುಂಟಾದ ಸರ್ವಸ್ವಾಮ್ಯಕೆ ಅರಸುಗಳು ಮತ್ತು ಆರಾದರೂ ಧರ್ಮಕ್ಕೆ ಕೊಟ್ಟಂತ ಸೀಮೆಗಳು ಏನುಂಟಾದ ಸರ್ವಸ್ವಾಮ್ಯದವೆಲ್ಲಕ್ಕು ದೇವರ ಸ್ಥಾನಕ್ಕೆ ಕರ್ತನಾದ ಅಲ್ಲಪ್ಪಗೆ ಸಲುವುದು. ದೇವರ ಸೀಮೆಎಲ್ಲವನ್ನು ಅನುಭವಿಸಿಕೊಂಡು ದೇವರ ಶ್ರೀಕಾರ್ಯಕ್ಕೆ (ಕಾರ್ಯಕ್ಕೆ) ತಕ್ಕಂತ ತಮ್ಮ ಮನಸ್ಸು ಬಂದಲ್ಲಿ ಅರ್ಚಕರನ್ನು ಇರಿಸಿಕೊಂಡು ಶ್ರೀಕಾರ್ಯವನ್ನು ವೇಳೆ ವೇಳೆ ನಡಸಿಕೊಂಡು ಬಹೆನು." ಈ ಶಾಸನ ಪ್ರಕಾರ ಪಾರುಪತ್ಯಗಾರನಿಗೆ ದೇವರ ವಿಚಾರವಾಗಿ ಏನೊಂದು ವಿಚಾರಣೆ ನಡೆಸುವ ಅಧಿಕಾರವೂ ಇರಲಿಕ್ಕಿಲ್ಲ. ಸ್ಥಾನಿಕಎಲ್ಲಪ್ಪನೇ ದೇವಸ್ಥಾನದ ಸಂಪೂರ್ಣ ಏಜಂಟನಾಗಿದ್ದು, ಇತರರಾರಿಗೂ ಅಧಿಕಾರವಿಲ್ಲದುದಾಗಿದೆ.

68. ವಿಜಯ ನಗರದ ಶ್ರೇಷ್ಠ ಅರಸ ಕೃಷ್ಣದೇವರಾಯನ ಮತ್ತು ಆತನ ಅಧಿಕಾರಿಗಳಲ್ಲೊಬ್ಬನಾದ ನರಸಿಂಹರಾಯ ಮಹಾರಾಯನ ಅಪ್ಪಣೆ ಮೇರೆಗೆ ತಿರುಪತಿಯ ಸ್ಥಾನಿಕನು (ತಾನತ್ತಾರ್) ವ್ಯಾಸತೀರ್ಥ ಶ್ರೀಪಾದರಿಗೆ ಒಂದು ಮನೆ ಮತ್ತು ಕೆಲವು ಉಡುಗರೆಗಳನ್ನಿತ್ತು ಗೌರವಿಸಿದ ಸಂಗತಿಯು ತಿರುಪತಿಯ ವ್ಯಾಸರಾಯ ಮಠದ ದ್ವಾರದಲ್ಲಿರುವ ತಮಿಳು ಶಾಸನದಿಂದ ತಿಳಿದು ಬರುತ್ತದೆ.

69. ಕ್ರಿ. ಶ 1534ರ ಧರ್ಮಶಾಸನಪ್ರಕಾರ ಚೆನ್ನಪಟ್ಟಣ ಸೀಮೆಯ ಕೋಡಂಬಳ್ಳಿ ಮಲ್ಲೇಶ್ವರ ದೇವರ ಸ್ಥಾನಿಕನಾಗಿ ಚಂದ್ರಶೇಖರನೆಂಬವನು ನೇಮಿಸಲ್ಪಟ್ಟನು. [ಈಸರಗೂರಿನ ಸ್ಥಾನಿಕತಾನಕ್ಕೆ ಚಂದ್ರಶೇಖರಗೆ ಗದ್ದೆ ಹತ್ತುಕೊಳಗ ಹೊಲಖಂಡುಗ ಸಲಹುದು.]

70. ಮೈಸೂರು ರಾಜ್ಯದ ಹೊಸಕೋಟೆ ತಾಲೂಕಿನ ನಂದಗುಡಿಯ ಮಲ್ಲೇಶ್ವರ ದೇವಸ್ಥಾನದ ಇನ್ನೊಂದು ಶಾಸನವು ಕ್ರಿ. ಶ. 1559ರದಾಗಿದ್ದು, ಮಹಾಮಂಡಲೇಶ್ವರ ರಾಮರಾಯ ತಿರುಮಲರಾಯ ಮಹಾ ಅರಸನ ಏಜಂಟನಾದ ಸುಗತ್ತೂರು ತಿಮ್ಮಣ್ಣ ಗೌಡಯ್ಯನು ತನ್ನ ಹೆತ್ತವರ ಪುಣ್ಯಕ್ಕಾಗಿ ಸಿಮುಸಂದ್ರ ಎಂಬ ಗ್ರಾಮವನ್ನು ನಂಜಿಗುಳಿಯ ಮಲ್ಲಿಕಾರ್ಜುನ ದೇವರಿಗೆ ಬಿಟ್ಟುಕೊಟ್ಟು ಆ ಉಂಬಳಿಯನ್ನು ಸ್ಥಾನಿಕ ಅಪ್ಪಾಜಿ ಎಂಬವರ ವಶಕೊಟ್ಟ ದಾಖಲೆಯು ಸ್ಪಷ್ಟವಾಗಿದೆ. [................ಧರ್ಮವಾಗಬೇಕೆಂದು ಸ್ಥಾನಿಕ ಅಪ್ಪಾಜಿಗೆ ಪೂಜೆಯನು ಸಮರ್ಪಿಸಿಕೊಂಡು ಇರೆಂದು ಕೊಟ್ಟ ಧರ್ಮಸಾಧನ.]

71. ಕ್ರಿ. ಶ. 1521ರಲ್ಲು ರಾಮಚಂದ್ರ ದೇವರ ಭಂಡಾರಕ್ಕೆ ತಿಮ್ಮರಾಜನು ಕೊಟ್ಟ ಶಾಸನದ ಪ್ರಕಾರ "ಆಗಮಿಕ ನಾರಾಯಣ ಭಟ್ಟರು ಸ್ಥಾನಿಕ ಮಾದವ

ಯ್ಯಗಳು ಸ್ಥಳದ ಸೇನ ಭೋವ ನರಸಯ್ಯ ಮುಂತಾದ ಸ್ಥಾನದವರು"ಎಂಬುದು ಸ್ಪಷ್ಟವಿದೆ.

72. ಕ್ರಿ. ಶ. 1513ನೇ ಶ್ರೀವೀರ ಕೃಷ್ಣದೇವರಾಯನ ಶಾಸನ ಪ್ರಕಾರ "ತಿರುವಿಥಿ ವಿನಿಯೋಗದ ಮಹಾಜನಂಗಳು ಸ್ಥಾನಿಕರು ಸ್ಥಳಭೋವರು ಮುಂತಾದ ಬ್ರಾಹ್ಮಣ ನಿವೇಶಗಳು ಪೇಟೆಯು ಮಳಿಗೆ ಮನೆಗಳು ಮುಂತಾದ್ದಕ್ಕೆ ಹೋದಗದ್ದೆ" ಎಂಬ ಉಲ್ಲೇಖವಿದೆ.

73. ಶ್ರೀ ವೀರಹರಿಹರರಾಯರ ಕುಮಾರ ಪ್ರತಾಪ ಬುಕ್ಕಮಹಾರಾಯರ ನಿರೂಪಪತ್ರ (ಕ್ರಿ. ಶ.1407) "ಈ ಧರ್ಮವನ್ನು ಬಂಗರ ವಡತನದಲ್ಲಿ ಅಲ್ಲಿಯ ಸ್ಥಾನಿಕರು ನಡಸಿ ಬಹುದು" ಎಂಬ ಶ್ರೀಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನದ ತಾಮ್ರಶಾಸನ.

74. ವಿಜಯನಗರದ ಪ್ರತಾಪ ಪ್ರೌಢವೀರಶೇಖರ ದೇವರಾಯನು ಚತುರ್ಸಮುದ್ರ ಮಧ್ಯರಾಜ್ಯ ಪರಿಪಾಲಿಸುವಲ್ಲಿ ಅವರ ಮುದ್ರೆ ಉಂಗುರವ ಧರಿಸಿ ಶ್ರೀ ಮನ್ಮಹಾ ಪ್ರಧಾನ ರಾಮಚಂದ್ರಪ್ಪ ನಾಯಕರು ಇವರ ನಿರೂಪದಿಂದ ಸಿಡಸರು ಮಂಗಳೂರು ರಾಜ್ಯವನ್ನಾಳುವ ಕಾಲದಲ್ಲಿ........ ಪೊಳಲಿ ಕೇರದಲ್ಲಿ ಬಾಳಹ ಸಟ್ಟೋಜ ಸ್ಥಾನಿಕ ವೆಂಕಪ್ಪನ ಸರಿಕರಿಯಲ್ಲು ದೇವರಿಗೆ ಚತುಸ್ಥಾನದವರಿಗೆ ಸಹವಾಗಿ ಬರಕೊಟ್ಟ ಉಭಯ ಶಿಲಾಶಾಸನದ ಕ್ರಮವೆಂತೆಂದರೆ........

75. ಎರಡನೆಯ ಬುಕ್ಕರಾಯನ ಕಾಲದ ಕ್ರಿ. ಶ. 1405ರ ಬಾರಕೂರಿನ ಶಾಸನದಲ್ಲಿ ದೇಗುಲದ ಅಧಿಕಾರಿಯಾದ ಸ್ಥಾನ ಪತಿ ಚಿಕ್ಕಣ್ಣನ ಬೇಡಿಕೆ ಮೇರೆಗೆ ದಾನವು ಮಾಡಲ್ಪಟ್ಟಿದೆ ಎಂದು ತಿಳಿಯುತ್ತದೆ. ಅದೇ ಶಾಸನವು ಬಾರಕೂರಿನ ಸ್ಥಾನಿಕ ಪರಿವಾರ ನಾರಾಯಣದೇವನಿಗೆ ಮಾಡಿದ ದಾನವನ್ನು ಕುರಿತಾಗಿ ತಿಳಿಸುತ್ತದೆ.

76 ಕ್ರಿ. ಶ. 1586ರ ಕಾರ್ಕಳದ ಜೈನ ಶಾಸನದಲ್ಲಿ ಸ್ಥಾನಿಕರ ಹದಿನಾಲ್ಕು ಕುಟುಂಬಗಳು ದೇವರ ವಿಗ್ರಹಗಳನ್ನು ಅಭಿಷೇಕ ಮಾಡಿಸುವುದು, ಪೂಜಿಸುವುದು ಇತ್ಯಾದಿಯಾಗಿ ಬರೆದಿದೆ.

77. ಕಡಲೂರು ತಾಲೂಕಿನ ತಿರುವಸಿ ಎಂಬಲ್ಲಿಯ ದೇವಾಲಯದ ಸೇವೆಗಾಗಿ ದಾನಮಾಡಿದ ಒಂದು ಗ್ರಾಮವು ಆ ದೇಗುಲದ ಸ್ಥಾನಿಕ ವಶವಿರಿಸಲ್ಪಟ್ಟ ದಾಖಲೆ ಇದೆ.

78. ಚಿತ್ತೂರು ಜಿಲ್ಲೆಯ ಚಂದ್ರಗಿರಿ ತಾಲೂಕಿನ ಕಲಹಸ್ತಿದೇವಾಲಯದ ಸ್ಥಾನಿಕರು ಮದೆನಾಯಕ ಎಂಬವನಿಗೆ ಒಂದು ಮೊಬಲಗನ್ನು ಉಚಿತವಾಗಿ ಕೊಟ್ಟ ದಾಖಲೆ ಇದೆ (ಕ್ರಿ. ಶ. 1517)

79. ಅಂತೆಯೇ ಒಂದು ಶಿಲಾಶಾಸನವು 'ಎಂಟು ಹಳ್ಳಿಗಳ ಸ್ಥಾನಿಕರ ಮುಂದಿಟ್ಟು ಭೂವಿಭಾಗ ಮಾಡಿದ' ವೃತ್ತಾಂತವನ್ನು ಕೊಡುತ್ತದೆ.

80. ಶಾ. ಶ. 1463ನೇ (ಕ್ರಿ. ಶ. 1541) ಶಾರ್ವರಿ ಸಂವತ್ಸರದಲ್ಲಿ ವಿಜಯನಗರದ ಶ್ರೀ ವೀರಪ್ರತಾಪ ಶ್ರೀ ಅಚ್ಯುತ ದೇವ ಮಹಾರಾಯರು ಕೊಟ್ಟ ಧರ್ಮಶಾಸನದಲ್ಲಿ "ಈ ದೇವರಸ್ಥಾನಿಕರು ಗೌತಮಗೋತ್ರದ ಯಜುಶ್ಶಾಖೆಯುಮಳುವಾಗಿಲ ಕೇಶವ ದೇವರ ಸ್ಥಾನಿಕ ರಂಟಣಾಚಾರ್ಯರ ಮಗ ಚಿನ್ನಪ್ಪಯ್ಯನು ಸ್ಥಳದ ಸೇನಭೋವನು ಹರಿತಗೋತ್ರದ ಅಶ್ವಲಾಯನ ಸೂತ್ರದ ಋಕ್ ಶಾಖೆಯ........" ಎಂದಿದೆ.

81. ಹದಿನೇಳನೆಯ ಮತ್ತು ಹದಿನೆಂಟನೆಯ ಶತಮಾನಗಳಲ್ಲಿಯೂ ಅನೇಕ ಶಾಸನಗಳು ಸ್ಥಾನಿಕರಿಗಿದ್ದ ಗೌರವದ ಸ್ಥಾನವನ್ನು ಪುಷ್ಟೀಕರಿಸುತ್ತವೆ.

ಮಾಗಡಿ ತಾಲೂಕಿನ ಕಲ್ಯಗ್ರಾಮದ ಕಲ್ಲೇಶ್ವರ ದೇವರ ಪೂಜೆಯು ಸ್ಥಾನಿಕ ಲಿಂಗಣ್ಣ ಒಡೆಯರ ಮಗ ಚಂದ್ರಶೇಖರ ಒಡೆಯರಿಂದ ನಡೆಯುತ್ತಿತ್ತೆಂದೂ (ಕ್ರಿ. ಶ. 1621) ನೆಲ್ಲೂರು ಜಿಲ್ಲೆಯ ಚೆನ್ನಕೇಶವ ದೇವಾಲಯದ ಅಧಿಕಾರಿಯಾಗಿ ಅಲ್ಲಿಯ ಸ್ಥಾನಪತಿಯಾಗಿದ್ದನೆಂದೂ (1697-'98) ಬೇಲೂರಿನ ಚೆನ್ನ ಕೇಶವ ದೇವಾಲಯದಲ್ಲಿ ಕ್ರಿ. ಶ. 1700ರಲ್ಲಿ ದೊರಕಿದ ಶಾಸನದಲ್ಲಿ 'ಸೆಟ್ಟಿ-ಪಟ್ಟಣ—ಸ್ವಾಮಿಗಳು ಬೇಲೂರು ಸ್ಥಾನದವರು' ಸೇರಿ ಜಾರಿಗೆ ತಂದ ಸಾಮಾಜಿಕ ಕಾನೂನಿನ ದಾಖಲೆಯೂ, ಕ್ರಿ. ಶ. 1634ರಲ್ಲಿ ಶ್ರವಣ ಬೆಳಗೊಳದ ಸ್ಥಾನದವರ ಸಾಲವನ್ನು ಸರಕಾರವು ತೀರಿಸಿದ ಸಂಗತಿಯೂ, ಕ್ರಿ. ಶ. 1669ರಲ್ಲಿ ಎಳಹಂತನಾಡಿನ ಪ್ರಭು ಇಮ್ಮಡಿ ಕೆಂಪ ಗೌಡನು ವೀರೇಶ್ವರ ದೇವಾಲಯದಸ್ಥಾನಿಕ ಲಿಂಗಮಯ್ಯನ ಅನುಮತಿ ಮೇರೆಗೆ ನಾಮಶಿವಯ್ಯ ದೀಕ್ಷಿತರಿಗೆ ಮಾಡಿದ ರಿಯಾಯತಿಗಳೂ, ಕ್ರಿ. ಶ. 1759ರ ಸನದಿನ ಪ್ರಕಾರ ಮುಮ್ಮಡಿ ಕೃಷ್ಣರಾಜ ಒಡೆಯರು ನಂಜನಗೂಡು ದೇವಾಲಯಕ್ಕೆ ಶಂಕರದೀಕ್ಷಿತರ ಸ್ಥಾನದಲ್ಲಿ ಭಗವಾನು ಶಾಸ್ತ್ರಿಗಳನ್ನು ಸ್ಥಾನಿಕನಾಗಿ ನೇಮಿಸಿದ ದಾಖಲೆಯೂ, ನಮ್ಮದೇ ಶತಮಾನದಲ್ಲಿ ಪೆರಿಯಾಕುಳಂ ತಾಲೂಕಿನ ಶಿನ್ನಮನ್ನೂರು ವಿಷ್ಣುದೇವಾಲಯದ ಆಡಳಿತೆ ಮುಕ್ತೇಸರರು ಭೈರವ ಐಯ್ಯರೆಂಬ ಸ್ಥಾನಿಕನಾಗಿದ್ದ ವಿಷಯವೂ—ಬಹು ವಿಚಾರಣೀಯವೂ ಗಣನೀಯವೂ ಆಗಿವೆ.

**ಅವಲೋಕನೆ:**

ಮೇಲೆ ಕ್ರೋಢೀಕರಿಸಿದ ಶಾಸನಗಳ ದಾಖಲೆಯ ಆಧಾರದಿಂದ ಈ ಕೆಳಗಿನ ತೀರ್ಮಾನಗಳನ್ನೂ, ಚಾರಿತ್ರಿಕ ಸತ್ಯಗಳನ್ನೂ ಬಯಲಿಗೆ ತರುವುದರಲ್ಲಿ ಯಾವ ಸಂದೇಹವೂ ಇರಲಾರದು.

(1) ಸ್ಥಾನಿಕವೆಂಬ ಪದವು ಅಧಿಕಾರ ಸೂಚಕವಾದ ಪದವೇ ಹೊರತು ಅದು ಜಾತಿ ಸೂಚಕವಾದುದಲ್ಲ.

(2) ಸ್ಥಾನಿಕರಿಗೆ ಸಂಬಂಧಿಸಿದ ಶಾಸನಗಳು ಅಖಂಡ ಕರ್ನಾಟಕ, ತೆಲುಗು ಮತ್ತು ತಮಿಳು ನಾಡುಗಳಲ್ಲಿ ವ್ಯಾಪಕವಾಗಿದ್ದು, ಸ್ಥಾನಿಕ ಸ್ಥಾನದ ಪ್ರಾಮುಖ್ಯತೆಯನ್ನು ಎತ್ತಿ ಹಿಡಿದಿವೆ.

(3) ಕೌಟಿಲ್ಯನ ಅರ್ಥಶಾಸ್ತ್ರ ಪ್ರಕಾರ ಸ್ಥಾನಿಕನೆಂಬವನು ಆರ್ಥಿಕವ್ಯವಸ್ಥೆಯನ್ನು ನೋಡಿಕೊಳ್ಳುವ ಜಿಲ್ಲಾ ಅಧಿಕಾರಿಯಾದರೂ ಕಾಲಕ್ರಮೇಣ ನಮ್ಮ ರಾಷ್ಟ್ರ ನಿರ್ಮಾಣ ಅವಧಿಯಲ್ಲಿ ಸ್ಥಾನಿಕರಿಗೆ ದೇವಸ್ಥಾನಗಳಿಗೆ ಸಂಬಂಧಿಸಿದ ಭೂಮಿಯ ಮೇಲ್ವಿಚಾರಣೆಯನ್ನೂ, ದೇಗುಲಗಳ ಆಡಳಿತೆಯನ್ನೂ ನೋಡುವ ಉಚ್ಚಾಧಿಕಾರವನ್ನೂ ಕೊಟ್ಟ ವಿಚಾರವು ಸ್ಪಷ್ಟವಿದೆ.

(4) ಸ್ಥಾನಿಕರು ಒಂದು ಪ್ರತ್ಯೇಕವಾದ ಗುಂಪು ಯಾ ಒಂದು ಸಮಾಜಕ್ಕೆ ಸೇರಿದ ಜನ ಪ್ರಭೇದ ಯಾ ಜಾತಿ ಎಂದು ಕೌಟಿಲ್ಯನು ಎಲ್ಲಿಯೂ ಹೇಳಿದ್ದಿಲ್ಲ. ಆತನಿಗೆ ಸ್ಥಾನಿಕರೆಂದರೆ ಉತ್ತಮ ವರ್ಗದಿಂದ ಆರಿಸಿ ನೇಮಿಸಲ್ಪಟ್ಟ ಜಿಲ್ಲಾಧಿಕಾರಿಗಳು. ಹೀಗಾಗಿ ನಮ್ಮ ಕಾಲದಲ್ಲಷ್ಟೇ ಈ ಸ್ಥಾನಿಕರನ್ನು ಒಂದು ಜಾತಿಯಾಗಿ ಪರಿಗಣಿಸಿದ್ದು ಎಂದು ತಿಳಿದುಬರುತ್ತದೆ.

(5) ಶಾಸನಗಳಲ್ಲಿ ಬರುವ ಗೊರವರಾಗಲೀ, ತಮ್ಮಡಿಗಳಾಗಲೀ, ಅಂಬಲವಾಸಿಗಳಾಗಲೀ ಸ್ಥಾನಿಕರಲ್ಲವೆಂಬುದನ್ನು ಸ್ಪಷ್ಟವಾಗಿ ತಿಳಿಯತಕ್ಕದ್ದು.

(6) ಸ್ಥಾನಿಕರೆಂದರೆ ದೇಗುಲದಲ್ಲಿ ಕೆಲಸ ಮಾಡುವ ಕೆಳವರ್ಗದ ನೌಕರರಾಗಲೀ, ಸೇವಕ ವೃತ್ತಿಯವರಾಗಲೀ, ಪತಿತ ಬ್ರಾಹ್ಮಣರಾಗಲೀ ಅಲ್ಲವೆಂಬುದು ಸ್ಪಷ್ಟವಾಗಿ ಮನವರಿಕೆಯಾಗಬಲ್ಲುದು.

(7) ಸ್ಥಾನಿಕವೆಂಬ ಅಧಿಕಾರವು ಜೈನರಲ್ಲಿಯೂ, ಶ್ರೀವೈಷ್ಣವರಲ್ಲಿಯೂ, ಕಾಳಮುಖರು ಹಾಗೂ ಶೈವರಲ್ಲಿಯೂ ಇದ್ದ ಗೌರವದ ಸ್ಥಾನವಾಗಿತ್ತು.

**ಜೈನ ಸ್ಥಾನಿಕರು:**

ಶ್ರೀಮತ್ ಸೆಂಬನೂರು ಸ್ಥಾನಾಚಾರ್ಯ ಶಾಂತಿನಾಯನ ಪಂಡಿತರ ಕೈಯ್ಯಲ್ಲು ಶ್ರೀಮತ್ ಪಿರಿಯ ದಂಡನಾಯಕಿ ಕಾಳಿಕಾವ್ವೆ........ತ್ರಿಭುವನ ಕರ್ತಾರ ಸ್ಥಾನಮಂ ಆಳುತ್ತ ಇರೆ....ಶಾಂತಿನಾಥ ಘಟಿಕ ಸ್ಥಾನ ಮಂಡಲಾಚಾರ್ಯ.

**ಶ್ರೀ ವೈಷ್ಣವ ಸ್ಥಾನಿಕರು:**

ಈ ಸ್ಥಳದ ಸ್ಥಾನಿಕ ಶ್ರೀವೈಷ್ಣವರು ಮೂವತ್ತಕುಂ (ಕ್ರಿ. ಶ. 1174 ಶ್ರೀವೈಷ್ಣವ ನರಸಿಂಹ ದೇವಸ್ಥಾನ ಬೇಲೂರು)

**ಕಾಳಾಮುಖಸ್ಥಾನಿಕರು:**

ಜಗದೇಶ್ವರದ ಸ್ಥಾನಪತಿ ಶಿವಶಕ್ತಿ ಪಂಡಿತರಿಗೆ (ಕ್ರಿ. ಶ. 1152—ಗಣಪತಿ ದೇವಸ್ಥಾನ ಕಣಿಕಟ್ಟೆ, ಅರಸಿಕೇರೆ)

ಕಾಶ್ಯಪ ಗೋತ್ರದ ಆಪಸ್ಥಂಭ ಸೂತ್ರದವಕ್ಕೆ ಜಲ್ಲಿ ಮಂಗಲ ಸ್ಥಾನಪತಿ ತಿಮ್ಮರಸ (ಗಂಗಡಿಪುರಶಾಸನ ಕ್ರಿ. ಶ. 1495)

(8) ದೇಗುಲದ ಅರ್ಚಕನಿಗೂ (ಪೂಜಾರಿಗೂ) ಸ್ಥಾನಿಕಗೂ ಗುರುತರವಾದ ವ್ಯತ್ಯಾಸ ಕಂಡುಬರುತ್ತದೆ. ಸ್ಥಾನಿಕನು ಕೆಲವುಸಂದರ್ಭಗಳಲ್ಲಿ ಅರ್ಚನಾಕಾರ್ಯದಲ್ಲಿ ನಿರತನಾಗಿದ್ದರೂ,ಆತನ ಪ್ರಧಾನ ಕರ್ತವ್ಯ ದೇವಳದ ಪಾರುಪತ್ಯ ಮತ್ತು ವ್ಯವಸ್ಥೆ.

(9) ಸ್ಥಾನಿಕ, ಸ್ಥಾನಪತಿ, ಸ್ಥಾನಾಧ್ಯಕ್ಷ,ಸಂಸ್ಥಾನಿಕ,ಸ್ಥಾನಾಚಾರ್ಯ ಮತ್ತು ತಾನತ್ತಾರ್ —ಇವೆಲ್ಲ ಪದಗಳು ಪರಸ್ಪರ ಪರ್ಯಾಯ ಪದಗಳಾಗಿದ್ದು ಒಂದೇ ಅರ್ಥ ವನ್ನೀಯುವುವು.

(10) ಸ್ಥಾನಿಕರು ದೇವಸ್ಥಾನಗಳ ಪೂಜಾದಿ·ವಿನಿಯೋಗಗಳನ್ನು ನಡೆಸುವ ಅಧಿಕಾರಿಗಳಾಗಿಯೂ, ಕೆಲವೊಮ್ಮೆ ಈ ವಿನಿಯೋಗಗಳನ್ನು ತಾವೇ ಮಾಡುವವ ರಾಗಿಯೂ, ದೇಗುಲಗಳ ಆಡಳಿತೆಯ ಕುರಿತಾಗಿ ಸರಕಾರಕ್ಕೆ ಮನವಿಯನ್ನು ಒಪ್ಪಿ ಸುವ ಹಕ್ಕುಳ್ಳವರಾಗಿಯೂ, ಅವರ ಸ್ಥಾನದಿಂದಾದ ಗೌರವದ ಫಲವಾಗಿ ಸಾರ್ವ ಜಿಕ ರೀತಿ, ನೀತಿಗಳನ್ನು ರೂಪಿಸುವ ಕರ್ತವ್ಯವುಳ್ಳವರಾಗಿಯೂ, ದೇಗುಲದ ಪರವಾಗಿ ದಾನತೆಗೆದುಕೊಳ್ಳುವ, ಉಂಬಳಿ ಸ್ವೀಕರಿಸುವ, ದೇಗುಲದ ಕಡೆಯಿಂದ ದಾನ, ಯಾ ಉಂಬಳಿಕೊಡುವ ಅಧಿಕಾರವುಳ್ಳವರಾಗಿಯೂ ಇದ್ದರು.

(12) ಸ್ಥಾನಿಕರು ದೇವರ ಸ್ಥಾನಿಕರಾಗಿರುವುದು ಔಚಿತ್ಯವನ್ನೊಳಗೊಂಡಿದೆ. ಕಾರಣ,ಅವರ ಸ್ವಾಧೀನವಿರುವ ಆಸ್ತಿಪಾಸ್ತಿಯಾಗಲೀ, ಉಂಬಳಿಯಾಗಲೀ, ಅವರ ಸ್ವಂತದ್ದಿರದೆ ದೇವರಿಗೆ ಸಂಬಂಧಿಸಿದುದಾದುದರಿಂದ, ಅದನ್ನು ಹಸ್ತಾಂತರ ಮಾಡುವ ಅಧಿಕಾರವು ಮೊದಲು ಅವರಿಗಿರಲಿಲ್ಲ. ಕಾಲಕ್ರಮೇಣ ಅದು ಬಳಕೆಗೆ ಬಂತೆಂದು ತಿಳಿಯುತ್ತದೆ.

ಹಿಂದೂ ದೇವಾಲಯಗಳಲ್ಲಿ ಸ್ಥಾನಿಕರಾಗಿರುವವರು ಪರಿಶುದ್ಧ ಬ್ರಾಹ್ಮಣರೇ ಆಗಿರುವರು ಎಂಬುದಕ್ಕೆ ಯಾವ ಸಂದೇಹವೂ ಇಲ್ಲ. ಅವರ ಈ ಬ್ರಾಹ್ಮಣ್ಯದೊಡನೆ ದೇವಸ್ಥಾನದ ಆಗುಹೋಗುಗಳನ್ನು ವ್ಯವಸ್ಥಿತಗೊಳಿಸುವ ಅತಿ ಮಹತ್ವದ ಮತ್ತು ಗೌರವದ ಸ್ಥಾನವೂ ಸೇರಿದ್ದುದು ಅವರ ವೈಶಿಷ್ಟ್ಯವನ್ನು ಹೆಚ್ಚಿಸಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ (ತುಳುವದಲ್ಲಿ) ಅವರು ದೇವಸ್ಥಾನಗಳ ಸೇವಕರಾಗಿ ಪತಿತ ಬ್ರಾಹ್ಮಣರೆಂದು ತಿಳಿಯಲ್ಪಟ್ಟುದು ವಿಷಾದಕರವಾದ ಸಂಗತಿಯಾಗಿದೆ.

ಅವರ ಪತನಕ್ಕೆ ಅನೇಕ ಕಾರಣಗಳಿವೆ—ಅವರು ತಮ್ಮ ಸ್ಥಾನವನ್ನು ಕಳಕೊಂಡುದು, ಬಹು ಸಂಖ್ಯಾಕರಾದ ಇತರ ಬ್ರಾಹ್ಮಣರ ಪ್ರಾದುರ್ಭಾವ, ಮತಸಂಬಂಧವಾದ ಭಿನ್ನಭಾವ ಇತ್ಯಾದಿಗಳಿಂದಲೇ ಎಂದು ಒತ್ತಿ ಹೇಳಬೇಕಾಗುತ್ತದೆ.

† ಡಾಕ್ಟರ್ ಸಾಲೆತೋರರ "the Sthanikas and Their Historical Importance" ಎಂಬ ಗ್ರಂಥದ ಆಧಾರದಿಂದ ಬರೆದುದು.

# ತುಳುನಾಡಿನ ಬ್ರಾಹ್ಮಣರ ವರ್ಗೀಕರಣ

ಹಿಂದಿನ ಲೇಖನಗಳಲ್ಲಿ ತುಳುನಾಡಿಗೆ ಬ್ರಾಹ್ಮಣರು ಯಾವ ಯಾವ ಕಾಲದಲ್ಲಿ ಯಾವ ಯಾವ ರೀತಿಯಲ್ಲಿ ವಲಸೆ ಬಂದು ನೆಲೆನಿಂತು ನಾಡಿನ ಸಮಾಜದ ಮೇಲೆ ತಮ್ಮ ಪ್ರಭಾವವನ್ನು ಬೀರಿದರು ಎಂಬುದರ ಒಂದು ಸ್ಥೂಲ ವಿವರವನ್ನು ಕೊಟ್ಟು ದಾಯಿತು. ಈ ಲೇಖನದಲ್ಲಿ ನಮ್ಮ ನಾಡಿನ ಬ್ರಾಹ್ಮಣರ ವರ್ಗೀಕರಣವನ್ನು ಮಾಡಲು ಪ್ರಯತ್ನಿಸಿದ್ದೇನೆ. ನಮ್ಮ ನಾಡಿನ ಬ್ರಾಹ್ಮಣರಲ್ಲಿ ಇರುವಷ್ಟು ಪ್ರಭೇದ ಗಳು ಬೇರಾವ ಕಡೆಯಲ್ಲೂ ಇಲ್ಲವೆಂಬುದು ಆಶ್ಚರ್ಯವನ್ನು ಉಂಟು ಮಾಡುವ ಸಂಗತಿ.

ತುಳುವದ ಬ್ರಾಹ್ಮಣರನ್ನು ಅವರು ಐತಂಬ ಕಾಲಕ್ಕನುಗುಣವಾಗಿ ಮೂರು ವರ್ಗಗಳಾಗಿ ವಿಭಾಗಿಸಬಹುದು. (1) ಸ್ಥಾನಿಕರು (2) ಹವಿಕರು (3) ಐಚ್ಛತ್ರದ ಬ್ರಾಹ್ಮಣರು (ಶಿವಳ್ಳಿ ಮತ್ತು ಕೋಟ ಬ್ರಾಹ್ಮಣರು) ಇವರ ಸೂಕ್ಷ್ಮ ಪರಿಚಯವನ್ನು ಈ ಕೆಳಗೆ ಕಾಣುವಿರಿ.

**ಸ್ಥಾನಿಕರು:** – ಬ್ರಾಹ್ಮಣರಲ್ಲಿ ಮೊದಲಿಗರಾದ ತುಳುನಾಡಿನಲ್ಲಿ ಬ್ರಾಹ್ಮಣ್ಯ ನನ್ನು ಪ್ರಥಮ ಬಿತ್ತರಿಸಿದ ಸ್ಥಾನಿಕ ಬ್ರಾಹ್ಮಣರು ಕ್ರಿ. ಪೂ. 2ನೇ ಶತಮಾನಕ್ಕಿಂ ತಲೂ ಮುಂಚಿತವಾಗಿ ಇಲ್ಲಿಗೆ ಬಂದಂತೆ ಕಂಡು ಬರುತ್ತದೆ. ಇವರು ಪ್ರಧಾನವಾಗಿ ಋಗ್ವೇದಿಗಳು, ಆಶ್ವಲಾಯನ ಸೂತ್ರದವರು ಮತ್ತು ಸ್ಮಾರ್ತ ಬ್ರಾಹ್ಮಣರು. ಚರಿತ್ರೆ ತಿಳಿಸುವಂತೆ ಇವರು ತುಳುನಾಡಿನ ದೇವಳದ ಅಧಿಕಾರಿಗಳಾಗಿದ್ದು (ಕ್ರಿ. ಶ. 15ನೇ ಶತಮಾನದ ವರೆಗೆ) ಶೃಂಗೇರಿ ಮಠದ ಶಿಷ್ಯರಾಗಿರುವರು. ಶೃಂಗೇರಿ ಜಗದ್ಗುರು ಮಠಕ್ಕೆ ತುಳುವವೂ ಸೇರಿತ್ತು ಎಂಬುದು ನಿರ್ವಿವಾದ. ಸ್ಥಾನಿಕರ ಈ ಮಠದ ಶಿಷ್ಯ ತ್ವವು ಇಂದು ನಿನ್ನೆಯದಲ್ಲ, ಹಳಗಾಲದ್ದು ಎಂಬುದನ್ನೂ ತಿಳಿದುಕೊಳ್ಳಬೇಕು. ಆನಂದಗಿರಿ ವಿರಚಿತ ಶಂಕರ ದಿಗ್ವಿಜಯದಲ್ಲಿ ಹಸ್ತಾಮಲಕಾಚಾರ್ಯರು ಪಶ್ಚಿಮಕರಾ ವಳಿಗೆ ಬಂದು ಸ್ಮಾರ್ತತತ್ವಕ್ಕನುಗುಣವಾದ ವೈಷ್ಣವ ಧರ್ಮವನ್ನು ಪ್ರಚಾರ ಮಾಡಿದ ಉಲ್ಲೇಖವಿದೆ. ರಜತಪೀಠದಲ್ಲಿ (ಉಡುಪಿ) ಶ್ರೀಕೃಷ್ಣನನ್ನು ಪ್ರತಿಷ್ಠಿಸಿದ ರೆಂದೂ ಅದರಲ್ಲಿದೆ-

"ಹಸ್ತಾಮಲಕಸ್ತು ಭೂಮಧ್ಯಾತ್ ಪಶ್ಚಿಮ ಖಂಡ ದ್ವಿಗಿಜಯಂಕೃತ್ವಾ। ಪಂಚಮುದ್ರಾಂಕ ವಿರಾಜಿತಾನ್ । ಭಗವದಷ್ಟಾಕ್ಷರ ಮಂತ್ರ ಜಪಾಸಕ್ತಾನ್ । ಕಾಂಶ್ಚಿತ್ ಬ್ರಾಹ್ಮಣಾದೀನ್ ಕೃತ್ವಾ । ರಜತಪೀಠಾದಿಸ್ಥಲೇಶು ಕೃಷ್ಣಾದಿ ದೇವತಾ ಪ್ರತಿಮಾಂ ಕೃತ್ವಾ । ಮತಂ ವಿಜ್ಞಾಪಯಿತುಂ ಪುನಃ ಪರಮಗುರುಂ ಪ್ರಾಪ ।

ದೃಷ್ಟ್ವಾತದಾನೀ ಕಾಂಚ್ಯಾಂ ಪರಮ ಗುರುಂ ಶಂಕರಾಚಾರ್ಯ ನತ್ವಾತತ್ |
ಪಾದಯುಗಳೀ ಸ್ವಕೃತಂ ವಿಜ್ಞಾಪಯಾಮಾಸ | ”

ಈ ಸ್ಥಾನಿಕರಲ್ಲಿ ಇತರ ಬ್ರಾಹ್ಮಣರಲ್ಲಿರುವಂತೆ ಬೇರೆ ಬೇರೆ ಕುಲನಾಮಗಳು ಕಂಡುಬರುವುದಿಲ್ಲ. ತಮ್ಮ ಹೆಸರುಗಳ ಅಂತ್ಯದಲ್ಲಿ ಇವರು ದಕ್ಷಿಣ ಹಿಂದೂ ದೇಶದಲ್ಲಿ ಸಾರ್ವತ್ರಿಕವಾಗಿಬ್ರಾಹ್ಮಣರಲ್ಲಿ ಕಂಡುಬರುವ ಪ್ರತ್ಯಯುಗಳನ್ನೂ ಇರಿಸಿಕೊಂಡದ್ದನ್ನೇ ಕಂಡುಬರುತ್ತದೆ.

1) ಜೀಯ — ತಮ್ಮಣ್ಣ ಜೀಯ, ಮಲ್ಲ ಜೀಯ, ಸೋಮ ಜೀಯ.
2) ಅಣ್ಣ — ದೇವಣ್ಣ, ಪುಟ್ಟಣ್ಣ, ಚಿಕ್ಕಣ್ಣ.
3) ಅಯ್ಯ — ಬಾಯಿರಯ್ಯ, ಸೋಮಯ್ಯ, ಕೃಷ್ಣಯ್ಯ
4) ಅಪ್ಪ — ರಂಗಪ್ಪ, ದೇವಪ್ಪ, ವೆಂಕಟಪ್ಪ, ಅಪ್ಪಾಜಿ.
5) ಶಾಸ್ತ್ರಿ — ಕೃಷ್ಣಶಾಸ್ತ್ರಿ, ಶಾಮ ಶಾಸ್ತ್ರಿ, ವಿಷ್ಣುಶಾಸ್ತ್ರಿ.
6) ಶರ್ಮ — ರಾಮಶರ್ಮ, ಗೋವಿಂದ ಶರ್ಮ, ರವಿಶರ್ಮ.
7) ಓಜ — ನಟ್ಟೋಜ, ಮೊರೋಜ.
8) ಜೋಯಿಸ — ಪದ್ಮನಾಭ ಜೋಯಿಸ, ಕೃಷ್ಣ ಜೋಯಿಸ, ಶಂಕರ ಜೋಯಿಸ

ಅಖಿಲ ಕರ್ನಾಟಕದಲ್ಲಿ ಶಾಸನಗಳ ಆಧಾರದಿಂದ ಈ ಸ್ಥಾನಿಕರು ಆಚಾರ್ಯ, ಪಂಡಿತ, ರಾಜಗುರು, ಒಡೆಯರು, ದೀಕ್ಷಿತ, ಸಮಯ ಚಕ್ರವರ್ತಿ, ತತ್ವಪದ, ಶಿವ ಶಕ್ತಿ ಎಂಬ ಹೆಸರುಗಳನ್ನು ಇರಿಸಿಕೊಂಡಿದ್ದರೆಂಬುದುಸ್ಪಷ್ಟತಿಳಿಯುತ್ತದೆ.ಸ್ಥಾನಿಕರ ಮೂಲ ಮತ್ತು ಚರಿತ್ರೆಯನ್ನು ಹಿಂದಕ್ಕೆ ವಿಶದವಾಗಿ ಕೊಟ್ಟಿದೆ. ಅವನ್ನೆಲ್ಲ ಪುನರಾವರ್ತಿಸುವುದರಲ್ಲಿ ಏನೂ ಔಚಿತ್ಯವಿರಲಾರದದಷ್ಟೆ.

**ಹವಿಕ ಬ್ರಾಹ್ಮಣರು:** — ಹವಿಕ ಬ್ರಾಹ್ಮಣರನ್ನು ತೌಳವ ಬ್ರಾಹ್ಮಣರನ್ನಾಗಿ ಸೇರಿಸಿಕೊಳ್ಳಲು ಏನು ಕಾರಣವೆಂದುಕೆಲವರುಆಶ್ಚರ್ಯಪಡಬಹುದು. ಈ ನಿರ್ಧಾರಕ್ಕೆ ಬರಲುನನಗೆ ಒಂದು ಬಲವಾದ ಕಾರಣ ಕಂಡುಬರುತ್ತದೆ.ತುಳುನಾಡುಎಂಬುದನ್ನು ನಾನು 'ತುರುನಾಡು', ಹಾಗೂ ಗೋಪ ರಾಷ್ಟ್ರ, ಗೋರಾಷ್ಟ್ರವೆಂಬುದಾಗಿ ಪ್ರತಿಪಾದಿಸಿದ್ದೇನೆ. ಈ ಗೋರಾಷ್ಟ್ರಕ್ಕೆ ಸೇರಿದವರು ಹವಿಕ ಬ್ರಾಹ್ಮಣರಾದ ಎದರಿಂದಲೂ, ಈ ಗೋರಾಷ್ಟ್ರವು ಉತ್ತರದಲ್ಲಿ ಗೋಕರ್ಣದಿಂದ, ದಕ್ಷಿಣದಲ್ಲಿ ಮಲೆಯಾಳದ ವರೆಗೆ ವಿಸ್ತೃತವಾದುದರಿಂದಲೂ, ಹವಿಕರೂ ತುಳು ಬ್ರಾಹ್ಮಣರೆಂದೇ (ತೌಳವ ಬ್ರಾಹ್ಮಣರು) ಪರಿಗಣಿಸಲ್ಪಡುವುದು ವಿಹಿತ. ಉತ್ತರ ಕನ್ನಡ ಜಿಲ್ಲೆಯು ಹವಿಕ ದೇಶವಾಗಿದೆ. ಇದನ್ನು 'ಹೈಗ'ವೆಂದು ಕರೆಯುತ್ತಾರೆ. ಈ 'ಹೈಗ'ವೆಂಬುದು ಪಶುಕದ ರೂಪಾಂತರವೆಂಬುದನ್ನು ಹಿಂದಕ್ಕೆ ಸ್ಪಷ್ಟಪಡಿಸಿದೆ. ಪಶುಕವೆಂದರೂ ಗೋರಾಷ್ಟ್ರ

ವೇದರೂ, ತುಳುನಾಡೆಂಬರೂ ಒಂದೇ. ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು 19ನೆಯ ಶತಮಾನದ ಮಧ್ಯಕಾಲದ ವರೆಗೆ ಒಂದೇ ಭೌಗೋಳಿಕ ಮತ್ತು ರಾಜಕೀಯ ಘಟಕವಾಗಿದ್ದುವು. ಗೋರಾಷ್ಟ್ರವು (ಎಂದರೆ ತುಳುನಾಡು) ಆದಿಯಲ್ಲಿ ಅವಿಭಾಜ್ಯವಾಗಿದ್ದು, ಅನಂತರದಲ್ಲಿ ತುಳುನಾಡು ಈ ಭೂವಿಭಾಗದ ದಕ್ಷಿಣ ಪಾರ್ಶ್ವಕ್ಕೂ ಪಶುಕವು (ಹೈಗ) ಉತ್ತರ ಪಾರ್ಶ್ವಕ್ಕೂ ಅನ್ವಯಿಸುವಂಥ ಸಂಪ್ರದಾಯವಾಯಿತೆನ್ನಬಹುದು. ಈ ಹವಿಕರು (ಹವ್ಯಕವೆಂಬ ಹೆಸರು ಅಷ್ಟೊಂದು ಸರಿಯಲ್ಲವೆಂದೂ ನನ್ನ ಅಭಿಪ್ರಾಯ) ತುಳುನಾಡಿಗೆ ಎರಡನೆಯ ಕಂತಿನಲ್ಲಿ ಮೂರನೆಯ ಶತಮಾನದಲ್ಲಿ ಬಂದು ನೆಲೆನಿಂತವರು.

E. Thurst on ರು, ಅವರ The Cases and Tribes of Southern India ಎಂಬ ಗ್ರಂಥದ ಮೊದಲ ಭಾಗದಲ್ಲಿ ತುಳು ಬ್ರಾಹ್ಮಣರನ್ನು ವರ್ಗೀಕರಣ ಮಾಡುವಾಗ ಹವಿಕರನ್ನು ಸೇರಿಸಿಕೊಂಡುದು ನ್ಯಾಯವೇ ಸರಿ. "ಹವ್ಯಕ ಸಮಾಜ ಮತ್ತು ಶ್ರೀ ಗುರು ಮಠದ ಸಂಕ್ಷಿಪ್ತ ಇತಿಹಾಸ''ಎಂಬ ಪುಸ್ತಕದಲ್ಲಿ "ಹವ್ಯಕರ ಸಾಮಾಜಿಕ ಆಡಳಿತಗಳು" ಎಂಬ ಶಿರೋನಾಮೆಯ ಕೆಳಗೆ ಹೀಗೆ ವಿವರ ಕಂಡು ಬರುತ್ತದೆ.

"ಇವರ ಸಾಮಾಜಿಕ ರೀತಿನೀತಿಗಳು ಮತ್ತು ಧರ್ಮ ನಿರ್ಣಯ,ವೃತ್ತಿ ಕಲ್ಪನೆ ಮುಂತಾದುವುಗಳಲ್ಲಿ ರಾಜನು ಕೈ ಹಾಕುವಂತಿರಲಿಲ್ಲ. ಬ್ರಾಹ್ಮಣ ಪ್ರಮುಖನಾದ ಭಟ್ಟಾಚಾರ್ಯನ ಸಲಹೆ ಮತ್ತು ಸೂಚನೆಯಂತೆ ಲೋಕಾದಿತ್ಯನೇ ಇವರಿಗೆ ಅಧಿಕಾರಗಳು ವಿಂಗಡಿಸಿ, ಸಂಕೇತನಾಮಗಳನ್ನು ಕೊಟ್ಟನು. ಸಭಾಹಿತ. ಮಧ್ಯಸ್ಥ, ಯಾಜೀ. ಅವಭೃಥ. ಭಟ್ಟ, ತಾಂತ್ರಿಕ, ಪ್ರಭು–ಇವೇ ಏಳು ಸಂಕೇತಗಳು.

೧. ಸಭಾಹಿತ– ಇವನು ಸಭಾ ಮಧ್ಯದಲ್ಲಿ ಅಧ್ಯಕ್ಷನಾಗಿದ್ದು, ಧರ್ಮಾಧರ್ಮಗಳ ವಿಚಾರಣೆನಡೆಸಿ ನಿರ್ಣಯ ಹೇಳುವವನು (ಜಡ್ಜ್)

೨. ನ್ಯಾಯ ವಿಚಾರ ಸಮಯದಲ್ಲಿ ಮಧ್ಯಸ್ಥನಾಗಿ ನಿಂತು ವಿಷಯಗಳನ್ನು ಮಂಡಿಸುವವನು. (ಲಾಯರ್)

೩. ಯಾವಾಗಲೂ ಯಜ್ಞ ದೀಕ್ಷಿತನಾಗಿರುವವನೇ 'ಯಾಜೀ' (ದೀಕ್ಷಿತ)

೪. ಯಜ್ಞಾಂತಾವಭೃಥಸ್ನಾನಕರ್ತನೇ'ಅವಭೃಥ'ನು

೫. ವೇದ ಶಾಸ್ತ್ರ ನಿಪುಣನಾದ, ಪೂರ್ವಾಪರ ಕರ್ಮಕಾಂಡ ಕುಶಲನೇ (ಭಟ್ಟ)

೬. ವೈದಿಕ, ಆಗಮ, ತಂತ್ರಗಳಲ್ಲಿ ಪ್ರವೀಣನೇ 'ತಾಂತ್ರಿಕ'ನು

೭. ಇವರೆಲ್ಲರಿಗೂ ಒಡೆಯನಾಗಿ ಇವರಿಗಿರುವ ಅನುಕೂಲ ಅನಾನುಕೂಲತೆಗಳನ್ನು ತಿಳಿದು ಯೋಗ್ಯ ವ್ಯವಸ್ಥೆ ಮಾಡುವವನೇ 'ಪ್ರಭು' (ಹೆಗ್ಗಡೆ)

ಈ ರೀತಿಯಾಗಿ ಅವರಿಗೆ ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಗಳಿಗನುಸಾರವಾದ ಅನ್ವರ್ಥನಾಮಗಳಿವೆ. ಇವೆಲ್ಲ ಅಧಿಕಾರಗಳು ಸಾಮಾನ್ಯವಾಗಿ ಆನುವಂಶಿಕವಾಗಿಯೇ ನಡೆದು ಬರುತ್ತಿದ್ದುವು. ಆದ್ದರಿಂದ ಈಗಲೂ ಭಟ್ಟ, ಹೆಗ್ಗಡೆ ಪ್ರಭು), ದೀಕ್ಷಿತ, ಸಭಾಹಿತ, ತಾಂತ್ರಿಕ (ತಂತ್ರಿ) ಈ ಐದು ಉಪನಾಮಗಳು ಪ್ರಚಲಿತವಾಗಿವೆ. ಅವರ ಕಾರ್ಯಗಳು ಮಾತ್ರ ಪ್ರಚಲಿತವಿಲ್ಲ. ಭಟ್ಟನ ಕೆಲಸವೊಂದು ಮಾತ್ರ ಈ ಹೊತ್ತಿಗೂ ನಡೆಯುತ್ತಿದೆ" ಈ ವಿವರದಲ್ಲಿ ಟೀಕೆಗೆ ಆಸ್ಪದವುಳ್ಳ ವಿಷಯ ಹೆಚ್ಚೇನೂ ಕಂಡು ಬರುವುದಿಲ್ಲ. ಲೋಕಾದಿತ್ಯನೇ ಅಧಿಕಾರವನ್ನು ವಿಂಗಡಿಸಿ ಕೊಟ್ಟನೆಂಬುದು ಹೊರತಾಗಿ ಬ್ರಾಹ್ಮಣರಿಗೆ ಅನುಗುಣವಾದ ಅವರ ಕರ್ತವ್ಯವನ್ನು ಸೂಚಿಸುವ ಹೆಸರುಗಳಿವು ಎಂಬುದರಲ್ಲಿ ಎರಡು ಮಾತಿರಲಾರದು.

ಹವಿಕ ಬ್ರಾಹ್ಮಣರ ಮೂಲಕ್ಕೆ ಸೇರಿದ ಒಂದು ವಿಭಾಗವು ಸಕಲಪುರಿ ಬ್ರಾಹ್ಮಣ ವರ್ಗ. ಇವರು ಹವಿಕರಿಂದ ಮತಸಂಬಂಧವಾದ ಮತ್ತು ಸಾಮಾಜಿಕ ಬಿಕ್ಕಟ್ಟಿನಿಂದಾದ ವಿಭಿನ್ನತೆಯನ್ನು ಹೊಂದಿ, ಪ್ರತ್ಯೇಕವಾದಂತೆ ಕಂಡು ಬರುತ್ತದೆ. ಇವರು ರಾಮಚಂದ್ರಪುರದ ಆಧಿಪತ್ಯವನ್ನೊಪ್ಪುವುದಿಲ್ಲ. ಸಕಲಪುರಿ ಎಂಬ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಗಡಿಯಲ್ಲಿರುವ ಅವರದ್ದೇ ಆದ ಮಠದ ನೇತೃತ್ವದಲ್ಲಿ ತಮ್ಮ ಕಾರ್ಯಗಳನ್ನು ಎಸಗುತ್ತಾರೆ. ಸಹ್ಯಾದ್ರಿಖಂಡದಲ್ಲಿ ಇವರನ್ನು ವಿಧವಾಪುತ್ರರೆಂದು, ಆ ಕಾರಣದಿಂದ ಪತಿತ ಬ್ರಾಹ್ಮಣರೆಂದೂ–'ತೇಷಾಂ ಸಂಸರ್ಗ ಮಾತ್ರೇಣಪಾತಿತ್ಯ ಮನುಗಚ್ಛತಿ'— ಇವರ ಸಂಸರ್ಗ ಮಾತ್ರದಿಂದ ಪಾತಿತ್ಯ ಲಭಿಸುವುದೆಂದೂ ಹೇಳಿದೆ. ಇದು ದ್ವೇಷಪೂರಿತ ತೀರ್ಮಾನವೆಂಬುದರಲ್ಲಿ ಸಂದೇಹವೇನೂ ಇಲ್ಲ. ಅಹಿಚ್ಛತ್ರ ಬ್ರಾಹ್ಮಣರು(ತೌಳವ ಬ್ರಾಹ್ಮಣರು?) ತುಳುನಾಡಿನಲ್ಲಿ, ಅದರಲ್ಲೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, ಇವರು ಬ್ರಾಹ್ಮಣ ಸಮಾಜದಲ್ಲಿ ಬಹುಸಂಖ್ಯಾಕರಾಗಿರುವರು. ಬ್ರಾಹ್ಮಣರಲ್ಲಿ ಇವರು ಉತ್ತಮ ವರ್ಗಕ್ಕೆ ಸೇರಿದವರೆಂದು ಸಂಪ್ರದಾಯ ತಿಳಿಸುತ್ತದೆ. ಸಹ್ಯಾದ್ರಿಖಂಡ ಇದನ್ನು ಪುಷ್ಟೀಕರಿಸುತ್ತದೆ. ಈ ಬ್ರಾಹ್ಮಣರು ಯಾವಾಗ ನಮ್ಮ ನಾಡಿಗೆ ಬಂದರು ಎಂಬುದರ ವಿಮರ್ಶೆಯನ್ನು ಈ ಮೊದಲೇ ಮಾಡಿದ್ದೇನೆ. ಇವರ ಮೂಲವನ್ನು ತಿಳಿಸುವ ಸಹ್ಯಾದ್ರಿಖಂಡ ಹಾಗೂ ಗ್ರಾಮಪದ್ಧತಿಗಳ ಕುರಿತಾಗಿಯೂ ಹಿಂದಕ್ಕೆ ವಿಮರ್ಶೆ ಮಾಡಿದ್ದೇನೆ. ಗಾಮಪದ್ಧತಿಯಿಂದ ತಿಳಿಯಬಹುದಾದ ಮುಖ್ಯಾಂಶವಾದರೂ ಏನು? ಈ ಬ್ರಾಹ್ಮಣರು ಕಾಲಾನುಗತಿಕದಿಂದ ಹೇಗೆ ವೃದ್ಧಿಯಾಗುತ್ತಾ ಬಂದರು? ಸಂಖ್ಯಾಬಲ ಅಧಿಕವಾದಂತೆ ಮೇಲು ಕೀಳು ಎಂಬ ಭಾವನೆ ಹೇಗೆ ಮೂಡಿದವು? ಧಾರ್ಮಿಕ ಭಾವನೆಗಳಲ್ಲಿ ಭಿನ್ನತೆಯುಂಟಾಗಿ ಹೇಗೆ ಅವರಲ್ಲಿ ಬಿಕ್ಕಟ್ಟು ತೋರಿಬಂತು–ಎಂಬಿತ್ಯಾದಿ ವಿಷಯಗಳು. ಈ ಅಹಿಚ್ಛತ್ರ ಬ್ರಾಹ್ಮಣರಲ್ಲಿ ಅವರವರು ಬಂದು ನೆಲೆಸಿದ ಸ್ಥಳಕ್ಕನು

ಸಾರವಾಗಿ ಹೆಸರುಗಳನ್ನು ಅಂತು ಬೇರೆ ಬೇರೆ ವರ್ಗಗಳು ಅಸ್ತಿತ್ವಕ್ಕೆ ಬಂದುವು ಉದಾಹರಣೆಗಳಿಂದ ಈ ವಿಷಯ ಮನನವಾಗಬಲ್ಲದು:

(i) ಶಿವಳ್ಳಿ ಬ್ರಾಹ್ಮಣರು; ಉಡುಪಿ ತಾಲೂಕಿನ ಶಿವಳ್ಳಿ ಗ್ರಾಮದಲ್ಲಿ ವಾಸಿಸುವವರು ಮತ್ತು ಅಲ್ಲಿಂದ ಇತರ ಕಡೆಗಳಿಗೆ ಹೊರಟು ಹೋದವರು. (ಶಿವನ ಹಳ್ಳಿ, ಶಿವಳ್ಳಿ)

(ii) ಕೋಟ ಬ್ರಾಹ್ಮಣರು; ಉಡುಪಿ ತಾಲೂಕಿನ ಕೋಟವೆಂಬ ಗ್ರಾಮದಲ್ಲಿ ನೆಲೆನಿಂತವರು ಮತ್ತು ಅಲ್ಲಿಂದ ಇತರ ಕಡೆಗೆ ಹೋಗಿ ವಸಾಹತು ನಿಂತವರು (ಈ ಕೋಟ ಬ್ರಾಹ್ಮಣರು ತಮ್ಮ ಕಾರ್ಯಕ್ಷೇತ್ರವು 'ಕೂಟ ಮಹಾಜಗತ್ತು' ಎಂದು ಖ್ಯಾತಿ ಪಡೆದಿತ್ತೆಂದು ಹೇಳುತ್ತಾರೆ.)

(iii) ಕೋಟೇಶ್ವರ ಬ್ರಾಹ್ಮಣರು; ಕುಂದಾಪುರ ತಾಲೂಕಿನ ಕೋಟೇಶ್ವರವೆಂಬ ಗ್ರಾಮದಲ್ಲಿ ವಾಸಿಸುವವರು (ಸಹ್ಯಾದ್ರಿಯಲ್ಲಿ ಇವರನ್ನು ಪತಿತ ಬ್ರಾಹ್ಮಣರಾಗಿ ಖಂಡನೆಮಾಡಿದೆ)

(iv) ಕಂದಾವರ ಬ್ರಾಹ್ಮಣರು; ಕುಂದಾಪುರ ತಾಲೂಕಿನ ಕಂದಾವರ ಎಂಬಲ್ಲಿ ವಾಸಿಸಿದ ಬ್ರಾಹ್ಮಣ ವರ್ಗ. ಈ ಬ್ರಾಹ್ಮಣರೆಲ್ಲಾ ವಿಶ್ವಾಮಿತ್ರ ಗೋತ್ರಕ್ಕೆ ಸೇರಿದ್ದು ಉಡುಪರೆಂಬ ಕೌಟುಂಬಿಕ ಹೆಸರನ್ನು ಧರಿಸಿಕೊಳ್ಳುತ್ತಾರೆ.

(v) ಪಂಚಗ್ರಾಮದ ಬ್ರಾಹ್ಮಣರು; ಹಳ್ಳಿಹೊಳೆ, ಅಜ್ರಿ, ಹೊಸಂಗಡಿ, ಉಳ್ಳೂರು ಮತ್ತು ಸಿದ್ಧಾಪುರ ಗ್ರಾಮವಾಸಿಗಳು (ಇವರು ಪಾತಿತ್ಯವನ್ನು ಹೊಂದಿದವರೆಂದು ಸಹ್ಯಾದ್ರಿಯಲ್ಲಿ ನಿಷೇಧಿಸಲ್ಪಟ್ಟಿದ್ದಾರೆ.)

ಈ ವಿವಿಧ ಬ್ರಾಹ್ಮಣ ವಿಭಾಗಗಳು ಪ್ರಥಮದಲ್ಲಿ ವಿರಳವಾಗಿದ್ದು, ಸಮಯ ಹೋದಂತೆ ಬ್ರಾಹ್ಮಣೇತರ ಸ್ಪರ್ಧೆಯಿಂದ ಆಧಿಕ್ಯವನ್ನು ಹೊಂದಿ, ಅದರ ಪರಿಣಾಮವಾಗಿ ಉತ್ತಮ, ಮಧ್ಯಮ ಮತ್ತು ಅಧಮ ವರ್ಗಗಳೆಂಬ ಭಾವನೆ ಮೂಡಿದಂತೆ ಕಂಡುಬರುತ್ತದೆ. ಇದರ ವಿಮರ್ಶೆ ಇಲ್ಲಿ ಅಗತ್ಯವಾಗಿದೆ.

ಶಿವಳ್ಳಿ, ಕೋಟ, ಕೋಟೇಶ್ವರ, ಕಂದಾವರ, ಪಂಚಗ್ರಾಮ ಇತ್ಯಾದಿ ಊರುಗಳ ಹೆಸರುಗಳನ್ನು ತಮ್ಮ ಜಾತಿವಾಚಕವಾಗಿ ಮಾಡಿಕೊಂಡುದು ಆಯಾ ಸಮಾಜದವರೇ ವಿನಾ, ಆಗಿನ ಊರಿನ ಜನರು ಆರಂಭದಲ್ಲಿ ಆ ರೀತಿಯಲ್ಲಿ ಅವರನ್ನು ಸಂಭೋದಿಸಲಿಲ್ಲವೆಂಬುದನ್ನು ಗ್ರಾಮಪದ್ಧತಿಯಿಂದ ತಿಳಿಯಬಹುದು. ಮಾತ್ರವಲ್ಲದೆ ಅವರಲ್ಲಿರುವ ಬೇರೆ ಬೇರೆ ಕುಲಗಳ ಹೆಸರುಗಳನ್ನು ಪರಿಶೀಲಿಸಿದರೆ, ತಾವೇ ತಮ್ಮ ಜಾತಿಯ ಹೆಸರುಗಳನ್ನು ಇಟ್ಟುಕೊಂಡದ್ದು ಎಂಬುದನ್ನು ತಿಳಿಯಲು ಕಷ್ಟವಾಗಲಾರದು. ಒಂದು ಸಮಾಜದವರು ತಮ್ಮ ತವರೂರಿನಿಂದ ಇನ್ನೊಂದು ದೇಶಕ್ಕೆ

ವಸಾಹತು ಮಾಡಲು ಹೋದರೆ ತಮ್ಮ ಮಾತೃದೇಶವನ್ನು ಯಾ ಭಾಷೆಯನ್ನು ಸೂಚಿಸುವ ಜಾತಿ ಹೆಸರನ್ನು ತಮ್ಮ ಪಂಗಡಕ್ಕೆ ಇಟ್ಟುಕೊಳ್ಳುವುದಲ್ಲದೆ, ತಾವು ನೆಲೆ ನಿಂತ ದೇಶದ ಯಾ ಪ್ರದೇಶದ ಒಂದು ಗ್ರಾಮ ಯಾ ಊರನ್ನು ತಮ್ಮ ಜಾತಿ ಯಾ ಕುಲವಾಚಕವಾಗಿ ಮಾಡಿಕೊಂಡಿದ್ದು ಚರಿತ್ರೆಯಲ್ಲಿ ಕಂಡುಬರುವುದು ವಿರಳ.

ಲೋಕ ರೂಢಿಯು ಹೀಗಿರುವಾಗ ಅಹಿಚ್ಛತ್ರದಿಂದ ಬಂದಿರುವ ಬ್ರಾಹ್ಮಣರು ಈ ರೂಢಿಗೆ ವ್ಯತಿರಿಕ್ತವಾಗಿ ನಡೆದುಕೊಳ್ಳುವುದಕ್ಕೆ ಬಲವಾದ ಕಾರಣಗಳಿರಬೇಕೆಂದೇ ಕೆಲವರ ಅಭಿಪ್ರಾಯ. ಈ ಪಂಗಡದವರು ತಾವು ಬಂದು ನೆಲೆನಿಂತ ದೇಶದ ಯಾ ಊರುಗಳ ಹೆಸರುಗಳನ್ನು, ಪದ್ಧತಿಗೆ ವ್ಯತಿರಿಕ್ತವಾಗಿ, ತಮ್ಮ ಜಾತಿ ವಾಚಕವಾಗಿ ಮಾಡಿಕೊಂಡಿದ್ದರಲ್ಲದೆ, ವೈದಿಕ ಧರ್ಮಕ್ಕೆ ಅವಶ್ಯವಾದ ವಿಶಿಷ್ಟ ಗ್ರಂಥಗಳನ್ನು ಕನ್ನಡ ಮಾತನಾಡುವ ಭಾಗಗಳಲ್ಲಿ ನೆಲೆನಿಂತವರೂ ಸಹ "ತುಳುಲಿಪಿ" ಎಂದು ನಾಮಕರಣ ಹೊಂದಿದ, ಒಂದು ವಿಶಿಷ್ಟತೆಯುಳ್ಳ ಲಿಪಿಯಲ್ಲಿ ಬರೆದಿರಿಸಿದರು ಎಂದೂ, ಇದು ಗುಪ್ತ ಲಿಪಿಯಾಗಿದ್ದು, ಅವರು ಬರೆದಿರಿಸಿದ ಗ್ರಂಥಗಳನ್ನು ಇತರರಿಗೆ ಓದಿ ತಿಳಕೊಳ್ಳಲು ಅಸಾಧ್ಯವಾಯಿತೆಂದೂ, ಇತರರು ಈ ಗ್ರಂಥಗಳ ವಸ್ತು, ವಿಷಯಗಳನ್ನು ತಿಳಿದುಕೊಳ್ಳದಂತೆ ಮಾಡಿದ ಪ್ರಯತ್ನವಿದೆಂದೂ, ಇದಕ್ಕೆ ಬಲವಾದ ಕಾರಣಗಳಿರಬೇಕೆಂದೂ, ಇದೊಂದು ಚಮತ್ಕಾರದ ಕೆಲಸವೆಂದೂ ಕೆಲವರು ಟೀಕಿಸಿ,ವಾದಿಸುವುದೂ ಇದೆ. 'ತುಳು ಲಿಪಿ'ಗೆ ಸಂಬಂಧಿಸಿದ ಸಮಸ್ಯೆಯನ್ನು ಈ ರೀತಿಯಲ್ಲಿ ಬಗೆಹರಿಸಬಹುದು.

ಹಿಂದಿನ ಕಾಲದಿಂದಲೂ (ಎಂದರೆ ಸಾಧಾರಣ ಹನ್ನೊಂದು, ಹನ್ನೆರಡನೆ ಶತಮಾನದಿಂದಲೂ) ತುಳುನಾಡಿನ ಬ್ರಾಹ್ಮಣರ (ಇಲ್ಲಿ ಹೈಗವನ್ನೂ ಸೇರಿಸಿಕೊಳ್ಳಬೇಕು)ಕುಟುಂಬಗಳ ಯಜಮಾನರು ಕೇರಳಕ್ಕೆ ತಂತ್ರಸಾರ, ಮಂತ್ರವಾದ,ವೈದಿಕ ಕ್ರಮಗಳನ್ನು ಅಭ್ಯಾಸಮಾಡಲು ಹೋಗುತ್ತಿದ್ದರು. ಅವರು ತಾವು ಕಲಿತ ವಿದ್ಯಾಸಾರವನ್ನು ಹಾಗೂ ಜ್ಞಾನವನ್ನು ಮಲೆಯಾಳದ ಒಂದು ಪ್ರಭೇದವಾದ ಲಿಪಿಯಲ್ಲಿ ಬರೆಯುತ್ತಿದ್ದರು ತುಳುನಾಡಿನ ಬ್ರಾಹ್ಮಣರು ಈ ಲಿಪಿಯನ್ನು ಉಪಯೋಗಿಸುತಿದ್ದ ಕಾರಣ ಮಾತ್ರದಿಂದ ಇದಕ್ಕೆ 'ತುಳು ಲಿಪಿ' ಎಂಬ ನಾಮಕರಣವಾಯಿತು. ಈ ಲಿಪಿಯು ಎರಡು ಮೂರು ಅಕ್ಷರಗಳ ಹೊರತಾಗಿ ಮಲೆಯಾಳ ಲಿಪಿಯಾಗಿದೆ ಎಂಬುದರಲ್ಲಿ ಅನುಮಾನವಿಲ್ಲ. ತುಳುಭಾಷೆಗೆ ಸ್ವತಂತ್ರವಾದ ಲಿಪಿ ಇಲ್ಲವೆಂಬುದು ನಿರ್ವಿವಾದ.ಹಾಗಾದರೆ ಈ ತುಳು ಬ್ರಾಹ್ಮಣರು ತಮ್ಮ ಅಭ್ಯಾಸದ ಫಲವಾದ ಜ್ಞಾನವನ್ನು ಮಲೆಯಾಳದ ಪ್ರಭೇದವಾದ ಲಿಪಿಯಲ್ಲಿ ಬರೆದುದಾಗಲೀ, ಬರೆಯಲು ಪ್ರಯತ್ನಿಸಿದುದಾಗಲೀ, ತಮ್ಮ ಜ್ಞಾನವನ್ನು ಗುಪ್ತವಾಗಿರಿಸುವುದಕ್ಕೋಸ್ಕರವೆಂದು ಖಂಡಿತವಾಗಿ ಹೇಳಲು ತೃಪ್ತಿಕರವಾದ ಕಾರಣಗಳು ಕಂಡುಬರುವುದಿಲ್ಲ.

ಆದುದರಿಂದ ಈ ತೆರನಾದ ಟೀಕೆಯಿಂದ ಬೇಳೆ ಬೇಯುವಂತಿಲ್ಲ. ಧಾರ್ಮಿಕ ಗ್ರಂಥಗಳನ್ನು ಕನ್ನಡ ಲಿಪಿಯಲ್ಲಿ ಬರೆಯುವ ಅಭ್ಯಾಸ ಅರ್ವಾಚೀನ. ಮಾತ್ರವಲ್ಲದೆ ತಾಳೆ ಓಲೆಯಲ್ಲಿ (ಗರಿಯಂತಿರುವ ಎಲೆಯ ಮೇಲೆ) ಸಾಹಿತ್ಯವನ್ನು ಬರೆಯಲು ಈ 'ತುಳು ಲಿಪಿ' ಎಂದು ಹೆಸರಾಂತ ಲಿಪಿಯು ಬಹು ಅನುಕೂಲವಾಗಿದೆ ಎಂಬುದನ್ನೂ ಮನವರಿಕೆ ಮಾಡಿಕೊಂಡರೆ ಉತ್ತಮ.

ದೇವನಾಗರಿ ಲಿಪಿಯಲ್ಲಿ ಬರೆದ ಗ್ರಂಥಗಳೂ ಈ ತಾಳೆ ಓಲೆಯಲ್ಲಿ ಕಂಡುಬರುತ್ತವೆ. ಆದರೆ ಅವುಗಳ ಸಂಖ್ಯೆ ಕಡಿಮೆ. ಆದುದರಿಂದ 'ತುಳು ಲಿಪಿ' ಎಂಬುದು ನಿಜವಾಗಿಯೂ ತುಳು ಭಾಷೆಗಿದ್ದ ಸ್ವತಂತ್ರವಾದ ಅದರ ಲಿಪಿಯಲ್ಲ. ಮಾತ್ರವಲ್ಲದೆ ತುಳು ಲಿಪಿಯು ಬ್ರಾಹ್ಮಣರ ಗುಪ್ತ ಲಿಪಿ ಎಂಬ ತಪ್ಪು ಭಾವನೆಗೆ ಅವಕಾಶವಿಲ್ಲ. ಆ ಲಿಪಿಯಿಂದ ಗ್ರಂಥಗಳನ್ನು ಬರೆದುದರ ಫಲವಾಗಿ ಸಾರ್ವಜನಿಕರಿಗೆ, ಸಾಹಿತ್ಯಗಳನ್ನೋದಿ ಅರ್ಥವಿಸಿಕೊಳ್ಳಲು ಕಷ್ಟವಾಗಿದ್ದಿರಬಹುದು. ಆದರೆ ಅದು ಉದ್ದೇಶಪೂರ್ವಕ ಮಾಡಿದ ಕೆಲಸವಲ್ಲವೆಂದು ನನ್ನ ಅಭಿಪ್ರಾಯ.

ಒಟ್ಟಿನಲ್ಲಿ ಹೇಳುವುದಾದರೆ, ತುಳುನಾಡಿನ ಬ್ರಾಹ್ಮಣರು ಕೇರಳ ದೇಶಕ್ಕೆ ಹೋಗಿ ತಾವು ಧರ್ಮ ಸಂಬಂಧವಾಗಿ ಮಾಡಿದ ಅಭ್ಯಾಸವನ್ನು ಆ ದೇಶದ ಲಿಪಿಯಾದ ಮಲೆಯಾಳಮ್‌ನಲ್ಲಿ ಬರೆದಿರಿಸಿ, ಅವನ್ನು ತುಳುವಕ್ಕೆ ತಂದುದರಿಂದಲೂ, ಅಭ್ಯಾಸ ಬಲದಿಂದ ಹಾಗೂ ಸುಲಭತೆಗಾಗಿ ಅದೇ ಲಿಪಿಯಲ್ಲಿ ತಮ್ಮ ನಾಡಿನಲ್ಲೂ ಬರೆಯುವ ಕ್ರಮವನ್ನಿಟ್ಟುಕೊಂಡದ್ದರಿಂದಲೂ, ಈ ಲಿಪಿಯು 'ತುಳುಲಿಪಿ' ಎಂದು ಹೆಸರನ್ನು ಪಡೆಯಿತು. ತುಳುಭಾಷೆಗೆ ಲಿಖಿತ ಸಾಹಿತ್ಯವಿಲ್ಲ. ಈ ವಿಷಯದಲ್ಲಿ ಇನ್ನು ಚರ್ಚೆಯೂ, ಸಂದೇಹವೂ ಇರಲಾರದೆಂದು ತಿಳಿಯುತ್ತೇನೆ. 'ತುಳು ಅಕ್ಷರ ಮಾಲೆ' ಈ ಅಕ್ಷರ ಮಾಲೆಯು ಈಗ ರೂಢಿಯಲ್ಲಿರುವ ಮಲೆಯಾಳಿ ವರ್ಣಮಾಲೆಯನ್ನು ಹೋಲುತ್ತಿದೆ. ಇದನ್ನು ಗ್ರಂಥ ಲಿಪಿ ಎಂದು ಕರೆಯುವುದೂ ಉಂಟು. ಸಂಸ್ಕೃತ ಗ್ರಂಥಗಳನ್ನು ಪ್ರಚಲಿತವಿದ್ದ ದ್ರಾವಿಡ ಅಕ್ಷರ ಮಾಲೆಯಲ್ಲಿ ಬರೆಯಲು ಸಾಧ್ಯವಾಗದ ಕಾರಣ ಈ ಬಗೆ ತುಳು ಮತ್ತು ತಮಿಳು ಗ್ರಂಥ ಲಿಪಿಗಳನ್ನು ಸುಮಾರು 14ನೇ ಶತಮಾನದಲ್ಲಿ ಕಲ್ಪಿಸಿರಬೇಕು. ಈ ಲಿಪಿಗಳನ್ನು ಸಂಸ್ಕೃತ ಗ್ರಂಥಗಳನ್ನು ಬರೆಯಲು ಮಾತ್ರ ಉಪಯೋಗಿಸುತ್ತಿದ್ದರು. (ತೆಂಕನಾಡು—ಪುಟ.೧೦೫)

ಅಹಿಕ್ಷೇತ್ರದಿಂದ ಬಂದುದೆಂದು ಹೆಸರಾಂತ ಬ್ರಾಹ್ಮಣರ ಕುರಿತಾಗಿ ಇನ್ನೊಂದು ಮಹತ್ತಾದ ಸಮಸ್ಯೆ ಇದೆ. E. Thurstonರವರು ಬರೆದಿರುವ 'Castes and Tribes of Southern India' ಎಂಬ ಗ್ರಂಥದಲ್ಲಿ ಈ ಕೆಳಗಿನ ಉಲ್ಲೇಖವಿದೆ. ತುಳುದೇಶದ ಬ್ರಾಹ್ಮಣರು ಅಹಿಚ್ಛತ್ರದಿಂದ ಬಂದರೆಂಬ ಇತಿಹಾಸ ಉಂಟು. ಗಂಡಸರು ಮಾತ್ರ ಈ ತುಳುದೇಶದಲ್ಲಿ ವಸಾಹತು ಮಾಡಲು ಬಂದುದ

ರಿಂದ, ಅವರು ಶೂದ್ರ ಸ್ತ್ರೀಯರನ್ನು ಮದುವೆ ಮಾಡಿಕೊಳ್ಳುವಬತ್ತಾಯವಾಯಿತು. ಶ್ರೀಮದಾಚಾರ್ಯರ ಕಾಲದಲ್ಲಿ ಈ ವರ್ಗದವರು ಮತಾಂತರದಿಂದ ಮೇಲಕ್ಕೇರಿಸಲ್ಪಟ್ಟರು. ತುಳುವರ ಸ್ತ್ರೀಯರನ್ನು 'ಮದುಮಗಳು' ಎಂದು ಸಂಬೋಧಿಸುತ್ತಿದ್ದರೆಂದು ಸೂಚಿಸಲ್ಪಿಟ್ಟಿದೆ. ಕಾಲಾನುಕ್ರಮದಲ್ಲಿ ಬೇರೆ ಕೆಲವರು ಬ್ರಾಹ್ಮಣರಾಗಿ ಪರಿವರ್ತನೆ ಹೊಂದಿದರು. ಉಡುಪಿ ಹತ್ತಿರವಿರುವ ಮಟ್ಟು ಎಂಬ ಗ್ರಾಮದಲ್ಲಿ ವಾಸಿಸುವವರು ಮಟ್ಟಿ ಬ್ರಾಹ್ಮಣರು. ಇವರು ಹಿಂದಕ್ಕೆ ಮೊಗೇರರಾಗಿದ್ದರೆಂದೂ, ಅನಂತರ ಶ್ರೀ ಸೋದೆ ವಾದಿರಾಜ ಸ್ವಾಮಿಯವರಿಂದ ಬ್ರಾಹ್ಮಣರಾಗಿ ಪರಿವರ್ತಿಸಲ್ಪಟ್ಟರೆಂದೂ ಪ್ರಚಾರವಿದೆ. ಆ ಪ್ರಯುಕ್ತ ಅವರಿಗೆ ಸಹ ಪಂಙ್ತಿ ಭೋಜನವಿದ್ದಿಲ್ಲ. ಉಳಿದ ಬ್ರಾಹ್ಮಣರೊಡನೆ ಸಮಾನತೆಯೂ ಇದ್ದಿಲ್ಲ. ಈಗ ಅವರು ಉತ್ತಮ ಬ್ರಾಹ್ಮಣರ ಸಾಲಿಗೆ ಸೇರಿದವರಿದ್ದು ಸೋದೆ ಮಠದ ಶಿಷ್ಯರಾಗಿದ್ದಾರೆ. ಬ್ರಾಹ್ಮಣರ ಕೆಲವು ವಿವರಗಳಲ್ಲಿ ಕದಂಬ ವಂಶದ ಮಯೂರವರ್ಮನ ಕಾಲದಲ್ಲಿ ಕೆಲವು ಆಂಧ್ರ ಬ್ರಾಹ್ಮಣರನ್ನು ಈ ಜಿಲ್ಲೆಗೆ ಬರಮಾಡಿಕೊಂಡಿತ್ತು. ಎಂದು ಪ್ರಚಲಿತವಿದೆ. ಯಾಗಾದಿಗಳನ್ನು ಮಾಡುವ ಬಗ್ಗೆ ಸಾಕಷ್ಟು ಸಂಖ್ಯೆಯಲ್ಲಿ ಬ್ರಾಹ್ಮಣರು ಈ ನಾಡಿನಲ್ಲಿ ಇಲ್ಲದ ಕಾರಣ ಆ ಆಂಧ್ರ ಬ್ರಾಹ್ಮಣರು ಅಬ್ರಾಹ್ಮಣರ ಪಂಗಡದಿಂದ ಕೆಲವು ಕುಟುಂಬಗಳನ್ನಾರಿಸಿ ಅವರನ್ನು ಬ್ರಾಹ್ಮಣನ್ನಾಗಿ ಮಾಡಿ ಅವರಿಗೆ ಪೇರಳೆ, ಕುದುರೆ, ಆನೆ ಇವೇ ಮೊದಲಾದ (Exogomous Sept) ಎಂಬುದನ್ನು ಸೂಚಿಸುವ ಕುಲದ ಹೆಸರುಗಳನ್ನು ಕೊಟ್ಟರೆಂದು ಹೇಳಲಾಗಿದೆ. ಅದೇ ಗ್ರಂಥದಲ್ಲಿ ಮೇಲಿನ ವಿಷಯುಸಮರ್ಥನೆ ರೂಪದಲ್ಲಿ ಈ ಕೆಳಗಿನ ವಿವರವೂ ಕಂಡುಬರುತ್ತದೆ.

ದಕ್ಷಿಣ ಹಿಂದೂ ದೇಶದಲ್ಲಿ ಪ್ರಬಲವಾಗಿರುವ ಎಲ್ಲಾ ಹಿಂದುವರ್ಗಗಳ Cephalic Index ಎಂದರೆ ತಲೆಬುರುಡೆಯ ಪರಿಮಾಣವನ್ನು ತೋರಿಸುವ ಪಟ್ಟಿಯನ್ನು ಕೊಟ್ಟಿದ್ದಾರೆ. ಅವರು ತೋರಿಸಿದಂತೆ ಬೇರೆ ಬೇರೆ ಜಿಲ್ಲೆಗಳ ಬ್ರಾಹ್ಮಣರ Index ನ್ನೂ, ನಮ್ಮ ನಾಡಿನ ತುಳು ಬ್ರಾಹ್ಮಣರ Index ನ್ನೂ, ಇತರ ಮುಖ್ಯ ಪಂಗಡಗಳ Index ನ್ನೂ ಪ್ರತ್ಯ ಪ್ರತ್ಯೇಕವಾಗಿ ಈ ಕೆಳಗಡೆ ಕೊಟ್ಟಿದೆ:

| | | |
|---|---|---|
| 1) | ತಮಿಳು ಸ್ಮಾರ್ತ ಬ್ರಾಹ್ಮಣರು............ | 72. 2 (ಸೆ. ಮೀ.) |
| 2) | ದೇಶಸ್ಥ ಸ್ಮಾರ್ತ ಬ್ರಾಹ್ಮಣರು....... .... | 77 (ಸೆ. ಮೀ. |
| 3) | ಮಾಧ್ವ ಬ್ರಾಹ್ಮಣರು........................ | 78 (ಸೆ. ಮೀ.) |
| 4) | ಕರ್ನಾಟಕ ಸ್ಮಾರ್ತ ಬ್ರಾಹ್ಮಣರು ........ | 78. 4 (ಸೆ. ಮೀ.) |
| 5) | ಮಹಾರಾಷ್ಟ್ರ ದೇಶಸ್ಥ ಬ್ರಾಹ್ಮಣರು........ | 76. 9 (ಸೆ. ಮೀ.) |
| 6) | ಕೊಂಕಣಸ್ಥ ಬ್ರಾಹ್ಮಣ.......................... | 77. 3 (ಸೆ. ಮೀ.) |

7) ತುಳು ಶಿವಳ್ಳಿ ಬ್ರಾಹ್ಮಣ.................... 80. 4 (ಸೆ. ಮೀ.)

ತುಳುನಾಡಿನಲ್ಲಿ

8) ಮೊಗೇರರು................................ 78. 2 (ಸೆ. ಮೀ.)

9) ಬಂಟರು(ನಾಡವರು)........ .............. 78. (ಸೆ. ಮೀ.)

10) ಬಿಲ್ಲವರು........... ....................... 77. (ಸೆ. ಮೀ.)

11) ತುಳು ಬ್ರಾಹ್ಮಣರು.......................... 80. 4 (ಸೆ. ಮೀ.)

ಮೇಲಿನ Index ನಲ್ಲಿ ಬೇರೆ ಜಿಲ್ಲೆಗಳ ಬ್ರಾಹ್ಮಣ ಪಂಗಡಗಳ Index 80 ಸೆ. ಮೀ. ಗಿಂತ ಕಡಿಮೆ ಇರುವಾಗ ತುಳು ಶಿವಳ್ಳಿಯವರ Index 80 ಸೆ. ಮೀ.ನ್ನು ಮೀರುವುದು ಕಂಡುಬರುತ್ತದೆ. ಇದು ಗಮನಿಸತಕ್ಕ ವಿಷಯ. ಅಂತೆಯೇ ನಮ್ಮ ತುಳುನಾಡಿನ ಇತರ ಪಂಗಡದವರ Indexನ್ನು ತುಳು ಬ್ರಾಹ್ಮಣರIndex ನ್ನೊಡನೆ ಹೋಲಿಸಿದರೆ, ತುಳು ಬ್ರಾಹ್ಮಣರ Index ಇತರರ Index ಗಿಂತ ಮೀರುವುದನ್ನು ಕಾಣಬಹುದು. ಥರ್ಸ್ಟನರು ತುಳು ಬ್ರಾಹ್ಮಣರ Index ಹೆಚ್ಚಾಗುವುದಕ್ಕೆ ಅನುರಕ್ತ ಸಂಬಂಧವೇ ಕಾರಣವೆಂದ` ವಿವರಿಸಿದ್ದಾರೆ.

ಈ ನಿರ್ಧಾರವನ್ನೇ ಪುಷ್ಟೀಕರಿಸುತ್ತದೋ ಎಂಬಂತೆ ದಕ್ಷಿಣ ಕನ್ನಡದ ಮೆನ್ಯುವೆಲ್ಲಿನಲ್ಲಿ ತುಳುವದ ಬ್ರಾಹ್ಮಣೇತರರಲ್ಲಿ (ಬಂಟರಲ್ಲಿ) ಹೆಂಗಸರ ಮೂಲಕ ಬರುವ 20 ಬಲಿಗಳನ್ನು ಈ ಕೆಳಗಿನಂತೆ ಕೊಟ್ಟಿದೆ. ಮಾತ್ರವಲ್ಲದೆ, ಈ ಬಲಿಗಳು ಬ್ರಾಹ್ಮಣ ಕುಲಗಳಿಗೆ ಸರಿಹೋಲುತ್ತವೆ ಎಂದೂ ಅದರಲ್ಲಿ ಉಲ್ಲೇಖವಿದೆ. †

(1) ಬಾಗೆತ್ತಿನಾಯ (2) ಬಂಗರಣ್ಣಾಯ (3) ಬರ್ಮರನ್ನಾಯ (4) ಬೊಣ್ಯಣ್ಣಾಯ (ಬುನ್ನಸ್ನಾಯ) (5) ಹಿರಿಬಣ್ಣಾಯ (ಸಿರಿಬನ್ನಾಯ) (6) ಕರಂಬರಣ್ಣಾಯ (7) ಕರ್ಬರಣ್ಣಾಯ (8) ಕೆಲ್ಲರ ಬಣ್ಣಾಯ (9) ಕೋಜರನ್ನಾಯ (10) ಕುಂಡೋಣಿ ಬಣ್ಣಾಯ (11) ಕುಂಡಲಣ್ಣಾಯ (12) ನೆಲ ಬಣ್ಣಾಯ (ಉಜ್ಜೆಟ್ಟಿ ಬನ್ನಾಯ) (13) ಪಾಂಗಳಣ್ಣಾಯ (14) ಸೆರ್ಗಡಣ್ಣಾಯ (15) ಪುಲ್ಯಟನ್ನಾಯ (16) ಸಾಲಬನ್ನಾಯ (ಐಯ್ಯ ಬನ್ನಾಯ) (17) ಸಾಲಣ್ಣಾಯ (18) ತಲಾರ ಬಣ್ಣಾಯ (19) ಉಳಬಣ್ಣಾಯ (20) ಉಪ್ಪಂಣಾಯ.

ಈ ವಿಷಯವೂ ಮೇಲೆ ಹೇಳಿದ ಥರ್ಸ್ಟನರವರ ಅಭಿಪ್ರಾಯಕ್ಕೆ—ಎಂದರೆ ಬ್ರಾಹ್ಮಣ ಶೂದ್ರ ರಕ್ತ ಸಂಬಂಧಕ್ಕೆ ಆಧಾರವಾಯಿತೆಂದು ಕೆಲವರ ಅಭಿಪ್ರಾಯ.

† The Bants are divided into twenty balis, which correspond with the Brahmin gotras except that they are traced in the female line. Bali means a line. It is a common name for the exogomous sehts of the Tuluva Castes)

ಹೀಗಾಗಿ ಗ್ರಾಮ ಪದ್ಧತಿಗಳು ತೋರಿಸುವಂತೆ ಈ ಬ್ರಾಹ್ಮಣರಲ್ಲಿ ಹಲವು ಕುಲಗಳು ಉಂಟಾಗಲಿಕ್ಕೆ ಕಾರಣವಾಯಿತೆಂದೂ ಮಾತ್ರವಲ್ಲದೆ ಆ ಕುಲದವರೆಲ್ಲರೂ ಸರಿ ಸಮಾನತ್ವವನ್ನು ಹೊಂದಲಿಲ್ಲವೆಂದೂ ಟೀಕಿಸಲ್ಪಟಿದೆ. ಉದಾ: –ಶಿವಳ್ಳಿ ಗ್ರಾಮದಲ್ಲಿ ಪ್ರಥಮ, ಮಧ್ಯಮ, ಅಧಮವೆಂಬ ಪರಿಗಣನೆಯಿಂದ 120 ಗೃಹ ಯಾ ವಂಶ ವಿಭಾಗಗಳಿವೆ. ಇವುಗಳಲ್ಲಿ 105 ಕುಲಗಳು ತ್ರಿಕರ್ಮಿಗಳು; ತಂತು ಮಾತ್ರ ಬ್ರಾಹ್ಮಣರು. ಈಗ ಭೋಜನ, ಪ್ರತಿ ಭೋಜನದ ಬಗ್ಗೆ ಈ ಮೂರು ಪಂಗಡದವರೊಳಗೆ ಭೇದವಿಲ್ಲವೆಂಬುದಾಗಿ ತಿಳಿದು ಬಂದರೂ, ಹಿಂದಿನ ಕಾಲದಲ್ಲಿ ಬಹಳ ಭೇದಗಳಿದ್ದಿರ ಬೇಕು ಎಂಬುದನ್ನು ತೋರಿಸುವಂತಹ ಕುರುಹುಗಳು ಈಗಲೂ ಕಂಡು ಬರುವುದೆಂಬುದನ್ನು ಆ ಮೂರು ಪಂಗಡದವರಲ್ಲಿ ವೃದ್ಧರನು ಬೇರೆ ಬೇರೆ ವಿಚಾರಿಸಿದಲ್ಲಿ ತಿಳಿದುಬರುತ್ತದೆ.

ನಿಷ್ಪಕ್ಷಪಾತವಾಗಿ ವಿಮರ್ಶೆಯನ್ನು ಮುಂದುವರಿಸುವುದಾದರೆ ಅನುಮಾನಿತ ಸತ್ಯವನ್ನಾಧರಿಸಿಕೊಂಡು ಕೆಲವು ತೀರ್ಮಾನಗಳನ್ನು ಮಾಡಬಹುದು. 1) ಅಹಿಕ್ಷೇತ್ರದಿಂದ ಬಂದ ಬ್ರಾಹ್ಮಣರು ತಮ್ಮ ಕುಟುಂಬ ಸಮೇತ ಬಂದಿರುವರೊ ಅಥವಾ ಗಂಡಸರು ಮಾತ್ರ ಬಂದುದೋ ಎಂಬುದನ್ನು ಖಂಡಿತವಾಗಿ ಅನುಮಾನವಿಲ್ಲದೆ ನಿಶ್ಚಯಿಸಲು ಯಾವ ಆಧಾರಗಳೂ ಇಲ್ಲ. 2) ತುಳುನಾಡಿಗೆ ನಾನು ಈ ಮೊದಲು ನಿರ್ಧರಿಸಿದಂತೆ ಮೂರನೆಯ ವಲಸೆಯಲ್ಲಿ ಬಂದ ಬ್ರಾಹ್ಮಣರು ಶೂದ್ರಸ್ತ್ರೀಯನ್ನು ವಿವಾಹವಾಗಲಿಲ್ಲವೆಂಬುದನ್ನು ಸಿದ್ಧಪಡಿಸುವುದು ಕಷ್ಟವಾಗಿದೆ. 3) ದಕ್ಷಿಣ ಭಾರತದ ಹೆಚ್ಚಿನ ಕಡೆಗಳಲ್ಲೂ ಮತಾಂತರವಾಗಿದೆ ಎಂಬುದನ್ನು ಚರಿತ್ರೆಯು ತಿಳಿಸುತ್ತದೆ. 4) ಅದೇ ತೆರನಾಗಿ ನಮ್ಮ ನಾಡಿನಲ್ಲೂ ಬ್ರಾಹ್ಮಣ್ಯಕ್ಕೆ ಮತಾಂತರವಾಗಿದ್ದಿರಬೇಕೆಂದು ಊಹಿಸಬಹುದು. ಕಾರಣ ದಕ್ಷಿಣ ಹಿಂದೂದೇಶದ ಇತರ ಕಡೆಗಳಲ್ಲಿ ಬ್ರಾಹ್ಮಣರ ಸಂಖ್ಯೆ ಒಟ್ಟು ಜನಸಂಖ್ಯೆಯ 2 ಅಥವಾ 3 ಶೇಕಡಾ ಆಗಿದ್ದರೆ, ನಮ್ಮ ತುಳುನಾಡಿನಲ್ಲಿ ಇದು 10ರಿಂದ 12 ಶೇಕಡಾ ಇದೆ ಎಂಬುದು ಆಶ್ಚರ್ಯವನ್ನು ಉಂಟುಮಾಡುವುದಾಗಿದೆ. 5) E. Thurstonರು ಮಾಡಿದ ಪ್ರಯೋಗವು ಭೌತ ವಿಜ್ಞಾನದ ಪ್ರಯೋಗದಂತೆ ಸತ್ಯವೆಂದು ನಂಬುವುದೂ ಕಷ್ಟ ಸಾಧ್ಯವಾಗಿದೆ. ಕಾರಣ ಅವರ ಪ್ರಯೋಗವನ್ನು ಮತ್ತೂ ಮುಂದುವರಿಸಿ, ಅನೇಕಾನೇಕ ದೃಷ್ಟಾಂತಗಳಿಂದ ದೃಢೀಕರಿಸುವುದು ಅಗತ್ಯವಿದೆ. ಆದರೂ ಅವರ ತೀರ್ಮಾನವನ್ನು ಕಿತ್ತೊಗೆಯಲು ಅಸಾಧ್ಯ (6) ತುಳುನಾಡಿನಲ್ಲಿ ಈ ಬ್ರಾಹ್ಮಣರು ಬ್ರಾಹ್ಮಣೇತರರ ಕನ್ಯೆಯರನ್ನು ವಿವಾಹವಾಗಿ ತಮ್ಮ ಕುಲಗಳನ್ನು ವೃದ್ಧಿಸಿದರೂ ಅದು ಅಶಾಸ್ತ್ರೀಯವಾಗಲಾರದು. ಗೌತಮ ಧರ್ಮ ಶಾಸ್ತ್ರ ಪ್ರಕಾರ ಈ ರೀತಿ ಅನುಲೋಮ ವಿವಾಹ

ವಾದನಂತರ, ಏಳು ತಲೆಮಾರಿನಲ್ಲಿ ಅವಿಚ್ಛಿನ್ನವಾಗಿ ನಿರ್ದಿಷ್ಟ ಕರ್ಮವನ್ನು ಶಾಸ್ತ್ರೀಯವಾಗಿ ಅವಲಂಬಿಸಿದರೆ ಬ್ರಾಹ್ಮಣತ್ವ ಬರುವುದೆಂಬುದು ಶಾಸ್ತ್ರ ಸಮ್ಮತ. ಆದುದರಿಂದ, ಬ್ರಾಹ್ಮಣರ ಸಂಖ್ಯೆ ತುಳುನಾಡಿನಲ್ಲಿ ಈ ಕ್ರಮದಲ್ಲಿ ವೃದ್ಧಿಯಾಗಿದ್ದರೂ ಬ್ರಾಹ್ಮಣ್ಯಕ್ಕೆ ಅದು ಯಾವ ರೀತಿಯ ಅವಮಾನವೆಂದೂ ತಿಳಿಯಬಾರದು.

ಹಾಗಾದರೆ ಈ ಅಹಿಕ್ಷೇತ್ರ ಬ್ರಾಹ್ಮಣರ ಕುಲಗಳ ಮೂಲ ಯಾ ಮರ್ಮವೇನು ಎಂಬ ಕೌತುಕದ ಪ್ರಶ್ನೆಯೇಳುತ್ತದೆ. ಅದನ್ನು ಹೀಗೆ ಬಗೆಹರಿಸಬಹುದು. (ಕುಲಗಳ ಸಂಖ್ಯೆ 256 ಎಂಬುದಾಗಿಯೂ, 279 ಎಂಬುದಾಗಿಯೂ 326 ಎಂಬುದಾಗಿಯೂ ನಾನಾ ವಿಧವಿದೆ. ಇದರಲ್ಲಿ ನಿಶ್ಚಯ ಸಂಖ್ಯೆಯನ್ನು ಕೊಡುವುದು ಕಷ್ಟ)

ಈ ಬ್ರಾಹ್ಮಣರ ಕುಲ ನಾಮಗಳನ್ನಾಗಲೀ, ಕುಲಗಳನ್ನಾಗಲೀ ಮಯೂರವರ್ಮನು ನಿರ್ಮಿಸಿದುದಲ್ಲ. ಈ ಬ್ರಾಹ್ಮಣರನ್ನು ಮಯೂರವರ್ಮ ಲೋಕಾದಿತ್ಯನು ಕರೆತರಿಸಿದುದೂ ಅಲ್ಲ. (ಆದರೆ ಬ್ರಾಹ್ಮಣರ ಕಡೆಗೆ ಆತನಿಗೆ ಒಲವಿದ್ದಿರಬಹುದು) ಅವರಾಗಿಯೇ ಕ್ರಿ.ಶ.11ನೇ ಶತಮಾನದ ಸುಮಾರಿಗೆ ತುಳುವಕ್ಕೆ ಮೈಸೂರು ರಾಜ್ಯದಿಂದ ಬಂದಿರುವ ಸಂಗತಿಯನ್ನೂ,ಆ ಸಂದರ್ಭಗಳನ್ನೂ ಈ ಮೊದಲೇ ನಿಷ್ಕರ್ಷೆಮಾಡಿದ್ದೇನೆ.ಅವರು ತುಳುನಾಡಿಗೆ ಬಂದು ಇಲ್ಲಿಯ ಅರಸರಾದ ಆಳುಪರ ಸಹಾಯದಿಂದ, ಸಹಕಾರದಿಂದ ಬೇರೆ ಬೇರೆ ಕಡೆ ನೆಲೆನಿಂತ ನಂತರ ತಮಗೆ ನಾಮಕರಣ ಮಾಡಿಕೊಂಡರು. ಈ ಹೆಸರುಗಳನ್ನು ನಾಡಿನ ಗ್ರಾಮಗಳು ಯಾ ಸ್ಥಳಗಳು-ಯಾ-ಸಜೀವ ಯಾ ನಿರ್ಜೀವ ವಸ್ತುಗಳು ಯಾ ಸ್ಥಾವರ,ಜಂಗಮಗಳು-ಇವುಗಳನ್ನಾಧರಿಕೊಂಡು ಇಟ್ಟುಕೊಂಡಂತೆ ಕಂಡು ಬರುತ್ತದೆ. ಈ.ಸಂಗತಿಯು ಸ್ಪಷ್ಟವೂ ಇದೆ. ಈ ರೀತಿ ಹೆಸರಿಡುವ ಕ್ರಮ ಅರ್ವಾಚೀನವೆಂದೇ ಹೇಳಬೇಕು. ಅಹಿಕ್ಷೇತ್ರದಲ್ಲಿ ಬ್ರಾಹ್ಮಣರ ನಾಮಧೇಯವು ನಮ್ಮಲ್ಲಿದ್ದಂತೆ ಕಂಡು ಬರುವುದಿಲ್ಲವೆಂಬುದನ್ನು ತಿಳಿಯಲು ಹೆಚ್ಚು ದೂರ ಹೋಗಬೇಕಾಗಿಲ್ಲ. ಈ ಅಹಿಚ್ಛತ್ರ ಬ್ರಾಹ್ಮಣರ ಕುಲಗಳನ್ನು ಕೆಳಗಿನಂತೆ ವರ್ಗೀಕರಿಸಬಹುದು. (ದೃಷ್ಟಾಂತಗಳನ್ನು ಕೊಡುವಾಗ ಕೆಲವನ್ನು ಮಾತ್ರಕೊಟ್ಟಿದ್ದೇನೆ. ಈ ಕುಲನಾಮಗಳ ಸಂಪೂರ್ಣಯಾದಿಯನ್ನು 'ಕುಲನಾಮಗಳು ಹೇಳುವ ತುಳುನಾಡಿನ ಕತೆ' ಎಂಬ ಮುಂದಿನ ಲೇಖನದಲ್ಲಿತ್ತಿದ್ದೇನೆ.)

### (1) ಪ್ರತ್ಯಯಗಳ ಆಧಾರದ ಮೇಲೆ ಹೊಂದಿಕೊಂಡು:

(i) 'ತಾಯ' ಪ್ರತ್ಯಯದಿಂದ ಅಂತ್ಯವಾಗುವ ಹೆಸರು:

ಖಡ್ಗತಾಯ, ನಾರಿತಾಯ, ಅಮೆತ್ತಾಯ, ಅನಂತೋಡಿತ್ತಾಯ, ನೂಜಿತ್ತಾಯ, ಪೆಲತ್ತಾಯ, ಪಿಜತ್ತಾಯ, ಉಲಪಡಿತ್ತಾಯ, ಬಜತ್ತಾಯ, ಶಿವತ್ತಾಯ ಇತ್ಯಾದಿ.

(ii) 'ನಾಯ' ಪ್ರತ್ಯಯದಿಂದ ಅಂತ್ಯವಾಗುವ ಹೆಸರುಗಳು:

ಎಡಬೆಟ್ಟುನಾಯ, ಉಪರಂಣಾಯ, ಬೆಲ್ಲಂಣಾಯ, ಕೋಡಿನ್ನಾಯ, ಮಡುಮಂಣಾಯ, ಕೊಟ್ಟಲಾಡಿನ್ನಾಯ, ಮಲ್ಲಂಜಿನಾಯ, ಕೇಕುಂಣಾಯ, ಇತ್ಯಾದಿ.

(iii) 'ಆಯ' ಪ್ರತ್ಯಯದಿಂದ ಅಂತ್ಯವಾಗುವ ಹೆಸರುಗಳು:

ನಿಂಜೂರಾಯಬೆಳ್ಳಾರಾಯ, ಶಿಬಿರೂರಾಯ, ಶಿಮಂತೂರಾಯ, ನೂವತ್ತೂರಾಯ, ಮುನ್ನೂರಾಯ, ಅಡರಾಯ, ಪಾಂತುರಾಯ, ಚಿಕ್ಕರಾಯ, ಕುದುರಾಯ ಪಾತ್ತುರಾಯ ಇತ್ಯಾದಿ.

(iv) 'ಲಾಯ' ಪ್ರತ್ಯಯದಿಂದ ಅಂತ್ಯವಾಗುವ ಹೆಸರುಗಳು:

ಕುಕ್ಕಿಲಾಯ, ಪಡಿಲಾಯ, ನಡುವಂತಿಲ್ಲಾಯ, ಮುಡಿಕುಡಲಾಯ, ಕೆದಿಲಾಯ, ಮಜಿಲಾಯ, ತುಂಬಕಲಾಯ, ತೋಡಿಲ್ಲಾಯ, ತೆಂಕಿಲ್ಲಾಯ, ಮಿತ್ತಿಲ್ಲಾಯ ಇತ್ಯಾದಿ.

(v) 'ಪಳ್ಳಿ'ಯಿಂದ ಅಂತ್ಯವಾಗುವ ಹೆಸರುಗಳು:

ಉಗ್ರ ಪಳ್ಳಿ, ಉಂಗೂರ ಪಳ್ಳಿ, ಓರಂಬಳ್ಳಿ, ಕೈರಂಬಳ್ಳಿ

(vi) ಪ್ರತ್ಯಯಗಳಿಲ್ಲದ ಇತರ ಹೆಸರುಗಳು:

ಉಡುಪ, ಹಂದೆ, ಬಾಸುರಿ, ತುಂಗ, ನಾವಡ, ಹೊಳ್ಳ, ಕಾರಂತ, ಮಯ್ಯ, ಹೆಬ್ಬಾರ, ಅಂಣಪಿ, ಗೂಡೆ, ದೋಣಿ, ನೂಜಿ, ಆನೆ, ಅಗಳ, ಮುಕ್ಕೆ, ಅಮ್ಮಣಿ, ಕಲಂಬಿ, ಕೋಣೆ, ದುರ್ಗೆ, ಪಾಡಿ ಇತ್ಯಾದಿ.

(2) ಊರುಗಳ ಹೆಸರುಗಳನ್ನು ಹೊಂದಿಕೊಂಡು:

ಕೊಡಿಪಾಡಿ, ಪಾಕರ್ಾಳ, ಅಂತಿಲ, ಕಕ್ಕೋಡಿ, ಕೊಳಕೆ, ಕುಕ್ಕಿಲ, ಪಾನಂಜೆ, ನಿಂಜೂರು, ಬೆಳ್ಳಾರೆ, ಕರಕಡ, ಮಂಗಲ, ನಯಂಪಳ್ಳಿ, ಬನ್ನಿಂಜೆ, ಕೊಡಂಬಳ್ಳಿ, ಮೂಡ, ಕಾಚೋಳಾಡಿ, ಕಲ್ಯಾಣ, ಅರಿತೋಡು, ಉಚ್ಚಿಲ, ಮಲ್ಲಂಜಿ, ಕಡಂಬಳ್ಳಿ, ಸಗ್ರಿ, ಮಡವಳ್ಳಿ, ಮರಡಿ, ಪಾಡಿ, ಕೇಳ—ಇತ್ಯಾದಿ ಸ್ಥಳಗಳಲ್ಲಿ ವಾಸಿಸುವವರು ಎಂಬರ್ಥದಲ್ಲಿಯೂ ಆ ಊರುಗಳಿಗೆ ಸೇರಿದವರು ಎಂಬ ಅರ್ಥದಲ್ಲಿಯೂ 'ತಾಯ' ಪ್ರತ್ಯಯ ಸೇರಿ ಕುಲನಾಮಗಳಾದುವು. ಕೊಡಪಾಡಿತ್ತಾಯ, ಪಾಕರ್ಾಳತ್ತಾಯ, ಅಂತಿಲತ್ತಾಯ, ಕಕ್ಕೋಡಿತ್ತಾಯ, ಕೊಳಕೆತ್ತಾಯ, ಕುಕ್ಕಿಲತ್ತಾಯ, ಪಾನಂಜೆತ್ತಾಯ, ನಿಂಜೂರುತ್ತಾಯ, ಬೆಳ್ಳಾರತ್ತಾಯ, ಕರಡಕ (ಕರ್ಕಾಟ)ತ್ತಾಯ, ಮಂಗಲತ್ತಾಯ, ನಯಂಪಳ್ಳಿತ್ತಾಯ, ಬನ್ನಿಂಜತ್ತಾಯ, ಕೊಡಂಬಳ್ಳಿತ್ತಾಯ, ಮೂಡತ್ತಾಯ, ಕಾಚೋಳಾಡಿತ್ತಾಯ, ಕಲ್ಯಾಣಂತಾಯ, ಅರಿತೋಡುತ್ತಾಯ, ಉಚ್ಚಿಲತ್ತಾಯ, ಮಲ್ಲಂಜಿತ್ತಾಯ, ಕಡಂಬಳ್ಳಿತ್ತಾಯ, ಸಗ್ರಿತ್ತಾಯ, ಮಡವಳ್ಳಿತ್ತಾಯ, ಮರಡಿತ್ತಾಯ, ಪಾಡಿತ್ತಾಯ, ಮೂಡುತ್ತಾಯ, ಕೇಳತ್ತಾಯ ಇತ್ಯಾದಿ.

ಅಂತೆಯೇ ಊರ ಹೆಸರುಗಳಿಗೆ 'ಅಲ್ಲಿಯವನು' ಎಂಬರ್ಥದಲ್ಲಿ 'ಆಯ' ಪ್ರತ್ಯಯಸೇರಿ ಕುಲಗಳ ಹೆಸರಾದಂತೆ ಕಂಡುಬರುತ್ತದೆ.

ಶಿಬರೂರು + ಆಯ — ಶಿಬರೂರಾಯ.
ಶೀವಂತೂರು + ಆಯ — ಶಿವಂತೂರಾಯ
ಮುನ್ನೂರು + ಆಯ — ಮುನ್ನೂರಾಯ
ನಿಂಜೂರು + ಆಯ — ನಿಂಜೂರಾಯ.
ಚಕ್ಕರ + ಆಯ — ಚಕ್ಕರಾಯ
ಆಲಿವೂರು + ಆಯ — ಆಲಿವೂರಾಯ ಇತ್ಯಾದಿ,

(3) ದಿಕ್ಕುಗಳನ್ನು ಹೊಂದಿಕೊಂಡು:

ನಡು + ಇಲ್ಲಾಯ — ನೆಡ್ಡಿಲ್ಲಾಯ (ನಡುಮನೆಯವನು)
ತೆಂಕು + ಇಲ್ಲಾಯ — ತೆಂಕಿಲ್ಲಾಯ (ತೆಂಕು ಮನೆಯವನು)
ನಡುವಂತಿಲ್ಲಾಯ + ನಡುಮನೆಯಲ್ಲಿ ವಾಸಿಸುವವನು
ಪಡು + ಇಲ್ಲಾಯ — ಪಡ್ಡಿಲ್ಲಾಯ (ಪಡುಮನೆಯವನು)
ಮಿತ್ತ + ಇಲ್ಲಾಯ — ಮಿತ್ತಿಲ್ಲಾಯ (ಮೇಲಿನ ಮನೆಯವನು)
ಬಡಗು + ಇಲ್ಲಾಯ - ಬಡಕಿಲ್ಲಾಯ

(4) ಸ್ಥಳದ ಲಕ್ಷಣವನ್ನು ಹೊಂದಿಕೊಂಡು:

ಕೋಡಿ, ಕುಂಜ, ಕೊಳ, ಪಾದೆ, ತೋಟ, ದುರ್ಗ, ಗುಡ್ಡೆ, ಕುಂಡ, ಪಾಡಿ, ತೋಡು, ಕುದುರು, ಮಾರ್ಗ, ಬೆಟ್ಟ- ಇತ್ಯಾದಿ ಸ್ಥಳಗಳ ಹತ್ತಿರ ವಾಸಿಸುವವರು ಎಂಬ ಅರ್ಥದಲ್ಲಿ ಬಂದಿರುವ ಕುಲನಾಮಗಳು ಕೋಡಿನಾಯ, ಕುಂಜತ್ತಾಯ, ಕೊಳತ್ತಾಯ, ಪಾದೆತ್ತಾಯ, ತೋಟತಿಲ್ಲಂತಾಯ, ದುರ್ಗೆತ್ತಾಯ, ಗುಡ್ಡೆತಾಯ, ಕುಂಡತಾಯ, ಪಾಡಿತಾಯ, ತೋಡಿಲ್ಲಾಯ, ತೋಡಿನಾಯ, ಕುದುರಾಯ, ಮಾರ್ಗಂತಾಯ, ಬೆಟ್ಟಿನಾಯ ಇತ್ಯಾದಿ.

(5) ಮೃಗ, ವೃಕ್ಷಗಳನ್ನು ಹೊಂದಿಕೊಂಡು:

ಪಿಲ (ಹಲಸು), ಪಿಜ (ಹೆಬ್ಬಲಸು), ಕಂಗು (ಅಡಿಕೆಮರ), ಪೇರಳೆ, ಗೋಳಿ, ನೆಲ್ಲಿ, ನೆಕ್ಕರೆ, ತಾಳಿ, ಬೋರಿ (ಬಸವ), ಕುದುರೆ, ಆನೆ, ಉರೇ (ಜಿಂಕೆ) ಇತ್ಯಾದಿಗಳನ್ನು ಸಂಕೇತವಾಗಿರಿಸಿಕೊಂಡವರೆಂಬ ಅರ್ಥದಿಂದಲೋ ಅಥವಾ ಅವುಗಳ ಹತ್ತಿರ ವಾಸಿಸುತ್ತಿದ್ದವರೆಂಬ ಅರ್ಥದಿಂದಲೋ ಅಥವಾ ಅವುಗಳನ್ನು ವಿಶೇಷವಾಗಿ ಪೋಷಿಸುತ್ತಿದ್ದವೆಂಬರ್ಥದಿಂದಲೋ ಬಂದ ಕುಲನಾಮಗಳು, ಪಿಲತ್ತಾಯ, ಪಿಜತ್ತಾಯ, ಕಂಗಿತಾಯ, ಪೇರಳಾಯ, ಗೋಳಿನಾಯ, ನೆಲ್ಲಿತಾಯ, ನೆಕ್ಕರೆಂತಾಯ ತಾಳಿತಾಯ, ಬೋರಿತ್ತಾಯ, ಕುದುರೆತ್ತಾಯ, ಉರತ್ತಾಯ, ಆನೆ ಇತ್ಯಾದಿ.

### (6) ವಸ್ತುಗಳ ಹೆಸರುಗಳನ್ನು ಹೊಂದಿಕೊಂಡು:

ಮನೋಳಿ, ದೋಣಿ, ಸುಣ್ಣ, ಕಲಂಬಿ, ಉಳಿ, ಖಡ್ಗ, ಪುಳಿನ (ಮರಳು) ಮಂಜಿ, ಗಂಗೆ, ಅರಿ (ಅಕ್ಕಿ) ಉಬ್ಬಳಿ, ಮಜಿ, ಅಪ್ಪಟಿ ಇತ್ಯಾದಿಗಳನ್ನು ಸಂಕೇತವಾಗಿರಿಸಿಕೊಂಡುದರಿಂದಲೋ ಅವುಗಳನ್ನು ವ್ಯಾಪಾರದಲ್ಲಿ ಉಪಯೋಗಿಸುವುದರಿಂದಲೋ, ಇತರ ಯಾವ ಕಾರಣದಿಂದಲೋ ಬಳಕೆಗೆ ಬಂದ ಕುಲಗಳ ಹೆಸರುಗಳು ಮನೋಳಿತ್ತಾಯ, ದೋಣಿ, ಸುಣ್ಣಂತ್ತಾಯ, ಕಲಂಬಿತ್ತಾಯ, ಉಳಿತ್ತಾಯ, ಖಡ್ಗತ್ತಾಯ, ಪೊಳಿನಾಯ, ಮಂಜಿತ್ತಾಯ, ಗಂಗೆತ್ತಾಯ, ಅರಿತ್ತಾಯ, ಉಬ್ಬಳಿತ್ತಾಯ, ಮಜಿತ್ತಾಯ, ಅಪ್ಪಟಿ ಇತ್ಯಾದಿ.

### (7) ಬರಿ ಊರ ಹೆಸರುಗಳಿಂದ

ಉಜಿರೆ, ಸೂರ್ಯ (ಸುರಿಯ?) ಮುಳ್ಯ, ಅಕ್ಕ್ಯೋಡಿ, ಕಲ್ಲಾಡಿ (ಕಲ್ಲಾಳಿ?) ಕೊಳಂಬೆ, ಬೈಪಾಡಿ ಇತ್ಯಾದಿ.

### (8) ಇತರ ರೀತಿಗಳಿಂದ ಬಂದ ಹೆಸರುಗಳು

ಮೇಲಿನ ರೀತಿಯ ವರ್ಗೀಕರಣಕ್ಕೆ (ಎಂದರೆ ಅರ್ಥವಿಸಲು ಕಷ್ಟವಾದ) ಸಿಕ್ಕದ ಕುಲನಾಮಗಳು ಅನೇಕ ಇವೆ. ಹೇಗೆ ಆ ಹೆಸರುಗಳು ಬಂದುವೆಂದು ನಿರ್ಧರಿಸುವುದು ಕಷ್ಟ. ಊಹನೆ ಮಾಡಬಹುದಷ್ಟೆ. ಈ ಊಹನೆಯನ್ನು ನಾನು ಬರೇ ಹಾಸ್ಯಕ್ಕೋಸ್ಕರ ಕೊಡಲು ಹೊರಟಿಲ್ಲ. ವಿಚಾರ ಮಾಡಬೇಕು. ಶಿವನಿಗೆ ಪೂಜೆ ಮಾಡುವವನು ಶಿವತ್ತಾಯನಾಗಿರಬಹುದು. ತುಂಬಾ ಮುಡಿ ಇದ್ದವನು ಮುಡಿನಾಯನಾಗಿರಬಹುದು.

ಮೂಲದಲ್ಲಿ ಒಂದು ಕಣ್ಣುಳ್ಳವನ ಕುಲವು ಒಕ್ಕಣ್ಣಾಯನಕುಲವಿರಬಹುದು. ಮೊಗೆರಾಯನು ಮೊಗೇರರೊಡನೆ ವ್ಯವಹರಿಸುತ್ತಿದ್ದವನಿರಬಹುದು. ನಾಣಿನಾಯನೆಂಬವನು 'ನಾಣಿಲ್' ಮರದಡಿಯಲ್ಲಿ ವಾಸಿಸುತಿದ್ದಿರಬಹುದು ಅಥವಾ 'ನಿತಂಬ' (ನಾಣಿಸ್)ದಿಂದ ಬಂದ ಹೆಸರಿರಬಹುದು. ನೂಜಿತ್ತಾಯನು ನೂಜಾಡಿಯ ನಿವಾಸಿಯಲ್ಲಿರಬಹುದು. ಅಂತೆಯೇ ಬರೇ 'ನೂಜಿ' ಎಂಬ ಕುಲದ ಹೆಸರೂ ಇದೆ. ಬಾಯರಿತ್ತಾಯವೆಂಬುದು 'ಬಾಯರಿ' ಎಂಬ ಕುಲನಾಮಕ್ಕೆ 'ತಾಯ' ಪ್ರತ್ಯಯ ಸೇರಿದುದರಿಂದ ಉಂಟಾದುದು. ಸರಳ ಸ್ವಭಾವದವರು ಸರಳಾಯರಾದರೋ ಏನೋ? ಪುತ್ತೂರಲ್ಲಿ ವಾಸಿಸುತ್ತಿದ್ದವರು ಪುತ್ತೂರಾಯರಾಗಿದ್ದು, ಅದು ಕ್ರಮೇಣ ಪುತ್ರಾಯರೆಂಬ ರೂಪವನ್ನು ತಾಳಿತೋ ಏನೊ? (ಸಹ್ಯಾದ್ರಿಯಲ್ಲಿ ಇವರ ವೈಶಿಷ್ಟ್ಯವನ್ನು ಬೇರೆ ರೀತಿ ಹೇಳಿದೆ.) 'ಮಂದ'ಯನ್ನಿಟ್ಟುಕೊಂಡವರು ಮಂದಿತ್ತಾಯರಾಗಿರಬಹುದು. ಕೊಡುವ ಧಾರಾಳ ಹೃದಯವುಳ್ಳವರು ಕೊನ್ನಾಯರಿರಬೇಕು. ಅಥವಾ 'ಕೊರನ್' ಎಂಬ ಒಂದು ಜಾತಿಯ ಮೀನಿನಿಂದ ಬಂದಿರುವ ಹೆಸರಾಗಿರಬಹುದು.

ಅಂತೆಯೇ 'ಕಲ'ನಾಯನು 'ಕಲ'ದಲ್ಲಿ ವಾಸಿಸುತ್ತಿದ್ದವನೋ ಏನೊ? ಅಥವಾ ಕುಲದಲ್ಲಿ ಕೆಳವರ್ಗದವನೆಂಬುದನ್ನು ಸೂಚಿಸುವ ಹೆಸರಿರಬಹುದು.(ಕಲ—A square 2. A bed of flowers etc. 3. A place where pariahs assemble)

ಕೋಟ ಬ್ರಾಹ್ಮಣರಲ್ಲಿ ಕಂಡುಬರುವ ಅಷ್ಟಗೃಹಭೇದಗಳಲ್ಲಿ ಕೆಲವು ಹೇಗೆ ಬಳಕೆಗೆ ಬಂದುವೆಂಬುದನ್ನು ಹೇಳುವುದು ಕಷ್ಟ ಸಾಧ್ಯವಾಗಿದೆ. ಹೊಳ್ಳ, ಮಯ್ಯ, ಬಾಸರಿ, ನಾವಡ ಎಂಬವುಗಳು ಏನನ್ನು ನಿರ್ದೇಶಿಸಬಹುದು? ಏನಾದರೊಂದು ಅರ್ಥವಿರಬೇಕಷ್ಟೆ! ತುಂಗ ಶ್ರೇಷ್ಠನಾದವನು; ಹಂದೆ—ಮಂದೆಯನ್ನು ಪೋಷಿಸುವವನು, ಕಾರಂತ ಕಾರ್ಯವಂತ; ಹೆಬ್ಬಾರ–ಹಿರಿಯ ಬ್ರಾಹ್ಮಣ ಎಂಬ ಅರ್ಥಗಳನ್ನು ಸ್ವೀಕರಿಸೋಣವೆ? ಅವರಲ್ಲಿ ಇನ್ನೂ ಕೆಲವು ಹೆಸರುಗಳಿವೆ - ಮಂಜ, ಉರಾಳ, ಹೇರಾಳ, ಐತಾಳ, ಉರಾಳ ಇತ್ಯಾದಿ. ಇವುಗಳು ಅನ್ವರ್ಥ ನಾಮಗಳೇ? (ಹೇರಳ=ಧನಿಕ? ಐತಾಳ=ಆಹ್ನಿತಾನಲ? ಉರಾಳ-ಗರ್ವ, ಗೌರವಾನ್ವಿತ ವ್ಯಕ್ತಿ?) ತುಳು ಬ್ರಾಹ್ಮಣರಲ್ಲಿ ಬರುವ ಉಡುಪ, ಹೆಬ್ಬಾರ, ಐತಾಳ, ಬಲ್ಲಾಳ, ತಂತ್ರಿ, ಭಟ್ಟ, ಜನ್ನಿ, ಮಧ್ಯಸ್ಥ—ಹೆಸರುಗಳು ಮೂಲಕುಲನಾಮಗಳಾಗಿ ಪರಿಗಣಿಸಲ್ಪಡುವದಿಲ್ಲ; ಕಾರಣವೇನೆಂದರೆ ಇವು ಅವರು ಮಾಡುವ ಕರ್ಮದಿಂದಾಗಲೀ, ಅಧಿಕಾರದಿಂದಾಗಲೀ ಬಂದ ಹೆಸರುಗಳು.

ತೌಳವ ಬ್ರಾಹ್ಮಣರನ್ನು ಇನ್ನೊಂದು ರೀತಿಯಲ್ಲಿ ವರ್ಗೀಕರಿಸಬಹುದು. ಈ ವರ್ಗೀಕರಣದ ಕುರಿತು ದೀರ್ಘ ವಿವರ ಕೊಡಲು ಇಚ್ಛಿಸುವುದಿಲ್ಲ.

1) ಅಹಿಚ್ಛತ್ರದಿಂದ ಬಂದರೆಂದು ಹೆಸರಾದ ಬ್ರಾಹ್ಮಣರ ವಿಭಾಗಗಳನ್ನು ಈ ಕೆಳಗಿನಂತೆ ಅವರು ಹೊಂದಿರುವ ಅಧಿಕಾರ ಹಾಗೂ ಸಮಾಜದಲ್ಲಿ ಅವರಿಗಿದ್ದ ಸ್ಥಾನವನ್ನು ಹೊಂದಿಕೊಂಡು ಮಾಡಬಹುದು. Household divided according to Profession.

i) ಭಟ್ಟ ಜನರು (40) ಮೂನ್ನೂರಾಯ, ಅರಿನಾಯ, ಕೋಟಿನ್ನಾಯ, ಪಿಜತ್ತಾಯ, ಪಾತುರಾಯ, ಇಂದ್ರವಳ್ಳಿತಾಯ, ಕೆಳತಾಯ, ಮೂಡಪಾಡಿತಾಯ, ಬಗೆತ್ತಾಯ, ಶಬರಾಯ, ಅತ್ರಾಡಿತಾಯ ಇತ್ಯಾದಿ.

ii) ಸ್ಮಾರ್ತಜನರು (14) ನೂಜಿತಾಯ, ಕಿದೆಕಿಳನಾಯ, ನಾರಳತಾಯ, ತಾಳತಾಯ, ಅಯ್ಯಪ್ಪನಾಯ, ಮಣ್ಣಗಳತಾಯ, ಅಲೆಪೂರಾಯ, ಬ್ರಹ್ಮಕಾರಂತ, ಕಲ್ಲೂರಾಯ, ಉಡುಪ, ಬೈಪಾಡಿತಾಯ, ಕೊರ್ನಾಯ, ಮೂಡಸಾಡಿತಾಯ,

iii) ಅಗ್ನಿಹೋತ್ರಿಗಳು (24) ಸೀಮಂತೂರಾಯ, ಮುಚ್ಚಂತ್ತಾಯ, ಮುನ್ನೂರಾಯ, ಅಲಿಪೂರಾಯ, ಕೊಡಂಚ, ಮಂಜಿತಾಯ, ಸರಳಾಯ, ಮಡಿಪುಳಿತಾಯ, ಕುಂಜತ್ತಾಯ, ಸಗರಿತ್ತಾಯ ಇತ್ಯಾದಿ.

vi) ತಂತ್ರಿಗಳು (4) ನೇತ್ರತ್ತಾಯ, ಉಚ್ಚಲತಾಯ, ಪುತ್ರಾಯ, ಪಾಂಗಣ್ಣಾಯ.

v) ಸಭಾಪತಿಗಳು (2) ಶಬರೂರಾಯ, ತಬರೂರಾಯ.

vi) ಪಂಡಿತರು (2) ಕಲ್ಲೂರಾಯ, ಉಪ್ಪರಣ್ಣಾಯ.

vii) ಬಲ್ಲಾಳರು (4) ತಲೆಪ್ಪಾಡಿ, ಮುಂಜನೋಡಿ, ನಿಡಂಬು, ಮೂಡಿಲ್ಲ.

(viii) ಗ್ರಾಮಣಿಗಳು (24) ಪಾತೂರಾಯ, ಶುಳ್ಳಣ್ಣಾಯ, ಕಿದೆಕಿದೆನಾಯ. ಕೋಟಂಜತ್ತಾಯ, ಮೂಡಿಂತಿಲ್ಲಾಯ, ನಡುವಂತಿಲ್ಲಾಯ, ಕುಂಜತ್ತಾಯ, ಹೇರಳ, ಕಾರಂತ, ನಾರಿಂತ, ಎಡಬೆಟ್ಟನಾಯ, ಹೆಬ್ಬಾರ, ಸಂಪೆಗತ್ತಾಯ, ಅಬರನ್ನಾಯ, ಅರಿಮನೆತಾಯ ಇತ್ಯಾದಿ.

(ix) ಅಧಿವಾಸಿಗಳು (21) : ಅಲಿಪೂರಾಯ, ಪಾಂಗಣ್ಣಾಯ, ಕುದುರೆತಾಯ, ಬಾರಿಕಣ್ಣಾಯ, ಕೇದಟರಾಯ, ಅಂಬಿತಾಯ, ಇಲ್ಲಡಿತಾಯ, ಕಂಬರಣ್ಣಾಯ, ನಂಬೂರಿತಾಯ, ಕಬೆಕೋಡಿನಾಯ, ಪಂಜರೋಡಿತಾಯ, ಕಂದುರಾಯ, ನಿಂಜೂರಾಯ, ಪೆಡೆಂಗಾಯ ಇತ್ಯಾದಿ.

(x) ಜನ್ನಿಗಳು (38) : ಮಡಿಕೊಡನಾಯ, ಸೇಡಿಕಳತಾಯ, ತೆನಕಳತಾಯ, ಮಡುಮಣ್ಣಾಯ, ಕಾಚುಕುಜ, ಓಯಿಲಾಯ, ಮಂಜಿತಾಯ, ಕೆಮ್ಮುಂಡೆನಾಯ, ಓಡಿಪಾಡಿನಾಯ, ಉಗ್ರಪಳ್ಳಿ, ಕುತ್ಯಾರಾಯ, ಪುದೆನಾಯ, ಊರಾಳ, ಎಡಪುಳಿತಾಯ, ಬಾಯಿರತಾಯ, ಮಾಮಂತಾಯ, ಎಡೆಕಲ್ಲಾಯ, ಕೊಕ್ಕೋಡನಾಯ, ಅರಿಪತಾಯ, ಹೆಬ್ಬಾರ ಇತ್ಯಾದಿ.

2. **ಹವಿಕ ಬ್ರಾಹ್ಮಣರು**-- ಇವರ ವಿವರ ಈ ಮೊದಲು ಕೊಟ್ಟಿದೆ.

3. **ತುಳುವದ ಪತಿತ ಬ್ರಾಹ್ಮರು** (ಸಹ್ಯಾದ್ರಿ ಖಂಡದಲ್ಲಿ ಕಂಡು ಬರುವಂತೆ): (i) ಪಂಚ ಗ್ರಾಮದವರು (ii) ಮೋದಗ್ರಾಮದವರು (iii) ಕುಂದವರಗ್ರಾಮದವರು (vi) ಕೋಟೇಶ್ವರದವರು (v) ಸಕಲೇಶ್ವರದವರು (vi) ಪಾಟಾಳಿಗಳು.

ಈ ವರ್ಗಗಳ ಪಾತಿತ್ಯ ಪ್ರಾಪ್ತಿಯಾದ ಬಗೆಯನ್ನು ಸಹ್ಯಾದ್ರಿ ಖಂಡದಲ್ಲಿ ಓದಿದರೆ ಕಾರಣದ ಸಮಂಜಸತೆ ತೃಪ್ತಿಕರವಾಗಿ ಕಂಡು ಬರುವುದಿಲ್ಲ. ಸಾಮಾಜಿಕ, ಧಾರ್ಮಿಕ, ಆರ್ಥಿಕ ಹಾಗೂ ಪ್ರಾದೇಶಿಕ ಕ್ಲೇಷಗಳೇ ಇದಕ್ಕೆ ಮುಖ್ಯ ಕಾರಣವೆಂಬುದನ್ನು ತಿಳಿದು ಕೊಳ್ಳಬಹುದು.

4. ಸ್ಥಾನಿಕ ಬ್ರಾಹ್ಮಣರು—ಇವರ ಚರಿತ್ರೆ ಹಿಂದಕ್ಕೆ ಕೊಟ್ಟಿದೆ.

## ತುಳುನಾಡಿನ ಇತರ ಬ್ರಾಹ್ಮಣರು

ಎರಡು ಮೂರು ಶತಮಾನಗಳಿಂದೀಚೆಗೆ ನಮ್ಮ ನಾಡಿನಿಂದ ಹೊರಗಿನ ಕೆಲವು ಬ್ರಾಹ್ಮಣ ವರ್ಗಗಳು ವಲಸೆ ಬಂದು ನಮ್ಮಲ್ಲಿ ನೆಲೆ ಮಾಡಿಕೊಂಡ ಐತಿಹಾಸಿಕ ಸಂಗತಿಯು ಸ್ಪಷ್ಟವಿದೆ. ಅವರು ಯಾರು? ಅವರ ಸ್ಥಾನಮಾನಗಳೇನು? ಈ ವಿಷಯದ ಕುರಿತು ಕೂಲಂಕಷ ವಿಮರ್ಶೆಯನ್ನು ಮಾಡುವುದು ಪ್ರಕೃತಕ್ಕೆ ಅಪ್ರಸ್ತುತವೂ, ಸೀಮಾತೀತವೂ ಆದುದರಿಂದ ಬರೇ ಉಲ್ಲೇಖವನ್ನು ಮಾತ್ರ ಮಾಡಿ ಬಿಡುತ್ತೇನೆ.

1. **ದೇಶಸ್ಥ ಬ್ರಾಹ್ಮಣರು :** ಇವರನ್ನು ನಮ್ಮ ಜಿಲ್ಲೆಯಲ್ಲಿ 'ತೋಟಿಗ' ರೆಂದು ಕರೆಯುವುದೂ ಉಂಟು. ಈ ನಾಮಧೇಯವು ಅವಮಾನಿತವೆಂದೂ ಕೆಲವರು ತಿಳಿಯುವುದುಂಟು, ಅವಹೇಳನ ಮಾಡುವುದಕ್ಕೋಸ್ಕರ ಈ ಹೆಸರಿನಿಂದ ಕೆಲವರು ಅವರನ್ನು ಕರೆಯಬಹುದು. ಆದರೆ 'ತೋಟಿಗ'ರೆಂದರೆ ತೋಟಗಳನ್ನು ನಿರ್ಮಿಸಿ, ಕೃಷಿಯಲ್ಲಿ ನೈಪುಣ್ಯವನ್ನು ಹೊಂದಿದವರೆಂದು ತಿಳಿಯುವುದು ಉತ್ತಮ. ಇವರು ಇತ್ತೀಚೆಗೆ ನಮ್ಮ ಜಿಲ್ಲೆಗೆ ಮಹಾರಾಷ್ಟ್ರದಿಂದ ಬಂದು ನೆಲೆಸಿದುದರಿಂದ ಈ ಕೃಷಿಯ ಕಸಬನ್ನು (Gardening) ವಿಶೇಷವಾಗಿ ನಡೆಸಿಕೊಂಡು ಬರುತ್ತಿದ್ದುದು ಸಹಜವೇ ಆಗಿದೆ. ಇವರಲ್ಲಿ ಸ್ಮಾರ್ತರೂ, ಮಾಧ್ವರೂ ಇದ್ದಾರೆ. ಭಟ್ಟ, ಅಯ್ಯ ಎಂಬ ಹೆಸರುಗಳು ಅವರಲ್ಲಿ ಹೆಚ್ಚಿಗೆ ಇದೆ ಬ್ರಾಹ್ಮಣೋತ್ಪತ್ತಿ ಮಾರ್ತಾಂಡವೆಂಬ ಗ್ರಂಥದಲ್ಲಿ ಪರಿಶುದ್ಧ ಮಹಾರಾಷ್ಟ್ರಬ್ರಾಹ್ಮಣರು ದಾಕ್ಷಿಣಾತ್ಯ ಬ್ರಾಹ್ಮಣರೆಂದೂ, ದೇಶಸ್ಥ ಬ್ರಾಹ್ಮಣರೆಂದೂ ಕರೆಯಲ್ಪಡುತ್ತಾರೆಂದಿದೆ.

2. **ಖರಾಡಿ ಬ್ರಾಹ್ಮಣರು :** ಖರಾಷ್ಟ್ರ ಎಂದರೆ ಸತಾರದ ಸುತ್ತ ಮುತ್ತಲಿನ ಪ್ರದೇಶದಿಂದ ಇವರು ತುಳುವಕ್ಕೆ ಬಂದವರಾಗಿರುತ್ತಾರೆ. ಸಹ್ಯಾದ್ರಿ. ಖಂಡದಲ್ಲಿ ಹೇಳಿದುದನ್ನೊಪ್ಪಿ ಸಂಪ್ರದಾಯವನ್ನು ನಿರ್ಮಿಸಿದ ಹಳಗಾಲದವರು ಇವರು ಪರಶುರಾಮನಿಂದ ಒಂಟೆಗಳ ಎಲುಬುಗಳಿಂದ ಅಸ್ತಿತ್ವವನ್ನು ಪಡೆದವರೆಂದು ಹೇಳುವುದುಂಟು.

"ಕರಾಷ್ಟ್ರ ಬ್ರಾಹ್ಮಣರು ವಾಸಮಾಡಿಕೊಂಡಿರುವ ರಾಜ್ಯವು ಕೇವಲ ದುಷ್ಟ ಪ್ರದೇಶವಾಗಿರುವುದು. ರೇವತೀ ನದಿಯ ಉತ್ತರದಲ್ಲಿ ಕಳ್ಳನಾಶಂಗವೆಂಬ ಸ್ಥಳದ ದಕ್ಷಿಣದಲ್ಲಿ ಹತ್ತು ಯೋಜನ ವಿಸ್ತಾರವಾದ ದೇಶವು ಕರಾಷ್ಟ್ರ ದೇಶವೆನಿಸುವುದು. ಇಲ್ಲಿ ವಾಸ ಮಾಡುವ ಜನರು ಕಾಠಿಣ್ಯವುಳ್ಳವರಾಗಿಯೂ, ದುರ್ಜನರಾಗಿಯೂ, ಪಾಪ ಕರ್ಮಿಗಳಾಗಿಯೂ, ಸಪ್ತ ಗೋತ್ರದವರಾಗಿಯೂ, ಇರುವ ಇವರು ಕರಾಷ್ಟ್ರರೆನಿಸಿಕೊಳ್ಳುವರು. ಇವರು ಪಾಪಿಗಳಾಗಿಯೂ ನಷ್ಟ ವ್ಯಭಿಚಾರದಿಂದ ಜನಿಸಿದ

ವರೂ ಆಗಿರುವರು. ಎಲ್ಲೈ ಷಣ್ಮುಖನೇ ಆದುದರಿಂದ ಕರಾಷ್ಟ್ರದವರಿಗೆ ಅಸ್ಥಿಯೋಗದಿಂದಲ್ಲದೆ ರೇತೋ ವಿಶೇಷವೆಲ್ಲಿಯದು? ಅಂಥ ದುಷ್ಟತ್ವದಿಂದ ಜನಿಸಿದವರು ಪಾಪ ಕರ್ಮಿಗಳಾಗಿರುವರು. ಆ ದೇಶ ಮಾತೃವಾದ ಮಹಾ ದುಷ್ಟಳಾದ ಕಂಬಳಿನಿಯು;ಆ ದೇವಿಯ ಪೂಜಾ ಕಾಲದಲ್ಲಿ ವರುಷಕ್ಕೊಂದು ಬಾರಿ ಪೂಜೆಯ ನಡೆಯುವಲ್ಲಿ ಬ್ರಾಹ್ಮಣರನ್ನು ಬಲಿಯಾಗಿ ಕೊಡಬೇಕು. ಆ ಬ್ರಹ್ಮಹತ್ಯೆಯನ್ನು ಯಾವನು ಮಾಡುತ್ತಾನೋ ಬಲಿಯಾದ ಬ್ರಾಹ್ಮಣ ಗೋತ್ರದವರು ನಾಶವನ್ನು ಹೊಂದುತ್ತಾರೆ. ಇದರಿಂದ ಆ ದೇವಿಯು ತೃಪ್ತಿಯನ್ನು ಹೊಂದಿ ಬ್ರಹ್ಮಹತ್ಯೆ ಮಾಡಿದವನಿಗೆ ಸಮಸ್ತ ಇಷ್ಟಾರ್ಥಗಳನ್ನು ಕೊಡುವಳು. ಯಾರು ಈ ಕಾರ್ಯವನ್ನು ಮಾಡುವುದಿಲ್ಲವೋ ಅವನ ಕುಲವು ನಾಶವಾಗುವುದು. ಹತ್ಯೆ ಮಾಡಿದವರಿಗೆ ದುಷ್ಟಳಾದ ದೇವಿಯು ವರವನ್ನು ಅನುಗ್ರಹಿಸುವಳು. ಈ ಪದ್ಧತಿಯು ಪೂರ್ವಿಕವಾಗಿರುವುದು ಇಂಥವರ ಸಂಸರ್ಗ ಮಾತ್ರದಿಂದ ಸಚೈಲ ಸ್ನಾನ ಮಾಡಬೇಕು. ಅವರು ವಾಸ ಮಾಡಿದ ಮೂರು ಯೋಜನ ದೂರದಲ್ಲಿರುವ ವಾಯುವೂ ಅಗ್ನಿಯೂ ಗ್ರಹಣಕ್ಕೆ ಅಯೋಗ್ಯವಾಗಿರುತ್ತದೆ.ಕೇವಲ ವಿಷವೆಂದು ಗ್ರಹಿಸ ಬೇಕು(ಉತ್ತರ ಸಹ್ಯಾದ್ರಿ ಖಂಡ ಕರಾಷ್ಟ್ರ ಬ್ರಾಹ್ಮಣೋತ್ಪತ್ತಿ ಎಂಬ ಇಪ್ಪತ್ತೊಂಭತ್ತನೇಯ ಅಧ್ಯಾಯ)

ಮೇಲಿನ ವಿವರವು ಅಹಿತವಾದುದು. ಈ ತೀರ್ಮಾನಕ್ಕೆ ಏನೂ ಆಧಾರಗಳು ಕಂಡು ಬರುವುದಿಲ್ಲ. ಇಂತಹ ಅಭಿಪ್ರಾಯಕ್ಕೆ ಚಾರಿತ್ರಿಕ ಬೆಂಬಲ ಎಂದಿಗೂ ಸಿಗಲಾರದು. ತುಳುವಕ್ಕೆ ಇವರು ಹೊರಗಿನವರಾದುದರಿಂದ, ಮಾತ್ರವಲ್ಲದೆ ಅವರು ಅಲ್ಪ ಸಂಖ್ಯಾಕರಾದುದರಿಂದ ಅವರು ನಿಂದಾಸ್ಪದ ಉಲ್ಲೇಖಗಳಿಗೆ ಒಳಗಾಗ ಬೇಕಾಯಿತೆಂದಿಷ್ಟೇ ಹೇಳಬಹುದು.ಇವರುಸ್ಮಾರ್ತರಾಗಿದ್ದು ಶೃಂಗೇರಿ ಮಠದ ಶಿಷ್ಯರಾಗಿರುವರು.

3. **ಚಿತ್ತಪಾವನ ಬ್ರಾಹ್ಮಣರು** — ಸಹ್ಯಾದ್ರಿಯಲ್ಲಿ ಇವರ ಉತ್ಪತ್ತಿಯನ್ನು ವಿಚಿತ್ರ ರೀತಿಯಲ್ಲಿ ಹಾಗೂ ಮನವನ್ನು ಉದ್ರೇಕಿಸುವಂತೆ ಕೊಟ್ಟಿದೆ. 'ಚಿತಸ್ಥಾನೇ ಪವಿತ್ರತ್ವಂ ಚಿತ್ತಪಾವನ ಸಂಜ್ಞಕಂ' ಎಂದು ಸಹ್ಯಾದ್ರಿಯಲ್ಲಿ ಹೇಳಿರುವುದರ ಅನರ್ಥವನ್ನು ಯೋಚಿಸಿ ತೀರದು. ಏನೇ ಇರಲಿ. ಇವರೂ ಮಹಾರಾಷ್ಟ್ರದಿಂದ ಎಂದರೆ ರತ್ನಗಿರಿ ಜಿಲ್ಲೆಯ ನೆರೆಹೊರೆಯಿಂದ ತುಳುವಕ್ಕೆ ಬಂದವರು. ಇವರು ಪರಿಶುದ್ಧ ಬ್ರಾಹ್ಮಣರು.ಇವರ ಮೂಲಸ್ಥಾನ ರತ್ನಗಿರಿ ಜಿಲ್ಲೆಯ 'ಚಿಪ್ಲುಂ' ಎಂಬಊರು ಇವರು ಸ್ಮಾರ್ತ ಬ್ರಾಹ್ಮಣರು.ಶೃಂಗೇರಿ ಮಠದ ಅವಲಂಬಿಗಳಾಗಿದ್ದಾರೆ. ಇವರೂ ಕೃಷಿಯನ್ನು ನಮ್ಮ ನಾಡಿನಲ್ಲಿ ಮುಖ್ಯ ಉದ್ಯೋಗವಾಗಿಟ್ಟುಕೊಂಡು ಅದನ್ನು ವೃದ್ಧಿ ಪಡಿಸಿದವರು.ತುಳುನಾಡಿನ ಕಾರ್ಕಳ, ಬೆಳ್ತಂಗಡಿ ತಾಲೂಕುಗಳಲ್ಲಿ ಹೆಚ್ಚಿನಂಶ ನೆಲೆಸಿರುವರು.

4. ಗೌಡ ಸಾರಸ್ವತ ಬ್ರಾಹ್ಮಣರು: ಇವರನ್ನು ಕೊಂಕಣರೆಂದು ಸಾಮಾನ್ಯವಾಗಿ ಕರೆಯುವುದು ವಾಡಿಕೆ. ಕೊಂಕಣ ದೇಶದಲ್ಲಿದ್ದು, ಅಲ್ಲಿಂದ ತುಳುವಕ್ಕೆ ಆಗಮಿಸಿದುದರಿಂದ ಅವರನ್ನು ಕೊಂಕಣರೆಂದು ಕರೆಯುವುದರಲ್ಲಿ ನಿಜವಾಗಿಯಾದರೂ ತಪ್ಪು ಇಲ್ಲ. ಇದರಲ್ಲಿ ಅಪಹಾಸ್ಯವೂ ಇಲ್ಲ, ಈ ಕೊಂಕಣಸ್ಥರ ಕುರಿತಾಗಿ ಸ್ವಲ್ಪ ಹೆಚ್ಚಿನ ವಿವರವನ್ನು ಕೊಡಲು ಬಯಸುತ್ತೇನೆ. ಉತ್ತರ ಸಹ್ಯಾದ್ರಿ ಖಂಡವು ಕೊಂಕಣೋತ್ಪತ್ತಿ ಎಂಬ ಅಧ್ಯಾಯದಲ್ಲಿ ಏನನ್ನು ಪ್ರತಿಪಾದಿಸುತ್ತದೆಂದು ತಿಳಿಯೋಣ. ಪರಶುರಾಮನು ಕ್ಷತ್ರಿಯರನ್ನು 21 ಬಾರಿ ನಾಶ ಮಾಡಿ, ಭೂಮಿಯನ್ನು ಬ್ರಾಹ್ಮಣರಿಗೆ ವರುಣನಿಂದ ಪಶ್ಚಿಮಕರಾವಳಿಯನ್ನು ಪಡೆದನು. ಅನಂತರ ಯಜ್ಞ ಯಾಗ, ಶ್ರಾದ್ಧಾದಿಗಳನ್ನು ಮಾಡಲು ಬ್ರಾಹ್ಮಣರು ತನ್ನ ನವೀನ ನಿರ್ಮಿತ ಕ್ಷೇತ್ರದಲ್ಲಿ ಇಲ್ಲದಿರಲು ಆ ಸಮಸ್ಯೆಯನ್ನು ಬಗೆಹರಿಸಿದ ಕ್ರಮವನ್ನು ಈ ಕೆಳಗಿನಂತೆ ವಿವರಿಸಿದೆ.

"ಬ್ರಾಹ್ಮಣರಿಲ್ಲವಾದುದರಿಂದ ಶ್ರಾದ್ಧ ಹೋಮಾದಿಗಳು ನಡೆಯುವುದಿಲ್ಲ. ಇದಕ್ಕೇನುಮಾಡಬೇಕೆಂದು ಬಹುವಿಧವಾಗಿ ಚಿಂತಿಸಿ ಮನದಲ್ಲಿ ನಿಶ್ಚಯಮಾಡಿದನು. ಅನ್ಯಾಹಾರನಿರತರಾದ ಶೂದ್ರರನ್ನು ಬ್ರಾಹ್ಮಣರನ್ನಾಗಿ ಮಾಡಲುದ್ಯುಕ್ತನಾಗಿ ಶುದ್ಧ ಜಲದಿಂದ ಅವರಿಗೆ ಸ್ನಾನಮಾಡಿಸಿ, ಉಪವೀತಧಾರಣೆಯನ್ನು ಮಾಡಿಸಿದನು. ಅನಂತರ ಗಾಯತ್ರಿ ಉಪದೇಶಮಾಡಬೇಕೆಂದು ಸನ್ನದ್ಧನಾಗಿರುವ ವೇಳೆಯಲ್ಲಿ ಆಕಾಶದಲ್ಲಿ ಅಶರೀರವಾಣಿಯು ನುಡಿಯಿತು. ಎಲೇ, ಪರಶುರಾಮನೆ, ಶೂದ್ರರನ್ನು ಬ್ರಾಹ್ಮಣರನ್ನಾಗಿ ಮಾಡಬೇಡ. ಇವರು ಪುನಶ್ಚ ಶೂದ್ರರಾಗುವರು. ಪೂರ್ವದಲ್ಲಿ ನಿನ್ನ ಮುಖದಿಂದ ಉತ್ಪನ್ನರಾದವರು ಬ್ರಹ್ಮವೇತ್ತೃಗಳಾದ ಬ್ರಾಹ್ಮಣರು. ಅವರು ಶ್ರೇಷ್ಠರು. ಶೂದ್ರರು ನಿನ್ನ ಪಾದದಿಂದ ಉತ್ಪತ್ತಿಯನ್ನು ಪಡೆದರು. ಅವರಿಗೆ ಗಾಯತ್ರಿಯ ಉಪದೇಶವನ್ನೂ, ವೇದಪಾಠಗಳನ್ನೂ ಮಾಡಿಸದಿರು. ಎಲೈ ಮಹಾವಿಷ್ಣುವೇ! ಕೃಪೆಯನ್ನುಂಟುಮಾಡು. ಬ್ರಾಹ್ಮಣರಲ್ಲಿ ಮತ್ಸರವನ್ನು ಮಾಡಬೇಡ. ಅವರೇ ನಿನ್ನ ಬಳಿಗೆ ಬರುವರು. ಪ್ರಪಂಚವೆಲ್ಲವೂ ದೈವಾಧೀನವಾಗಿಯೂ, ದೈವವು ಮಂತ್ರಾಧೀನವಾಗಿಯೂ, ಮಂತ್ರವು ಬ್ರಾಹ್ಮಣಾಧೀನವಾಗಿಯೂ ಇರುವುದರಿಂದ ಭ್ರಾಹ್ಮಣರು ನನಗೆ ದೇವರು, ಎಂಬುದಾಗಿ ಪೂರ್ವದಲ್ಲಿ ನಿನ್ನಿಂದ ಹೇಳಲ್ಪಟ್ಟಿತು. ಎಲೈ ಭಾರ್ಗವನೆ ಆ ಮಾತುಗಳನ್ನು ಸತ್ಯವಾಗಿ ಮಾಡು; ಎಂದು ಹೇಳುತ್ತಿರುವ ಆ ಆಕಾಶವಾಣಿಯನ್ನು ಕೇಳಿ ಅವರನ್ನು ಬಿಟ್ಟನು. ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಪಂಚದ್ರಾವಿಡ ಬ್ರಾಹ್ಮಣರು ಬರುವವರಾದರು. ಅವರನ್ನು ನೋಡಿ ಪರಶುರಾಮನು ಮಹಾಸಂತೋಷದಿಂದ ಅವರಿಗೆ ನಮಸ್ಕಾರ ಮಾಡಿದನು. ಆ ಬ್ರಾಹ್ಮಣರೂ ಭಾರ್ಗವನಿಗೆ ನಮಸ್ಕರಿಸಿ ಉಚಿತಾಸನದಲ್ಲಿ ಕುಳಿತುಕೊಂಡರು. ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರಿಂದ ಶ್ರಾದ್ಧಾವನ್ನು ಪೂರೈಸಿಕೊಂಡನು. ಆಗ ಪರಶುರಾಮನು ಮನೋ

ಹಠವಾದ ಮೃದುಭಾಷಣದಿಂದ, ಪೂರ್ವಶೂದ್ರರಾಗಿಯೂ, ಯಜ್ಞೋಪವೀತವನ್ನು ಮಾತ್ರಧಾರಣ ಮಾಡಿದವರಾಗಿಯೂ, ಮತ್ಸ್ಯಭಕ್ಷರಾಗಿಯೂ ಇರುವ ನಿವಾಸಿಗಳಂ ಕುರಿತುನುಡಿದನು. 'ಎಲೈ ನೀವುಗಳು ಕೊಂಕಣ ದೇಶದಲ್ಲಿ ಕೊಂಕಣರೆಂದು ಹೆಸರನ್ನು ಪಡೆದು, ಮತ್ಸ್ಯಭಕ್ಷಕರಾಗಿ ಹರಿಭಕ್ತಿಪರಾಯಣರಾಗಿ ವಾಸಮಾಡಿ, ವೇದ ಗಾಯತ್ರಿ ರಹಿತರಾಗಿ ವೈಶ್ಯವೃತ್ತಿಯಿಂದ ಜೀವನ ಮಾಡಿರಿ' ಕನುುಕ್ತಿ, ನಾಯಕ, ಕೇಣಿ, ಪರ್ಬು, ಹೆಗಡೆ, ಬಾಳಿಗ, ಪೈ, ಪಡಿಯಾ, ಭಂಡಾರಿ, ಶೆನ್ವಾ, ಮಲ್ಯ, ಕಾಡ,ಶ್ಯೇನಭೋವ,ಭಕ್ತ-ಎಂಬುದಾಗಿ ಕೊಂಕಣರಲ್ಲಿ ಹದಿನಾಲ್ಕು ಭೇದಗಳುಂಟು ಅವರು ರಾಮವಾಕ್ಯವನ್ನು ಕೇಳಿ ಹಾಗೆಯೇ ಅಗಲೆಂದು, ವಾಕ್ಯಸ್ವೀಕಾರಮಾಡಿ, ನಮಸ್ಕರಿಸಿ ಕೊಂಕಣ ದೇಶವಂ ಸೇರಿದರು" (ಭಾಷಾಂತರ)

ಈ ಕಟ್ಟು ಕತೆಯು ಚರಿತ್ರೆಗೆ ತೀರಾ ಬಾಹಿರವಾದುದು; ಮಾತ್ರವಲ್ಲದೆ, ಪುರಾಣ ನಿರ್ಮಾಪಕರ ಮನಸ್ಸಿನಲ್ಲಿದ್ದ ಉದ್ದೇಶವು ಸ್ಪಷ್ಟವಾಗುತ್ತದೆ. ಈ ವಿವರದಲ್ಲಿ ಕಂಡುಬರುವಂತೆ ಕೊಂಕಣರು ಶೂದ್ರರಾಗಿದ್ದವರಲ್ಲ.ಅವರ ಮೂಲಕ್ಕೂ ಪರಶುರಾಮನಿಗೂ ಏನೇನೂ ಸಂಬಂಧವೂ ಇಲ್ಲ, ಅವರು ಪಂಚಗೌಡಾದಿ ಬ್ರಾಹ್ಮಣರಲ್ಲಿ ಒಂದು ಶಾಖೆಯವರು- ಈ ಪಂಚಗೌಡ ಬ್ರಾಹ್ಮಣರ ಮೊದಲಿಗರು ಸಾರಸ್ವತರು. ಇವರ ಪ್ರಾಚೀನತೆಗೆ ಮತ್ತು ಹಿರಿಮೆಗೆ ಋಗ್ವೇದದಲ್ಲೂ, ಮನುಸ್ಮೃತಿ ಇತ್ಯಾದಿ ಗ್ರಂಥಗಳಲ್ಲೂ ತುಂಬ ಉಲ್ಲೇಖಗಳಿವೆ. ಈ ಸಾರಸ್ವತರ ಒಂದು ಶಾಖೆಯು ಗೌಡ (ಬಂಗಾಳ) ದೇಶದಲ್ಲಿ, ಅದರ ಸುತ್ತು ಮುತ್ತಲೂ ವಾಸಿಸುತಿದ್ದರಿಂದ ಅವರಿಗೆ ಗೌಡ ಸಾರಸ್ವತರೆಂಬ ಹೆಸರು ಬಂತು. ಇವರು ಕೊಂಕಣಕ್ಕೆ ವಸಾಹತು ಬಂದು ನಲೆಸಿದ್ದರಿಂದ ಕೊಂಕಣರು ಕೊಂಕಣಸ್ಥರು, ಕೊಂಕಣಿಗರು —ಎಂಬ ಹೆಸರನ್ನು ಪಡೆದರು. ಕೊಂಕಣದ ಹೊರಗಿನವರಿಗೆ ಇವರು ಪತಿತವರ್ಗದರೆಂದು ಕಾಣುವುದು ಸಹಜವಾಗಿರಲೂಬಹುದು. ಆಯಾ ಊರಿನಲ್ಲಿ ಅಲ್ಲಿಯ ಮೊದಲಿಗರುಯೂ ನಿವಾಸಿಗಳು ಪ್ರಥಮವರ್ಗದವರು, ಪ್ರಾಧಾನ್ಯರು ಎಂಬಭಾವನೆ ಇರುವುದು ಸಹಜವಾದಂತಿದೆ.

ಶ್ರೀ ಗೋವಿಂದ ಪೈಗಳು 'ನಮ್ಮ ಹಿರಿಯರನ್ನು ಕುರಿತು' ಎಂಬ ವಿದ್ವತ್ಪೂರ್ಣವಾದ ಹಾಗೂ ವಿಮರ್ಶಾತ್ಮಕವಾದ ಲೇಖನದಲ್ಲಿ ಗೌಡ ಸಾರಸ್ವತರ ಮೂಲ ವಾಸಸ್ಥಾನವು ಸಾರಸ್ವತ ದೇಶವೆಂದೂ, ಸಾರಸ್ವತ ಮತ್ತು ಗೌಡ ಸಾರಸ್ವತರ ಹುಟ್ಟು ಒಂದೇ ಎಂದೂ, ಈ ಸಾರಸ್ವತರ ಒಂದು ಶಾಖೆಯು ತ್ರಿಹೋತ್ರ (ತಿರ್ಹತ) ದೇಶಕ್ಕೆ ತೆಮ್ಮೊಡಾಗಿ ಪ್ರವಾಸಮಾಡಿತ್ತೆಂದೂ, ಅಲ್ಲಿಂದ ಕೊಂಕಣಕ್ಕೆ ಕಾಲಕ್ರಮೇಣ ಬಂದಿರಬೇಕೆಂದೂ (ಕನಿಷ್ಟ ಪಕ್ಷ ಕ್ರಿ. ಶ. ದ ಆರಂಭದಲ್ಲಿ) ತಿಳಿಸುತ್ತಾರೆ. ಕೊಂಕಣದಿಂದ ಇವರು ದಕ್ಷಿಣಾಭಿಮುಖವಾಗಿ ಪ್ರಯಾಣವನ್ನು ಕ್ರಿ. ಶ. 13

ನೆಯ ಶತಮಾನದ ಸುಮಾರಿಗೆ ಮಾಡಿದ್ದರೆಂದೂ ತಿಳಿದುಬರುತ್ತದೆ. ಅಂತೆಯೇ ಮೂಡಲಾಗಿ ಪ್ರವಾಸಮಾಡಿದ್ದರು. ತುಳುನಾಡಿಗೆ ಅವರು ರಭಸದಿಂದ ಹಾಗೂ ಹೆಚ್ಚು ಸಂಖ್ಯಾಕರಾಗಿ ಬಂದುದು ಕ್ರಿ ಶ. 1560ರ ನಂತರ. ಇದು ಪೋರ್ಚುಗೀಸರು ಗೋವೆಯನ್ನು ಬಲಾತ್ಕಾರದಿಂದ ಸೆಳೆಕೊಂಡ ನಂತರ. ಗೌಡದೇಶವೆಂದರೆ ಈಗಿನ ಬಂಗಾಳ ಹಾಗೂ ಅದರ ಸುತ್ತು ಮುತ್ತಲಿನ ದೇಶಗಳು. ಅಲ್ಲಿಂದ ಕೊಂಕಣಕ್ಕೆ ಬಂದು ನೆಲೆಸಿದುದರಿಂದ ಅವರಿಗೆ ಗೌಡ ಸಾರಸ್ವತ ಬ್ರಾಹ್ಮಣರೆಂಬ ಹೆಸರಾಯಿತು. ಇವರು ಆದಿಯಲ್ಲಿ ಶಾಕ್ತೇಯರೂ, ಶೈವರೂ ಆಗಿದ್ದು, ಮಧ್ವಾಚಾರ್ಯರ ನಂತರ ವೈಷ್ಣವ ಧರ್ಮವನ್ನು ಅವಲಂಭಿಸಿದರು. ಈಗಲೂ ಅವರ ಮೂಲ ದೇವರುಗಳು ಸ್ಮಾರ್ತ ಸಂಪ್ರದಾಯದ ದೇವತೆಗಳೇ. ಶ್ರೀಯುತ ಪೈಗಳ ಮಾತಿನಲ್ಲೇ ಹೇಳುವುದಾದರೆ "ಹೀಗೆ ಆ ಮಠವು ಸ್ಥಾಪಿತವಾದ ಬಳಿಕ (ಕೈವಲ್ಯಪುರ ಮಠ) ಹೆಚ್ಚು ಕಡಿಮೆ ಆರೇಳು ಶತಮಾನಗಳ ಕಾಲಕ್ಕೆ ನಮ್ಮ ಹಿರಿಯರು ಹರಿಹರಭಕ್ತರೂ, ಅದ್ವೈತಿಗಳೂ ಆಗಿರುವಲ್ಲಿ, ಕ್ರಿ.ಶ. 13ನೆಯ ಶತಮಾನದಲ್ಲಿ ಶ್ರೀಮಧ್ವಾಚಾರ್ಯರು ದ್ವೈತಸಿದ್ಧಾಂತವನ್ನೂ, ವೈಷ್ಣವ ಧರ್ಮವನ್ನೂ ಪ್ರಚಾರ ಗೊಳಿಸುವ ದಿಗ್ವಿಜಯದಲ್ಲಿ ಗೋವೆಯನ್ನು ಸಂದರ್ಶಿಸಿದರೆಂದು ಮಧ್ವ ವಿಜಯದಲ್ಲಿದೆ. ಆಗ್ಗೆ ನಮ್ಮ ಹಿರಿಯರಲ್ಲಿ ಅನೇಕ ಮಂದಿ ಮಾಧ್ವಮತವನ್ನು ಅಂಗೀಕರಿಸಿದರು ಮತ್ತು ಅಂದಿನಿಂದ ನಮ್ಮಲ್ಲಿ ದ್ವೈತ ಸಿದ್ಧಾಂತವೂ ವೈಷ್ಣವ ಧರ್ಮವೂ ಮೊದಲಾದವು. ಆದರೆ ಚೋದ್ಯವೇನೆಂದರೆ, ಅದ್ವೈತವನ್ನು ಬಿಟ್ಟು ದ್ವೈತವನ್ನೂ, ಶೈವಮತವನ್ನೂ ಬಿಟ್ಟು ವೈಷ್ಣವ ಧರ್ಮವನ್ನೂ, ಸ್ವೀಕರಿಸುವಂದು ಕೂಡಾ ಅವರು ಆ ಮುಂಚಿನಿಂದ ಆರಾಧಿಸುತ್ತಾ ಬಂದ ತಮ್ಮ ಶೈವ ಶಾಕ್ತ ಕುಲದೇವತೆಗಳಲ್ಲಿ ಒಂದೇ ಒಂದನ್ನಾದರೂ ಅಲ್ಲಗಳೆಯಲಿಲ್ಲ. ಅದನ್ನು ಆರಾಧಿಸುವ ವಿಧಾನಗಳಲ್ಲಿ ಅಷ್ಟಿಷ್ಟು ಮಾರ್ಪಡಿಸಿದರು ಮಾತ್ರವಲ್ಲದೆ ಅವುಗಳಲ್ಲಿ ಯಾವುದನ್ನೂ ತೊರೆದುಬಿಡಲಿಲ್ಲ. ಈಗಲೂ ನಮ್ಮ ಕುಲದೇವತೆಗಳೆಂದರೆ ಆ ಪ್ರಾಚೀನ ಕಾಲದಿಂದ ಇದ್ದುವೇ ಅಲ್ಲದೆ ಅವಲ್ಲಿ ಒಂದಾದರೂ ಕಡಿಮೆಯಾಗಿಲ್ಲ"

ಶ್ರೀಮಾನ್ ಗೋವಿಂದ ಪೈಗಳ ತೀರ್ಮಾನವನ್ನು ಖಂಡಿಸಿ ಅಭಿಪ್ರಾಯವನ್ನೀಯಲು ಸಾಧ್ಯವಿಲ್ಲ. ಅವರು ಆಧಾರ ಸಹಿತ ಮಾಡಿದ ನಿರ್ಧಾರವಿದು. ಆದರೆ ಸಹ್ಯಾದ್ರಿಖಂಡದಲ್ಲಿ ಉಲ್ಲೇಖವಿರುವ ಕೊಂಕಣೋತ್ಪತ್ತಿ ಎಂಬ ಅಧ್ಯಾಯದ ವಿಮರ್ಶೆಯನ್ನು ಅವರು ತಮ್ಮ ಲೇಖನದಲ್ಲಿ ಮಾಡದಿದ್ದುದು ಬಹಳ ಆಶ್ಚರ್ಯದ ಸಂಗತಿ. ಪಶ್ಚಿಮ ಕರಾವಳಿಯನ್ನು ಸಪ್ತ ಕೊಂಕಣವಾಗಿ ವಿಭಾಗಿಸಿದ ದೃಷ್ಟಾಂತಕ್ಕೂ, ಪಂಚಗೌಡರನ್ನು ಗೋವಾದಲ್ಲಿ ಸ್ಥಾಪಿಸಿದಕ್ಕೂ ಉತ್ತರ ಸಹ್ಯಾದ್ರಿಯನ್ನು ಆಧಾರಗಳಲ್ಲಿ ಒಂದಾಗಿ ಎತ್ತಿ ಹೇಳುತ್ತಾರೆ. ಆದರೆ ಅದೇ ಗ್ರಂಥದಲ್ಲಿ ಕೊಂಕಣೋತ್ಪತ್ತಿ ಎಂಬ ಅಧ್ಯಾಯದಲ್ಲಿ ಕೊಂಕಣರ (ಗೌಡಸಾರಸ್ವತರ) ಖಂಡನೆಯನ್ನು ವೈಪರೀತ್ಯವಾಗಿ

ಮಾಡಿದುದು ಹೇಗೆ ಅವರ ಅವಗಾಹನೆಗೆ ಬರಲಿಲ್ಲವೆಂಬುದು ಆಶ್ಚರ್ಯದ ಸಂಗತಿ.

'ಗೌಡಸಾರಸ್ವತ ಬ್ರಾಹ್ಮಣರು' ಎಂಬ ಪಂಡಿತ ಕೆ. ಪಿ. ಪುರಾಣಿಕರಿಂದ ಬರೆಯಲ್ಪಟ್ಟ ಹೊತ್ತಗೆಯಲ್ಲಿ ಅಡಕವಾಗಿರುವ ಕೆಲವು ವಿಷಯಗಳನ್ನು ಚಿಕ್ಕ ರೂಪದಲ್ಲಿ ಚರ್ಚಿಸುವುದು ಅಪ್ರಸ್ತುತವಾಗಲಿಕ್ಕಿಲ್ಲ.

1. "ಸರಸ್ವತೀ ನದಿಯು ಪ್ಲಕ್ಷ ಪ್ರಸ್ರವಣದಿಂದ ಹುಟ್ಟಿಹರಿದು, ಬಂದು ಆ ನದಿಯ ತೀರ ಪ್ರದೇಶವೆಲ್ಲವೂ, ಅಂದರೆ, ಕಾಶ್ಮೀರ, ಪಂಜಾಬ, ಕುರುಕ್ಷೇತ್ರಗಳನ್ನೊಳಗೊಂಡ ಪ್ರದೇಶವು ಸಾರಸ್ವತ ಪ್ರದೇಶವೆಂತಲೂ, ಅಲ್ಲಿಯ ನಿವಾಸಿಗಳಾಗಿದ್ದ ಬ್ರಾಹ್ಮಣರು 'ಸಾರಸ್ವತ ಬ್ರಾಹ್ಮಣರು' ಎಂಬುದೂ ಮತ್ತು ಜಗತ್ತಿನಲ್ಲಿಯೇ ಅತಿ ಪುರಾತನವೂ ಹಿಂದುಗಳಿಗೆ ಪರಮಪವಿತ್ರವೂ ಆಗಿರುವ ಜ್ಞಾನ ಭಂಡಾರವಾದ ವೇದಗಳನ್ನು ಸಾರಸ್ವತ ಬ್ರಾಹ್ಮಣರೇ ರಕ್ಷಿಸಿಕೊಂಡು ಬಂದು, ಇತರರಿಗೂ ಉಪದೇಶಿಸಿ ಪ್ರಚಾರ ಮಾಡಿದರೆಂಬುದು ಸ್ಪಷ್ಟವಾಗಿದೆ." ಸಾರಸ್ವತರ ಕುರಿತಾದ ಈ ಅಭಿಪ್ರಾಯವನ್ನು ವಿಮರ್ಶಕರು ವ್ಯಕ್ತ ಮಾಡಿದುದು ಅನುಚಿತವಲ್ಲ.

2. ಅಂತೆಯೇ– 'ಮೊದಲು ದಕ್ಷಿಣ ದೇಶದ ಜನಗಳು ಇವರು ದ್ರಾವಿಡರಿಂದ ಬೇರೆ ಎಂಬುದನ್ನು ತೋರಿಸುವುದಕ್ಕಾಗಿ ಇವರನ್ನು ಗೌಡರೆಂದು ನಿರ್ದೇಶಿಸಿ, ಆ ಪಂಚ ಗೌಡರಲ್ಲಿ 'ಸಾರಸ್ವತ' ರೆಂಬುದನ್ನು ಸ್ಪಷ್ಟಪಡಿಸುವುದಕ್ಕಾಗಿ ಒಟ್ಟಾಗಿ ಇವರನ್ನು ಗೌಡಸಾರಸ್ವತ ಬ್ರಾಹ್ಮಣರು ಎಂದು ರೂಢವಾಯಿತು'— ಈ ಅಭಿಪ್ರಾಯದಲ್ಲೂ ಸಂದೇಹ ಕಂಡು ಬರುವುದಿಲ್ಲ.

3. 'ಸಾರಸ್ವತ ಬ್ರಾಹ್ಮಣರು ಅತಿಪುರಾತನ ಕಾಲದಲ್ಲಿಯೇ ದಕ್ಷಿಣ ದೇಶಕ್ಕೆ ಬಂದು ಅಲ್ಲಲ್ಲಿ ನೆಲಸಿರುವುದೂ ಮಾತ್ರವಲ್ಲ, ದಕ್ಷಿಣದಲ್ಲಿ ತಮ್ಮ ವಿದ್ಯಾ, ಬುದ್ಧಿ, ಧೈರ್ಯಾದಿಗಳಿಂದ ಅತ್ಯುನ್ನತ ಸ್ಥಾನಗಳಲ್ಲಿ ಇದ್ದುದಾಗಿಯೂ ಚರಿತ್ರೆಯಿಂದ ತಿಳಿಯುತ್ತದೆ' ಎಂಬುದೂ ಒಪ್ಪುವ ಮಾತೇ ಆಗಿದೆ. ಆದರೆ ಈ ವಿಮರ್ಶಕರ ಇನ್ನಿತರ ತೀರ್ಮಾನಗಳು ಐಚ್ಛಿಕವಿದ್ದಂತೆ ಕಂಡು ಬರುತ್ತವೆ. ಅವಾವುವೆಂದು ತಿಳಿಯುವುದುಚಿತ.

(i) ಸಾರಸ್ವತ ಬ್ರಾಹ್ಮಣರು ಕ್ರಿ.ಪೂ. ನಾಲ್ಕನೇ ಶತಮಾನದಲ್ಲಿಯೇ ದಕ್ಷಿಣ ದೇಶದಲ್ಲಿ ಯಾತ್ರಾರ್ಥಿಗಳಾಗಿ ಸಂಚರಿಸಿ ರಾಮೇಶ್ವರಕ್ಕೆ ಹೋಗಿದ್ದರೆಂಬುದಕ್ಕೆ ಅವರಿತ್ತ ಆಧಾರಗಳು ತೃಪ್ತಿಕರವಾಗಿಲ್ಲ.

(ii) ಯಾತ್ರಾರ್ಥಿಯಾಗಿ ದಕ್ಷಿಣಕ್ಕೆ ಬಂದ ತಂಡಕ್ಕೆ ಸೇರಿದ 'ರಂಗಶರ್ಮ' ಎಂಬವನು ಕನ್ನಡ ಜಿಲ್ಲೆಯ ಮಂಜುಲಾಪುರ (ಮಂಜೇಶ್ವರ) ವೆಂಬ ಕ್ಷೇತ್ರಕ್ಕೆ ಬಂದು ನೆಲೆಸಿ ಕ್ರಿ. ಶ. ಮೊದಲನೆಯ ಶತಮಾನದಲ್ಲಿಯೇ ಮಂಜೇಶ್ವರ ಶ್ರೀಮದನಂತೇಶ್ವರ ದೇವಸ್ಥಾನವನ್ನು ನಿರ್ಮಿಸಿದನು ಎಂಬುದಕ್ಕೆ ಚಾರಿತ್ರಿಕ

ಆಧಾರಗಳನ್ನು ಕೊಡಲಿಲ್ಲ. ಇಷ್ಟರ ತನಕ ದೊರಕಿದ ದಾಖಲೆ ಪ್ರಕಾರ ನಮ್ಮ ಜಿಲ್ಲೆಯಲ್ಲಿ ಕ್ರಿ.ಶ. 500ಕ್ಕಿಂತ ಹಿಂದಿನ ದೇವಸ್ಥಾನಗಳು ಕಂಡುಬರುವುದಿಲ್ಲ. 'ಮಂಜೇಶ್ವರ'ವೆಂಬ ಯಂ. ಗಣಪತಿರಾವ್ ಐಗಳರ ಪುಸ್ತಕದಲ್ಲಿ ಈ ರಂಗಶರ್ಮನು ಕ್ರಿ. ಶ. 10ನೆಯ ಶತಮಾನಕ್ಕೆ ಸೇರಿದವನೆಂಬ ವಿಮರ್ಶೆ ಮಾಡಿದ್ದು ಒಪ್ಪುವಂತಿದೆ.

ರಂಗಶರ್ಮನ ನಂತರ 'ವಿರೂಪಾಕ್ಷ' ನೆಂಬ ಬ್ರಾಹ್ಮಣನೊಬ್ಬನು ಸಾಷಷ್ಟಿ ದೇಶದ ಕುಶಸ್ಥಳೀ ಎಂಬ ತನ್ನ ಗ್ರಾಮದಿಂದ ತೀರ್ಥ ಸ್ನಾನಕ್ಕಾಗಿ ಹೊರಟು 'ಪಾಟಕ' ಎಂಬ ಹೆಸರುಳ್ಳ ಪಟ್ಟಣದಲ್ಲಿ ಶ್ರೇಷ್ಟವಾದ ಸಪ್ತ ಕೋಟೀಶ್ವರನನ್ನು ನೋಡಿ ಅಲ್ಲಿಂದ ಗೋಕರ್ಣಕ್ಕೆ ಬಂದು ಪರಮೇಶ್ವರನನ್ನು ಪೂಜಿಸಿ, ದ್ವೈಪಾಯನಿಯನ್ನು ನಮಸ್ಕರಿಸಿ, ಕೊಲ್ಲೂರು ಮುಖಾಂಬಿಕೆಯನ್ನು ನೋಡಿ, ಅಲ್ಲಿರುವ ಕಾಮ ಸರೋವರದಲ್ಲಿ ಸ್ನಾನಮಾಡಿ, ಅಲ್ಲಿಂದ ಕುಟಶಾದ್ರಿಗೆ ಹೋಗಿ, ಅಲ್ಲಿ ಮಹೌಷಧಿಗಳನ್ನು ನೋಡಿ, ಅಲ್ಲಿಂದ ಕ್ರೋಢ ಮುನಿಯು ತಪಸ್ಸು ಮಾಡಿಕೊಂಡಿದ್ದ ಸ್ಥಳದಲ್ಲಿರುವ ಶಂಕರ ನಾರಾಯಣನ ದರ್ಶನ ಮಾಡಿ, ಶುಕ್ತಿಮತಿ ನದಿಯನ್ನು ದಾಟಿ, ಬಾರ್ಕೂರಿಗೆ ಬಂದು, ಭೂಸ್ಥಾಪನೆಯಾದ ಸಿಂಹಾಸನವನ್ನು ನೋಡಿ, ಅಲ್ಲಿಂದ ಕದಳೀ ವನಕ್ಕೆ (ಕದ್ರಿ—ಮಂಗಳೂರು) ಬಂದು, ಅಲ್ಲಿ ಸ್ನಾನ ಮಾಡಿ ಶಂಕರನನ್ನು ಪೂಜಿಸಿ, ಅಲ್ಲಿಂದ ಹೊರಟು ಕಣ್ವಾಶ್ರಮಕ್ಕೆ ಬಂದು, ಅಲ್ಲಿಂದ ಮಂಜೇಶ್ವರಕ್ಕೆ ಬಂದು ಮಂಜರೀಪನನ್ನೂ ಸುಬ್ರಹ್ಮಣ್ಯನನ್ನೂ ಭದ್ರ ನರಸಿಂಹನನ್ನೂ ಮಹಾನಂದೀಶ್ವರನನ್ನೂ ವರುಣ ದೇವನನ್ನೂ, ಪೂಜಿಸಿ ತನ್ನ ಮಗನನ್ನೂ ಕೆಲವು ಮಂದಿ ಗೌಡಸಾರಸ್ವತ ಬ್ರಾಹ್ಮಣರನ್ನೂ ಈ ಕ್ಷೇತ್ರದಲ್ಲಿ ನಿಲ್ಲಿಸಿ, ಅಲ್ಲಿಂದ ಯಾತ್ರಾರ್ಥಿಯಾಗಿ ದಕ್ಷಿಣ ದೇಶಕ್ಕೆ ಹೊರಟುಹೋದನೆಂದು ಮಂಜುಳ ಮಹಾತ್ಮೆಯಲ್ಲಿ ಕಂಡು ಬರುತ್ತದೆ.

ಈ ವಿರೂಪಾಕ್ಷನು ಉಡುಪಿಯಲ್ಲಿ ಅನಂತೇಶ್ವರನನ್ನು, ದರ್ಶನ ಮಾಡಿದನೆಂಬುದರಿಂದ,ಆತನ ಕಾಲವು ಕ್ರಿ.ಶ. ೮ನೆಯ ಶತಮಾನಕ್ಕಿಂತ ಈಚೆಗಿರಬೇಕೆಂದೂ (ಕಾರಣ ಉಡುಪಿಯಲ್ಲಿದ್ದ ಅನಂತನಾಥ ಬಸದಿಯನ್ನು ತನ್ನ ಸ್ವಾಧೀನ ಪಡಿಸಿ ಅಲ್ಲಿರುವ ಅನಂತನಾಥ ಜಿನೇಶ್ವರನ ಪ್ರತಿಮೆಯನ್ನು ತೆಗೆದು ಅನಂತೇಶ್ವರ ಲಿಂಗವನ್ನು ಶಂಕರಾಚಾರ್ಯರು ಪ್ರತಿಷ್ಠಿಸಿದರೆಂದು ಶಂಕರಾಚಾರ್ಯರ ಚರಿತ್ರೆಯಲ್ಲಿ ಕಂಡು ಬರುತ್ತದೆ.), ಕದರೆ ದೇವಸ್ಥಾನಕ್ಕೆ ಬಂದು ಈಶ್ವರನನ್ನು ಪೂಜಿಸಿದನೆಂದು ಹೇಳಿದುದರಿಂದ, ಆತನ ಕಾಲವು ಹತ್ತನೆಯ ಶತಮಾನಕ್ಕಿಂತ ಮೊದಲಲ್ಲವೆಂದೂ (ಕಾರಣ ಕದರೆ ದೇವಸ್ಥಾನವನ್ನು ಈ ಜಿಲ್ಲೆಯನ್ನು ಮಂಡಲೇಶ್ವರನಾಗಿ ಆಳಿದ ಆಳುಪ ಅರಸು ಕುಂದವರ್ಮನು ಕಲಿವರ್ಷ 4068ರಲ್ಲಿ (ಎಂದರೆ ಕ್ರಿ.ಶ. 958) ಕಟ್ಟಿಸಿ ಪ್ರತಿಷ್ಟಿಸಿದನೆಂದು ತಿಳಿದು ಬರುವುದರಿಂದ) ತೀರ್ಮಾನಿಸಬಹುದು. ಶ್ರೀಮಾನ್

ಗೋವಿಂದ ಪೈಗಳು ಅವರ 'ತಮ್ಮ ಹಿರಿಯರನ್ನು ಕುರಿತು' ಎಂಬ ಲೇಖನದಲ್ಲಿ ಈ ವಿರೂಪಾಕ್ಷನ ಕಾಲಗಣನೆಯನ್ನು ಕ್ರಿ. ಪೂ.ಕ್ಕೆ ಕೊಂಡೊಯ್ದುದು ಅಷ್ಟೊಂದು ಸರಿಯೆಂದು ನನಗನಿಸುವುದಿಲ್ಲ. ಅಂತೂ ಇಷ್ಟು ವಿಷಯಗಳು ಸ್ಪಷ್ಟವಿವೆ ಮಂಜೇಶ್ವರ ದೇಗುಲವು ಕ್ರಿ ಶ. 1293ರಲ್ಲಿ ಗೌಡಸಾರಸ್ವತರೊಂದಿಗಿತ್ತೆಂದೂ, ಆದುದರಿಂದ 13ನೇ ಶತಮಾನದಲ್ಲಂತೂ ಗೌಡಸಾರಸ್ವತರು ಖಂಡಿತವಾಗಿಯೂ 'ತುಳುವ'ದ ದಕ್ಷಿಣದಲ್ಲಿದ್ದರೆಂದೂ ತಿಳಿಯಬಹುದು.

3. 'ಸಹ್ಯಾದ್ರಿ ಖಂಡವು ಸ್ಕಂದ ಪುರಾಣದೊಳಗಣ ಒಂದು ಭಾಗವು. ಗರ್ಸನ್ ಡಿ. ಕುನ್ಹಾ ಎಂಬವರು ಬೇರೆ ಬೇರೆ ಕಡೆಗಳಲ್ಲಿ ಇರತಕ್ಕ ಸಹ್ಯಾದ್ರಿ ಖಂಡದ ಹಸ್ತ ಪ್ರತಿಗಳನ್ನೆಲ್ಲಾ ತರಿಸಿ ಸರಿಯಾಗಿ ಸಂಶೋಧನೆ ಮಾಡಿ ಅದನ್ನು ಪೂರ್ವಾರ್ಧ, ಉತ್ತರಾರ್ಧ ವೆಂದು ಎರಡು ಭಾಗವಾಗಿ 1877ನೆಯ ಇಸವಿಯಲ್ಲಿ ಬೊಂಬಾಯಿಯಲ್ಲಿ ಅಚ್ಚು ಹಾಕಿಸಿ ಪ್ರಕಟಿಸಿರುತ್ತಾರೆ' ಎಂದು ವಿಮರ್ಶಕರು ಹೇಳುವುದು ಸಹಜ. ಆದರೆ ಈ ಕೆಲಸವು ಕುನ್ಹಾರಿಂದ ಚಾರಿತ್ರಿಕ ಹಿನ್ನೆಲೆಯಲ್ಲಿ ಸಂಶೋಧನೆ ಮಾಡಿದ ರೀತಿ ಕಂಡು ಬರುವುದಿಲ್ಲ. ಸಹ್ಯಾದ್ರಿ ಖಂಡವು ಚಾರಿತ್ರಿಕ ಸಂಶೋಧನೆಗೆ ಆಧಾರ ಗ್ರಂಥವಾಗಲೊಲ್ಲದೇಕೆ ಎಂಬುದನ್ನು ಈ ಮೊದಲೇ ಚರ್ಚಿಸಿದ್ದೇನೆ. ಇಲ್ಲಿ ಒಂದು ಮಾತನ್ನು ಸ್ಪಷ್ಟ ಹೇಳಬೇಕಾಗಿದೆ. ಈ ಸಹ್ಯಾದ್ರಿ ಖಂಡವನ್ನೂ ಅದರಲ್ಲಿರುವ ಬೇರೆ ಬೇರೆ ಅಂಶಗಳನ್ನೂ ಅವರವರಿಗೆ ಬೇಕಾದಂತೆ ಉಪಯೋಗಿಸಿಕೊಳ್ಳುವ ಚಮತ್ಕಾರವಾಗಿರುತ್ತದೆ. ಗೌಡ ಸಾರಸ್ವತರ ವಿಚಾರ ಅದರಲ್ಲಿ ನಿರುಕ್ತವಾಗಿದೆ. ಬ್ರಾಹ್ಮಣರೆಂಬ ವಿಷಯವನ್ನು ಪ್ರತಿಪಾದಿಸಿದೆ. ಆದರೆ ಅದೇ ಗ್ರಂಥದಲ್ಲಿ ಕೊಂಕಣರನ್ನು ಖಂಡಿಸಿದೆ, ನಿಂದಿಸಿದೆ. ಅದನ್ನೇಕೆ ಗಮನಿಸುವುದಿಲ್ಲ? ಚಿತ್ಪಾವನ ಮತ್ತು ಖರಾಷ್ಟ್ರ ಬ್ರಾಹ್ಮಣರ ಉತ್ಪತ್ತಿಯನ್ನು ನಿಂದ್ಯಾಸ್ಪದವಾಗಿ, ವಸ್ತು ಸ್ಥಿತಿಗೆ ವಿರುದ್ಧವಾಗಿ ಬರೆದುದನ್ನೇಕೆ ಖಂಡಿಸುವುದಿಲ್ಲ? ಆದುದರಿಂದಲೇ ನಾನು ಅದನ್ನು ಆಧಾರ ಗ್ರಂಥವಾಗಿ ಒಪ್ಪುವುದಿಲ್ಲ.

4. 'ದೇವಾಲಯಗಳು' ಎಂಬ ಶಿರೋನಾಮೆಯ ಕೆಳಗೆ ಈ ವಿಮರ್ಶಕರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾರ್ಕಳ, ಮೂಲ್ಕಿ, ಬಂಟವಾಳ, ಮಂಗಳೂರಿನಲ್ಲಿಯ ಮಹಾಮಾಯ ದೇವಸ್ಥಾನ, ಶ್ರೀ ವೆಂಕಟ್ರಮಣ ಸ್ವಾಮಿ ದೇವಸ್ಥಾನ, ಮೊಗರುನಾಡು, ಉಳ್ಳಾಲ, ಕಟಪಾಡಿ, ಕಲ್ಯಾಣಪುರ, ಗಂಗೊಳ್ಳಿ, ಸೋಮೇಶ್ವರ, ಬಸರೂರು ಇತ್ಯಾದಿ ಸ್ಥಳಗಳಲ್ಲಿರುವ ದೇವಸ್ಥಾನಗಳು ಬಹು ಪ್ರಾಚೀನವಾದುವುಗಳೆಂದು ನಿರ್ಧರಿಸಿದ್ದಾರೆ. ಇಲ್ಲಿ ಬಹು ಪ್ರಾಚೀನವೆಂಬುದಕ್ಕೆ ಚರಿತ್ರೆಯಲ್ಲಿ ಯಾವ ಅರ್ಥವನ್ನು ಅವರಿತ್ತಿದ್ದಾರೆಂದು ತಿಳಿದುಬರುವುದಿಲ್ಲ. ನಮ್ಮ ಪ್ರಭೃತಿಗಳಾದ ಶ್ರೀ ಗೋವಿಂದ ಪೈಗಳೇ ತುಳುನಾಡಿನ ಕಾರ್ಕಳದ ಶ್ರೀ ವೆಂಕಟ್ರಮಣ ದೇಗುಲವು

ಕ್ರಿ. ಶ. 1537 ರಲ್ಲಿ ಪ್ರತಿಷ್ಠೆಯಾಗಿದ್ದುದೆಂದು ನಿರ್ಧರಿಸುವಾಗ ಬಹುಃ ಪ್ರಾಚೀನತೆಯ ಕುರಿತು ಇನ್ನೇನನ್ನು ನಿರ್ಧರಿಸಬೇಕಾಗಿಲ್ಲ.

5. 'ಗೌಡ ಸಾರಸ್ವತ ಬ್ರಾಹ್ಮಣರು (ಮೊದಲಿನಿಂದಲೂ ವೈಷ್ಣವರು) ಮಾಧ್ವ ಮತವನ್ನು ಅವಲಂಬಿಸಿದುದರಿಂದ' ಎಂದು ಮುಂತಾದ ವಿಮರ್ಶಕರ ನಿರ್ಧಾರದಲ್ಲಿ ಮೂಲಭೂತ ಕೊರತೆ ಎದ್ದು ತೋರುತ್ತದೆ. ಗೌಡ ಸಾರಸ್ವತರು 'ಮೊದಲಿನಿಂದಲೂ ವೈಷ್ಣವರಲ್ಲ'. ಇದಕ್ಕುತ್ತರ ಅವರು ಉದ್ಧೃತಿಗಳನ್ನಾರಿಸುವ ಸಹ್ಯಾದ್ರಿ ಖಂಡದಲ್ಲಿಯೇ ಇದೆ. ಮಾತ್ರವಲ್ಲದೆ ಶ್ರೀಮಾನ್ ಗೋವಿಂದ ಪೈಗಳು ಅವರ 'ನಮ್ಮ ಹಿರಿಯರನ್ನು ಕುರಿತು' ಎಂಬ ಲೇಖನದಲ್ಲಿ ನಾವೀಗ ವೈಷ್ಣವರಾಗಿರುವಂತೆ ನಮ್ಮ ಹಿರಿಯರು ವೈಷ್ಣವರಾಗಿರಲಿಲ್ಲ, ಅವರು ಶೈವರೋ, ಶಾಕ್ತರೋ ಆಗಿದ್ದಿರಬೇಕೆಂಬುದಕ್ಕೆ............' ಎಂಬುದಾಗಿ ನಿಜಸ್ಥಿತಿಯನ್ನು ಸ್ಪಷ್ಟವಾಗಿ ತಿಳಿಸಿದುದು ವಿಚಾರಣೀಯವಾಗಿದೆ. ಗೌಡ ಸಾರಸ್ವತರು ಮಾಧ್ವರಾಗುವ ಮೊದಲು ಸ್ಮಾರ್ತರಾಗಿದ್ದರೆಂದರೆ ತಪ್ಪಾಗಲಾರದು.

6. ಮತ್ಸ್ಯಾಹಾರದ ಕುರಿತಾಗಿ ಒಂದೆರಡು ಮಾತು: ದಕ್ಷಿಣ ಕನ್ನಡ ಜಿಲ್ಲೆಯ ಮಟ್ಟಿಗೆ ಕೊಂಕಣಸ್ಥರೆಂದರೆ ಗೌಡಸಾರಸತ್ವತ ಬ್ರಾಹ್ಮಣರೇ ಆಗಿರುವರು. ಕೊಂಕಣಸ್ಥರು ಕೊಂಕಣ ದೇಶದಲ್ಲಿ ವಾಸಿಸುವವರು ಈ ಕೊಂಕಣಸ್ಥರು ಮತ್ಸ್ಯಾಹಾರವನ್ನು ಸ್ವೀಕರಿಸುವ ವಿಷಯದಲ್ಲಿ ವಿಮರ್ಶಕರು ಮಾಡಿದ ಸಮರ್ಥನೆಯು ಅಷ್ಟೊಂದು ತೃಪ್ತಿಕರವಾಗಿಲ್ಲ. 'ಸಾರಸ್ವತ ಋಷಿಯು ಮತ್ಸ್ಯಾಹಾರವನ್ನು ತಿಂದು ಕೊಂಡು ತನ್ನನ್ನುಳಿಸಿಕೊಂಡದ್ದರಿಂದ ಈ ಗೌಡಸಾರಸ್ವತರು ಮತ್ಸ್ಯಗಳನ್ನು ಭಕ್ಷಿಸುವುದ ನ್ಯಾಯ'ವೆಂಬ ಕೆಲವರ ವಾದವನ್ನು ಅವರು ಕಟುವಾಗಿ ಖಂಡಿಸಿದ್ದು ಯೋಗ್ಯವೇ ಸರಿ. ಆದರೆ, 'ಸಮುದ್ರ ದಂಡೆಯಲ್ಲಿರುವ ಊರಿನ ಬ್ರಾಹ್ಮಣರೆಲ್ಲರೂ ಮತ್ಸ್ಯಾಹಾರಿಗಳೆಂದೇ ಹೇಳಬಹುದು' ಎಂಬ ಅವರ ಉಕ್ತಿ ಸರಿಯಾದುದಲ್ಲ. ಗೌಡ ಸಾರಸ್ವತರು ಮತ್ಸ್ಯಾಹಾರವನ್ನು ಕೊಳ್ಳಲು ಶಾಸ್ತ್ರೀಯ ಕಾರಣವುಂಟು. ಮತ್ಸ್ಯಾಹಾರದಿಂದ ಅವರ ಸ್ಥಾನಮಾನಗಳಿಗೆ ಅಪಘಾತವಾಗಲಾರದು, ಅವರಲ್ಲಿರುವ ಬ್ರಾಹ್ಮಣತ್ವ ಎಂದಿಗೂ ಹೋಗಲಾರದು ಎಂಬುದಕ್ಕೂ ಶಾಸ್ತ್ರಾಧಾರವಿದೆ. ಬ್ರಾಹ್ಮಣೋತ್ಪತ್ತಿ ಮಾರ್ತಂಡ ಎಂಬ ಗ್ರಂಥದ ಪುಟ 354—55 ರಲ್ಲಿ ಈ ರೀತಿ ಉಲ್ಲೇಖವಿರುವುದು ಗಣನೀಯವಾಗಿದೆ. 'ಕೊಂಕಣಸ್ಥ ಬ್ರಾಹ್ಮಣರು ಷಟ್ಕರ್ಮ ನಿರತರಿದ್ದರೂ ಕೂಡಾ ಮತ್ಸ್ಯಭೋಜನ ಮಾಡುವವರು. ಈ ಪದ್ಧತಿ ಆ ದೇಶದಲ್ಲಿ ದೋಷಕರವಲ್ಲ. ಇದರಲ್ಲೊಂದು ನಿಯಮವಿದೆ. 'ಮತ್ಸ್ಯ' ಎಂಬ ಜಾತಿಯ ಮೀನನ್ನು ನಿಯತ ಕಾಲದಲ್ಲಿ ಪವಿತ್ರಗೊಳಿಸಿ ಸೇವಿಸ

ಲಾಗುವುದಲ್ಲದೆ ಸ್ವೇಚ್ಛಾನುಸಾರವಾಗಿ ಅದನ್ನು ಯಾವ ಕಾಲಕ್ಕೂ ಬಳಸುವ ಕ್ರಮ ವಿಲ್ಲ.

ಅಸ್ಯಸ್ಪುಟಾವಲೋಕೇನ ಸಂಯುಗ್ಶ್ಚೋಥೋ ಭವಿಷ್ಯತಿ ।
ಷಟ್ಕರ್ಮನಿರತಾ ಹ್ಯೇತೇ ಮತ್ಸ್ಯಮಾಂಸಾದಿ ಭೋಜಿನಃ ।
ಯಥಾದೇಶಸ್ಥಥಾ ದೋಷಃ ಸ್ವಸ್ವದೋಷೇಣ ಕಥ್ಯತೇ ।
ಚರ್ಮಾಂಬು ಗುರ್ಜರೇ ದೇಶೇ ದಾಸ್ಯಾಃ ಸಂಗಸ್ತು ದಕ್ಷಿಣೇ ।
ನ ದಂತಶುದ್ಧಿಸ್ತು ಕರ್ಣಾಟೇ ಕಾಶ್ಮೀರೇ ಭಟ್ಟ ಮಾರಿಜಾ ।
ಗೋವಾಹನಂ ಚ ತೈಲಂಗೇ ಪ್ರಾತರನ್ನಂ ಹಿ ದ್ರಾವಿಡೇ ।
ಗುರ್ಜರೀ ಕಚ್ಛಹೀನಾ ಚ ವಿಧವಾ ಚ ಸಕಂಚುಕೀ ।
ಕಾನ್ಯಕುಬ್ಜೇ ಭ್ರಾತೃಜಾಯಾಗಾಮಿದೋಷಾಸ್ತು ದೇಶಜಾಃ ।

"ಗುರ್ಜರದೇಶದಲ್ಲಿ ಚರ್ಮದ ಪಾತ್ರೆಯಲ್ಲಿ ನೀರನ್ನು ಕುಡಿಯುವುದೂ, ದಕ್ಷಿಣದ ಮಲಯಾಳದಲ್ಲಿ ದಾಸೀ ಸಂಗವನ್ನು ಮಾಡುವುದೂ, ಹಾಗೆಯೇ ಕರ್ನಾಟಕ ದೇಶದಲ್ಲಿ ಹಲ್ಲು ತೊಳೆಯದಿರುವುದೂ, ದ್ರಾವಿಡ ದೇಶದಲ್ಲಿ ಬೆಳಗ್ಗಿನ ಹೊತ್ತು ಹಿಂದಿನ ದಿನದ ಅನ್ನವನ್ನು ಮೊಸರಿನೊಂದಿಗೆ ಉಣ್ಣುವುದೂ, ತೈಲಂಗ ದೇಶದಲ್ಲಿ ಬಸವನ ಮೇಲೆ ಸವಾರಿ ಮಾಡುವುದೂ, ಗುಜರಾತಿನಲ್ಲಿ ಸ್ತ್ರೀಯರು ಕಚ್ಛ ಹೀನರಾಗಿರುವುದೂ, ವಿಧವೆಯರು ಕುಪ್ಪಸವನ್ನು ತೊಡುವುದೂ, ಕಾನ್ಯಕುಬ್ಜದಲ್ಲಿ ಅಣ್ಣನ ಪತ್ನಿಯನ್ನು ವರಿಸುವುದೂ ಹೇಗೆ ದೋಷವಲ್ಲವೋ, ಹಾಗೆ ಆ ದೇಶದಲ್ಲಿ (ಕೊಂಕಣದಲ್ಲಿ) ಮತ್ಸ್ಯ ಮಾಂಸಾದಿ ಭೋಜನವು ನಿಷಿದ್ಧಕರವಲ್ಲ." ಇವರು ತಮ್ಮ ದೇಶದಿಂದ ಹೊರಗೆ ಹೋಗಿ ವಾಸಿಸಿದರೆ ಮತ್ಸ್ಯಾಹಾರ ಸ್ವೀಕರಿಸುವುದು ಸಮ್ಮತವೋ ಅಸಮ್ಮತವೋ ಶಾಸ್ತ್ರೀಯವೋ ಅಶಾಸ್ತ್ರೀಯವೋ ಎಂಬುದರಲ್ಲಿ ನಿರ್ಧಾರವಿಲ್ಲ.

7. ದ್ರಾವಿಡ ಬ್ರಾಹ್ಮಣರು ಮತ್ಸ್ಯಾಹಾರವನ್ನು ನಿಷೇಧಿಸಲು ಬಲವಾದ ಒಂದು ಚಾರಿತ್ರಿಕ ಕಾರಣ ದೊರಕುತ್ತದೆ. ಅದು ದಕ್ಷಿಣ ಹಿಂದೂದೇಶದಲ್ಲಿ ಜೈನ ಧರ್ಮದ ಪ್ರಭಾವ. ಅದರಲ್ಲೂ ತುಳುನಾಡು ಜೈನ ಧರ್ಮಕ್ಕೆ ಕೇಂದ್ರ ಸ್ಥಾನ ವಾಗಿದೆ. ಮೂಡಬಿದ್ರಿಯು ಜೈನ ಕಾಶಿಯಾಗಿ ಪರಿಗಣಿಸಲ್ಪಟ್ಟಿದೆ. ತುಳುವದ ಅನೇಕ ಅರಸರು ಜೈನಮತಾವಲಂಬಿಗಳಾಗಿದ್ದರು. ಹೀಗಿರುವಾಗ ನಮ್ಮ ತುಳು ನಾಡಿನ ಮೇಲೆ ಜೈನ ಧರ್ಮದ ಪ್ರಭಾವ ಬಿದ್ದಷ್ಟು ದಕ್ಷಿಣ ಹಿಂದೂದೇಶದ ಬೇರಾವ ಪ್ರದೇಶಕ್ಕೂ ಬೀಳಲಿಲ್ಲ. ಆದುದರಿಂದ ಮಾಂಸಾಹಾರ ಯಾವ ವಿಧದಲ್ಲೂ ತುಳು ಬ್ರಾಹ್ಮಣರಿಗೆ ವರ್ಜ್ಯವಾಯಿತು. ತಂತ್ರ, ಆಗಮ ಕಾರ್ಯಗಳಿಗೆ ವರ್ಜ್ಯವಾಯಿತು. ಇಲ್ಲಿಗೆ ಸಾರಸ್ವತ ಹಾಗೂ ಗೌಡ ಸಾರಸ್ವತರು ಸಾಧಾರಣ ಕ್ರಿ. ಶ. 13 ನೆಯ ಶತಮಾನದಿಂದ ವಲಸೆ ಬರಲು ಆರಂಭವಾಗಿ 16 ನೆಯ ಮತ್ತು 17 ನೆಯ

ಶತಮಾನಗಳಲ್ಲಿ ಸಂಖ್ಯಾಧಿಕ್ಯವನ್ನು ಹೊಂದಿದರು. ಅವರ ಆಹಾರದಲ್ಲಿ ಬದಲಾವಣೆ ಮಾಡದಿದ್ದುದರಿಂದ, ಅವರು ತುಳುವದ ಆ ಮೊದಲ ಬ್ರಾಹ್ಮಣರಲ್ಲಿ ಅಪಾಙ್ಕ್ತೇಯರಾಗಿ ಉಳಿಯಲು ಒಂದು ಕಾರಣವಾಯಿತೆಂದು ಹೇಳುವುದರಲ್ಲೂ ತಪ್ಪಿಲ್ಲವೆಂದು ನನಗನಿಸುತ್ತದೆ, ಅಪಾಙ್ಕ್ತೇಯರಾದುದರಿಂದ ಅಬ್ರಾಹ್ಮಣರಾಗಬೇಕಾಗಿಲ್ಲ. ಪತಿತರಾಗ ಬೇಕಾಗಿಲ್ಲ. ಈ ಪಾಂಙ್ಕ್ತೇಯ, ಅಪಾಙ್ಕ್ತೇಯ ಪಾಙ್ಕ್ತೇಯ, ಸಮಸ್ಯೆ ವೇದಕಾಲ ಅಪಾಙ್ಕ್ತೇಯದಿಂದಲೂ ಇದ್ದುದು ಕಂಡುಬರುತ್ತದೆ.

8. 'ಶ್ರೀಮನ್ಮಧ್ವಾಚಾರ್ಯರು ಶಿವಳ್ಳಿಯವರಲ್ಲವೆಂಬುದೂ ಒಂದು ವಾದವಿದೆ. ಅದಕ್ಕೆ ಬೇಕಾದ ಪುಷ್ಟೀಕರಣವೂ ದೊರೆಯುತ್ತದೆ. ಶ್ರೀ ಮಧ್ವಾಚಾರ್ಯರು ಮೊತ್ತ ಮೊದಲು ಸನ್ಯಾಸಾಶ್ರಮವನ್ನು ನಾಲ್ಕು ಮಂದಿಗೆ ಕೊಟ್ಟು ತಮ್ಮ ಶಿಷ್ಯರನ್ನಾಗಿ ಮಾಡಿದರು. ಅವರೇ ನರಹರಿ ತೀರ್ಥರು, ಪದ್ಮನಾಭ ತೀರ್ಥರು, ಅಕ್ಷೋಭ್ಯ ತೀರ್ಥರು ಮತ್ತು ಹೃಷೀಕೇಶ ತೀರ್ಥರೆಂಬುವರು. ಇವರು ಯಾರೂ ಶಿವಳ್ಳಿಯವರಲ್ಲ. ಮಧ್ವಾಚಾರ್ಯರು ಸ್ವತಃ ಶಿವಳ್ಳಿಯವರಾಗಿದ್ದರೆ ತಮ್ಮ ಜನಗಳನ್ನು ಬಿಟ್ಟು ಇತರರನ್ನು ಶಿಷ್ಯರನಾಗಿ ಮಾಡಿಕೊಳ್ಳುತ್ತಿರಲಿಲ್ಲವೆಂಬುದು ಸ್ಪಷ್ಟವಿದೆ' ಎಂಬೀ ರೀತಿಯ ವಾದವು ಹುರುಳಿಲ್ಲದುದಾಗಿದೆ. ಕಾರಣಗಳ ಸ್ಥೂಲ ಪರಿಚಯವನ್ನು ಮಾತ್ರ ಮಾಡಿಕೊಡಲು ಇಚ್ಛಿಸುತ್ತೇನೆ.

1. ಮಧ್ವಾಚಾರ್ಯರು ಶಿವಳ್ಳಿಯವರಲ್ಲವಾದರೆ ಮತ್ತೆಲ್ಲಿಯವರೆಂಬುದನ್ನು ಸ್ಪಷ್ಟ ಪಡಿಸಬೇಕು. ಶ್ರೀ ಮುದ್ದಣ್ಣ ಬಳ್ಳಾಳರು ಬರೆದ ದ್ವೈತಮತ ಖಂಡನೆ ಎಂಬ ಪುಸ್ತಕದಲ್ಲೂ ಇಂತಹ ಒಂದು ಉಲ್ಲೇಖ ಕಂಡು ಬರುತ್ತದೆ. ಆದರೆ ಅವರೂ ತಮ್ಮ ವಾದವನ್ನು ಮುಂದರಿಸುವುದಿಲ್ಲ. ಪ್ರತಿಪಾದಿಸಲಿಕ್ಕಾಗದ ತತ್ವವನ್ನು ಓದುಗರು ಮುಂದಿಡುವುದರಿಂದ ತುಂಬಾ ಹಾನಿಯಾಗಬಹುದು. (2) ಶಿವಳ್ಳಿ ಬ್ರಾಹ್ಮಣ ಎಂಬುದು ಪ್ರದೇಶದಿಂದ ಬಂದ ಹೆಸರೇ ಹೊರತು, ಧಾರ್ಮಿಕ ಹೆಸರಲ್ಲ. ಶಿವಳ್ಳಿಯಲ್ಲಿ ನೆಲೆ ನಿಂತವರು, ಆಚಾರ್ಯರ ಮೊದಲು ಸ್ಮಾರ್ತ ಬ್ರಾಹ್ಮಣರೋ, ಕಾಳಾಮುಖರೋ, ಶ್ರೀ ವೈಷ್ಣವರೋ ಇರಬೇಕು. ಅವರಲ್ಲಿ ಹೆಚ್ಚಿನವರು ಸ್ಮಾರ್ತರಾಗಿದ್ದರು. (3) ತುಳುನಾಡಿನಲ್ಲಿ ಶಿವಳ್ಳಿಯವರು ಒಂದು ಪಂಗಡ-ಇತರ ಪಂಗಡಗಳೂ ಅನೇಕ ಇದ್ದುವು. ಈಗಲೂ ಇವೆ. ಆದುದರಿಂದ ಆಚಾರ್ಯರನ್ನು ತುಳವ (ತುಳು) ಬ್ರಾಹ್ಮಣ ಎಂದು ಕರೆಯ ಬಹುದಷ್ಟೆ! (4) ನಾನು ಈ ಮೊದಲು ವಿವೇಚಿಸಿದಂತೆ ತುಳುನಾಡಿನ ಹೆಚ್ಚಿನ ಬ್ರಾಹ್ಮಣರು ಹೊರಗಣಿಂದ ಸಾಮಾನ್ಯ ಕ್ರಿ. ಶ. 11ನೆಯ ಶತಮಾನಕ್ಕೆ ಬಂದು ನೆಲೆಸಿದುದಾಗಿ ಕಂಡು ಬರುತ್ತದೆ. ಆದುದರಿಂದ ಆಚಾರ್ಯರ ಹಿರಿಯರು ಕದಂಬ ಮಂಡಲದಿಂದ ಬಂದರೆಂಬುದರಲ್ಲಿ ಎರಡು ಮಾತಿರಲಾರದು. ಆಚಾರ್ಯರ ಜನನ ಸಮಯದಲ್ಲಿ ಅವರ ಹಿರಿಯರು ತುಳುವರಾಗಿ ಪರಿವರ್ತಿಸಲ್ಪಟ್ಟು

ದ್ದರು. (5) ಮಧ್ವಮತವನ್ನು ಉದ್ದೀಪನೆಗೊಳಿಸಿದ ಶ್ರೀ ಸೋದೆ ವಾದಿರಾಜಸ್ವಾಮಿಯವರೇ ಶಿವಳ್ಳಿಯವರೋ ಎಂಬುದು ಸ್ಪಷ್ಟವಿಲ್ಲ. ಅವರನ್ನು ತುಳು ಬ್ರಾಹ್ಮಣರೆಂದು ಕರೆಯುವುದುತ್ತಮ. ಅವರು ಕುಂಭಾಶಿಯವರು. (ಹೂವಿನ ಕೆರೆ)6) ಕೊನೆಯದಾಗಿ "ಮಯೂರವರ್ಮನು ಅಹಿಚ್ಛತ್ರದಿಂದ ಕರೆಸಿದ ಬ್ರಾಹ್ಮಣರಿಗೆ ಅವರುಇಲ್ಲಿ ಇರುವಂತೆ ಮಾಡಲು ನಾಡವ, ಮೊಗವೀರ, ಬಿಲ್ಲವ ಮೊದಲಾದ ಜಾತಿಯ ಶೂದ್ರಸ್ತ್ರೀಯರನ್ನು ಕೊಟ್ಟು ಮದುವೆ ಮಾಡಿ ಆ ಶೂದ್ರ ಸ್ತ್ರೀ ಗರ್ಭದಲ್ಲಿ ಹುಟ್ಟಿದವರನ್ನು ಬ್ರಾಹ್ಮಣರೆಂದೇ ಗಣಿಸತಕ್ಕದ್ದೆಂದು ವಿದಾಯ ಮಾಡಿದನೆಂತಲೂ ಆಖ್ಯಾಯಿತೆ ಇದೆ" ಎಂದು ಈ ವಿಮರ್ಶಕರು ತಿಳಿಸಿ ಈ ವಿಷಯವೆಲ್ಲವೂ ಸಹ್ಯಾದ್ರಿಖಂಡದಲ್ಲಿ ಗ್ರಾಮಪದ್ಧತಿಯಲ್ಲಿ, ವಿವರವಾಗಿ ವರ್ಣಿತವಾಗಿವೆ ಎನ್ನುತ್ತಾರೆ ಈ ರೀತಿಯ ಅಂತರ್ವಿವಾಹ ಆಗಿರ ಬೇಕೆಂಬುದನ್ನು ಸಹ್ಯಾದ್ರಿಖಂಡದಿಂದ ಅಪರೋಕ್ಷವಾಗಿ ತಿಳಿಯಬಹುದೇ ವಿನಾ, ನೇರವಾಗಿ ಮೇಲೆ ವಿಮರ್ಶಕರು ಹೇಳಿದಂತೆ ಉಲ್ಲೇಖ ಈ ಗ್ರಂಥದಲ್ಲಿ ಕಂಡು ಬರುವುದಿಲ್ಲ. ಮಾತ್ರವಲ್ಲದೆ ಈ ವಿವಾಹ ಪದ್ಧತಿ ಮತ್ತು ಅದರ ಪರಿಣಾಮ ಬ್ರಾಹ್ಮಣ್ಯವನ್ನು ಪಡೆಯುವುದು ಧರ್ಮಶಾಸ್ತ್ರಕ್ಕೆ ಸಮ್ಮತವೇ ಆಗಿದೆ, ಎಂಬುದನ್ನು ಈ ಮೊದಲೇ ವಿಷದೀಕರಿಸಿದ್ದು ಮಾತ್ರವಲ್ಲದೆ, ಅದು ಬ್ರಾಹ್ಮಣ ವರ್ಗಕ್ಕೆ ಹೇಯವಾದುದೆಂಬುದಾಗಿ ಎಂದೆಂದೂ ತಿಳಿಯಲಾಗದು ಎಂಬ ಅಭಿಪ್ರಾಯವನ್ನೂ ತಿಳಿಸಿದ್ದೇನೆ. ದಕ್ಷಿಣ ಹಿಂದೂದೇಶದ ದ್ರಾವಿಡಾದಿ ಪಂಚ ಬ್ರಾಹ್ಮಣರ ಚರಿತ್ರೆಯನ್ನು ತಿಳಿದರೆ ದ್ರಾವಿಡ ಜನಾಂಗಗಳಿಂದ, ಹಿಂದೂ ಧರ್ಮ ಗ್ರಂಥಗಳಲ್ಲಿ ನಿರ್ದೇಶಿಸಲ್ಪಟ್ಟ ಕ್ರಮಗಳಿಗನುಸಾರವಾಗಿ ಅನುಲೋಮ ವಿವಾಹದಿಂದ ಮತಾಂತರಗೊಂಡ ದೃಷ್ಟಾಂತಗಳು ಅಗಣಿತವಿವೆ. ಈ ಕಾರಣದಿಂದ ದ್ರಾವಿಡಾದಿ ಬ್ರಾಹ್ಮಣರು ಗೌಡಾದಿ ಬ್ರಾಹ್ಮಣರಿಗಿಂತ ಕೀಳು ಎಂಬ ತೀರ್ಮಾನ ಮಾಡ್ರವುದು ಸರಿಯಲ್ಲ.ಅದು ನಮ್ಮ ಧರ್ಮಶಾಸ್ತ್ರವನ್ನು ತಿಳಿಯದುದರ ಪರಿಣಾಮ ಮಾತ್ರವಲ್ಲದೆ. ಚಾರಿತ್ರಿಕ ಹಿನ್ನೆಲೆಯನ್ನಾಧರಿಸಿ ಸಾಮಾಜಿಕ ಬೆಳವಣಿಗೆಯ ಕ್ರಮವನ್ನು ತಿಳಿದುಕೊಳ್ಳಲಾರದ ಅವಸ್ಥೆಯನ್ನು ಸೂಚಿಸುತ್ತದೆ ಈಗ ಇಂತಹ ಅನುಲೋಮ ವಿವಾಹಗಳು ನಡೆಯದಿರಲು ಮತ್ತು ಅದನ್ನು ಮೆಚ್ಚದಿರಲು ಕಾರಣವೇನೆಂದರೆ ಅದರ ಪರಿಣಾಮವಾಗಿ ಬರುವ ಸಾಮಾಜಿಕ, ಆರ್ಥಿಕ ಮತ್ತು ಪರಂಪರೆಯತೊಡಕುಗಳು.

'ಸ್ವೇ ಸ್ವೇ ದೇಶೇ ಪ್ರಯುಜ್ಯಂತೇ। ನಾನ್ಯದೇಶೇ ವಿಶೇಷತಃ ।
ಏಶು ತೀರ್ಥೇಶು ಏ ದೇವಾ ಏಶು ತೀರ್ಥೇಶು ಏ ದ್ವಿಜಾ।
ಪೂಜನೀಯಾಃ ಏಶೇಷೇಣಾ। ನಾವಮಾನ್ಯಹ ಕದಾಚನಾಃ।

'ತಮ್ಮ ದೇಶಗಳಲ್ಲಿ ಬ್ರಾಹ್ಮಣರು ಪೂಜಾರ್ಹರಾಗುತ್ತಾರೆ ಅನ್ಯದೇಶಗಳಲ್ಲಿ

ವಿಶೇಷವಾಗಿ ಪೂಜಾರ್ಹರಲ್ಲ. ಆಯಾ ತೀರ್ಥಗಳಲ್ಲಿ ಆಯಾ ದೇವತೆಗಳೂ ಬ್ರಾಹ್ಮಣರೂ ಪೂಜನೀಯರಾಗುತ್ತಾರೆ. ಅವರನ್ನಲ್ಲಿ ಅವಮಾನಿಸುವುದು ಉಚಿತವಲ್ಲ' (ಬ್ರಾಹ್ಮಣೋತ್ಪತ್ತಿ ಮಾರ್ತಂಡ)

ನನಗೆ ಈ ಕೆಳಗಿನ ತೀರ್ಮಾನವನ್ನು ಮಾಡದೆ ಗತ್ಯಂತರವಿಲ್ಲ. ಗೌಡ ಸಾರಸ್ವತರು ಆಹಾರ, ಆಚಾರ, ಆಡುವ ಮಾತು (ಭಾಷೆ) ಇವೆಗಳಲ್ಲಿ ತಮ್ಮ ಪರಂಪರೆ ಮತ್ತು ದೇಶಭೇದದಿಂದ ನಮ್ಮ ತುಳುನಾಡಿನ ಬ್ರಾಹ್ಮಣರಿಗಿಂತ ವಿಭಿನ್ನರಾಗಿ ಕಂಡು ಬರುತ್ತಾರೆ. ಈ ಮಾತ್ರದಿಂದ ಅವರು ಅಬ್ರಾಹ್ಮಣರೆಂದಾಗಲೀ, ಕುಲಹೀನರೆಂದಾಗಲೀ ತೀರ್ಮಾನಿಸಬಾರದು. ಈ ರೀತಿಯ ವೈವಿಧ್ಯ ನಮ್ಮ ದೇಶದ ಬೇರೆ ಬೇರೆ ಬ್ರಾಹ್ಮಣ ಪಂಗಡಗಳಲ್ಲಿ ಕಾಲ, ದೇಶ, ಆಚಾರ ಭೇದಕ್ಕನುಸಾರವಾಗಿ ಕಂಡುಬರುತ್ತದೆ. ಈ ಗೌಡ ಸಾರಸ್ವತರು ಋಗ್ವೇದ, ಸ್ಮೃತಿ, ಪುರಾಣಗಳಲ್ಲಿ ಉಲ್ಲೇಖಿತರಾಗಿರುವುದು ಮಹತ್ಪೂರ್ಣವಾಗಿದೆ. ಅವರಲ್ಲಿಯಾದರೂ ಕಾಲಚಕ್ರದ ಪರಿಣಾಮದಿಂದಾಗಿ ಜಾತಿ ಸಂಕರವಾಗಲಿಲ್ಲವೆಂದು ಖಂಡಿತವಾಗಿ ಹೇಳುವುದು ಕಷ್ಟ.

5. ಸಾರಸ್ವತರು: ಇವರು ಕ್ರಿ. ಶ. 1900ರವರೆಗೆ ನಮ್ಮ ತುಳುವದಲ್ಲಿ ಅಧಿಕ ಸಂಖ್ಯೆಯಲ್ಲಿದ್ದುದು ಕಂಡು ಬರುತ್ತದೆ. ಅವರು ಸರಸ್ವತೀ ನದೀತೀರದಲ್ಲಿ ದಕ್ಷಿಣಾಭಿಮುಖವಾಗಿ ಐತಂದು ಗೋವಾದ ಕುಶಸ್ಥಳ ಎಂಬಲ್ಲಿ ನೆಲೆಸಿದ್ದರು. ಅಲ್ಲಿಂದ ಅವರು ತುಳು ನಾಡಿನಲ್ಲಿ ಹರಡಿಕೊಂಡರು ಇವರು ಪ್ರಧಾನವಾಗಿ ಸ್ಮಾರ್ತರಾಗಿ ವಿದ್ಯಾವಂತರಾಗಿರುವರು. ಇವರಲ್ಲಿ ಭಾಗವತ ಮತ್ತು ವೈಷ್ಣವ ಸಂಪ್ರದಾಯದವರೂ ಇದ್ದಾರೆ. ಈಗ ಇವರ ಸಂಖ್ಯೆ ಬಹಳ ಕಡಿಮೆಯಾಗಿದೆ.

# ಕುಲ ನಾಮಗಳು ಹೇಳುವ ತುಳುನಾಡಿನ ಕತೆ

ತುಳುನಾಡಿನ ಸಾಮಾಜಿಕ ಚರಿತ್ರೆಯ ಸರಿಯಾದ ಜ್ಞಾನವನ್ನು ಪಡೆಯಬೇಕಾದರೆ ಇಲ್ಲಿಯ ಸಮಾಜದಲ್ಲಿ ಯಾವ ಯಾವ ಜಾತಿ ಹಾಗೂ ವರ್ಗಗಳು ಸೇರಿಕೊಂಡಿವೆ, ಅವು ಹೇಗೆ ಅಸ್ತಿತ್ವಕ್ಕೆ ಬಂದುವು ಎಂಬುದನ್ನು ತಿಳಿದುಕೊಳ್ಳುವುದಗತ್ಯ.

ಇಷ್ಟರ ತನಕ ನಾನು ತುಳುನಾಡಿನ ಸಮಾಜದ (ಅದರಲ್ಲೂ ದಕ್ಷಿಣ ಕನ್ನಡ ಜಿಲ್ಲೆಯ) ಪ್ರಾಮುಖ್ಯವಾದ ನಿರ್ಮಾಪಕರು ಯಾರು, ಅವರ ಮೂಲಯಾವುದು ಎಂಬುದರ ಕಡೆಗೆ ನಮಗಿರಬೇಕಾದ ಲಕ್ಷ್ಯವನ್ನು ಮಾತ್ರ ಸೆಳೆಯಲು ಪ್ರಯತ್ನಿಸಿದ್ದೆ. ಅವು ಯಾವುವೆಂಬುದನ್ನು ಪುನಃ ಸ್ಮರಿಸಿಕೊಳ್ಳುವುದರಿಂದ ನಷ್ಟವಾಗಲಾರದು. ಬಿಲ್ಲವ, ಮೊಗೇರ, ತುರುವ(ತುಳುವ) ಕುಡುವ, ನಾಡವ, ಆಳುವ, ಅರಸ, ಆಳುವರಸ, ಸ್ಥಾನಿಕ, ಇವೆಲ್ಲ ಹೆಸರುಗಳು ಉದ್ಯೋಗವನ್ನು ಹೊಂದಿಕೊಂಡು ಬಂದ ಹೆಸರುಗಳಾದರೂ, ಆ ಉದ್ಯೋಗಗಳಲ್ಲಿ ಪ್ರಾಚೀನತೆ ಇದ್ದುದರಿಂದಲೂ, ಅವುಗಳಲ್ಲಿ ಪ್ರಾಧಾನ್ಯ ಹಾಗೂ ಅಧಿಕಾರ ಕಂಡು ಬಂದುದರಿಂದಲೂ, ಅವು ಕಾಲಕ್ರಮೇಣ ಜಾತಿಗಳಾಗಿಯೇ ಮಾರ್ಪಾಡಾದುವು ಎಂಬುದಕ್ಕೆ ನಿದರ್ಶನಗಳು ಅನೇಕವಿವೆ. ಮೂಲದಲ್ಲಿ ಪ್ರತಿಯೊಂದು ಜಾತಿಯೂ ಔದ್ಯೋಗಿಕವಾಗಿ ಉಂಟಾಯಿತೆಂಬುದರಲ್ಲಿ ಸಂದೇಹವಿರಲಾರದು. ದ್ರಾವಿಡ ಶಾಖೆಗೆ ಸೇರಿದ ಈ ಬಿಲ್ಲವ, ಮೊಗೇರ, ತುಳುವ, ಕುಡುವ, ನಾಡವರಲ್ಲಿ ಪರಸ್ಪರ ಜಾತಿ ಸಂಕೀರ್ಣವಾಗಿ ಬೇರೆ ಬೇರೆ ಒಳವರ್ಗಯಾ ಜಾತಿಗಳು ಉತ್ಪತ್ತಿಯಾದುವುವೆಂಬುದರಲ್ಲೂ ಸಂಶಯವಿಲ್ಲ. ಮಾತ್ರವಲ್ಲದೆ, ಈ ನಾಡಿನ ಹೊರಗಣಿಂದ ಐತಂದ ಅನೇಕ ಪಂಗಡಗಳು ನಮ್ಮ ನಾಡಿನ ಮೂಲಿಗರೊಡನೆ ಬೆರಕೆಯಾದ ದೃಷ್ಟಾಂತಗಳೂ ಕಂಡುಬರುತ್ತವೆ. ಈ ಜಾತಿ ಸಂಕೀರ್ಣತೆಯನ್ನು ತಿಳಿಯುವ ಒಂದು ಉಪಾಯವೆಂದರೆ ಈ ಪ್ರಾಮುಖ್ಯ ಜಾತಿಗಳಲ್ಲೆಲ್ಲಾ ಸಾಮಾನ್ಯವಾಗಿ ಕಂಡು ಬರುವ ಕುಲಗಳ ಹೆಸರುಗಳು. ಈ ಕುಲಗಳಿಗೆ ನಾಡಿನ ಭಾಷೆಯಲ್ಲಿ 'ಬರಿ' ಯಾ 'ಬಳಿ' ಎನ್ನುತ್ತಾರೆ. ಈ ಎರಡೂ ಶಬ್ದಗಳು ತುಳು ಭಾಷೆಯವುಗಳೆಂಬುದಾಗಿ ಭ್ರಮಿಸಿಕೊಳ್ಳಬಾರದು. ಅವು ಕನ್ನಡ ಶಬ್ದಗಳೇ ಆಗಿವೆ. ಬಳಿ ಎಂದರೆ ವಂಶ; ಅಂತೆಯೇ ಬರಿ ಎಂಬ ಪದವು ಬದಿ, ಬದಿ, ಪಕ್ಷ, ಮಗ್ಗುಲು ಎಂಬರ್ಥಗಳನ್ನಿತ್ತು ಯಾವ ವಂಶಕ್ಕೆ ಸೇರಿದ್ದು ಎಂದೇ ಸೂಚಿತಾರ್ಥವನ್ನೀಯುತ್ತದೆ. (Kittal Dictionary Pages 1082 & 1098)

ಮದ್ರಾಸು ಜಿಲ್ಲಾ ಮೇನ್ಯುವೆಲ್ಲುಗಳು— ದಕ್ಷಿಣ ಕನ್ನಡ(Madras District Manuals--South Kanara) ಈ ಪುಸ್ತಕದಲ್ಲಿ ಪುಟ 16 ರಿಂದ

25 ರವರೆಗೆ ನಮ್ಮ ನಾಡಿನ ಜಾತಿ ಮತ್ತು ವಂಶಗಳ (Cates, Races and Tribes) ವರ್ಗೀಕರಣವನ್ನು ಮಾಡಿದ ಕ್ರಮವನ್ನೂ, ಅದರ ವಿಮರ್ಶೆಯನ್ನೂ ಮಾಡುವುದಗತ್ಯ.

**1. ಹಿಂದಕ್ಕೆ ಸೈನಿಕ ದಳದವರೂ ಪ್ರಬಲರೂ ಆಗಿದ್ದು ಈಗ ವ್ಯವಸಾಯ ಗಾರರಾಗಿರುವವರು** (Agriculturists Formerly Military and Dominant)

ಅಗಮುಡ್ಯೆಯನ್, ಅರೆ (ಅರಿಯರು), ಎರಡಿ, ಜಂಗಾರ, ಕೊಡಗನ್ (ಕೂರ್ಗ್), ಕ್ಷತ್ರಿಯ, ಲಂಕೆಗಾರ, ಮರಾಟೆ, ನಾಯರ್, ಪೊಂದಲ, ರಜಪೂತ, ರಾಜು (ರಾಝು), ಸಾಮಂತ, ಸೇರ್ವೆಗಾರ, ವೆಳವು, ವೀಳ್ಯಕಾರ.

**2· ವ್ಯವಸಾಯಗಾರರು** (Agriculturists)

ಬಾಲೋಲಿಕಾರ, ಬಂಟ, ದಖ್ನಿ, ಗತ್ತಿ, ಗಂಡ, ಹಲದವ, ಹಾಲುವಕ್ಕಿ, ಹಣಬ, ಹರೇಕಾರ, ಜೈನ, ಕಾಮತಿ, ಕಾಪು, ಮಲವ, ಮೂಡ ಮನೆ, ನಾಡವ, ನಗರಾಲು, ಪುಲುವನ್, ರಡ್ಡೇರು, ರಾಜಾಪುರಿ, ಶೂದ್ರ, ತೆಲುಗು, ವಕ್ಕಲಿಗ, ವೆಲ್ಲಾಲ,

**3. ಗೋಪಾಲಕರೂ ದನ ಮೇಯಿಸುವವರೂ** (Cattle Breeders and Grazers)

ಎರುವನ್, ಗೌಳ, ಗೋಪಾಲ, ಕೊಂಡಿ, ಸಾಬಲಿ, ವಲ್ಲಭ, ಎಮ್ಮೆ ಮರಿಯವ

**4. ಪುರೋಹಿತವರ್ಗ** (Priests) (ಬ್ರಾಹ್ಮಣರೂ, ಇತರರೂ) ಆಚಾರ್ಯ, ಆಂಧ್ರ, ಆರ್ವತ್ತೊಕ್ಲು, ಅಷ್ಟ ಸಹಸ್ರಂ, ಬಡಗನಾಡು, ಬಾರದೇಶಿಕಾರ, ಬ್ರಹ್ಮಚರಣಂ, ಬ್ರಹ್ಮನ್, ಚಿತ್ಪಾವನ, ದೇಶಸ್ಥ, ದ್ರಾವಿಡ, ಗೌಡ, ಗುಜರಾತಿ, ಹವಿಕ, ಇಂದ್ರ, ಕಮ್ಮೆ, ಕನೋಜ, ಕಂದಾವರ, ಕರಾಡಿ, ಕರ್ನಾಟಕ, ಕೊಂಕಣಸ್ಥ, ಕೋಟ, ನಾಗಪುರ, ನಂಬಿ, ನಂಬದಿ, ಪಾಡಿಯ, ಪಂಚಗ್ರಾಮ, ಪೂಜಾರಿ, ಸಕಲಪುರ, ಸಾರಸ್ವತ, ಶಿವಳ್ಳಿ, ಸ್ಮಾರ್ತ, ಶ್ರೀವೈಷ್ಣವ, ತೌಲವ, ಉತ್ತರಾದಿ, ವಡಮ, ವೈದಿಕ, ವತ್ತಿಮನ್, ಬಂಗಮ್, ಕಾಜಿ, ಪಿಷಾರನ್.

**5. ಹೊಲದಲ್ಲಿ ಕೆಲಸ ಮಾಡುವವರು** (Field Labours)

ಆದಿಯನ್, ಬಂದಿಗುಲಾಮ, ಬಟ್ಟದ, ಭೈರ, ಚಲವಾದಿ, ಚರವ, ಚೇರುಮನ್, ಗರಸ, ಗೊಡ್ಡೇರ, ಹೊಸಳ, ಹೊಲೆಯ, ಕೂಸ, ಮಾಲ, ಮೇರ, ಮ್ಯೊಲಿ, ಪಳ್ಳೀ (ಪಲ್ಲಿ, ವಣ್ಣಿಯನ್,) ಪಣಿಯನ್, ಪಂಜಿ, ಪರೈಯನ್, ಪೊಳ್ಳ, ರಾಣ್ಯದವ, ತಿಗಳ, ವೆಟ್ಟುವನ್.

6 ಕಾಡು ಮತ್ತು ಗಿರಿಜನರು (Forest and Hill Tribes)
ಬಿಲ್ಲರು, ಕಾಡುಕೊಂಕಣಿ, ಕೊರಗ,ಕುಡಿಯ, ಕುಡುಬಿ, ಮವಿಲನ್, ನೊಡಿಕನ್, ಸವರ.

7. ಭಕ್ತ ಯೂ ಭಜಕ ವರ್ಗ (Devotees)
ಅತೀತ, ಭೈರಾಗಿ, ಫಕೀರ, ಗೋಸಾಯಿ, ಹರಿದಾಸ, ಸನ್ಯಾಸಿ.

8. ದೇವಸ್ಥಾನದ ಸೇವಕಟು (Temlpe Servants)
ಅಂಬಲ ವಾಸಿ, ಬರಿಯ, ದೇವಡಿಗ, ದೇವಾಳಿ,ಮಾಲಿ, ಪದಾರ್ಥಿ,ಪಟ್ನಾಲಿ, ಪೂದುವಾಳ, ಸಾತಾನಿ, ಸ್ಥಾನಿಕ, ವಾರಿಯನ್.

9. ಜೋಯಿಸರೂ,ವೈದ್ಯರೂ (Astrologers and Physicians)
ಕಣಿಸಾನ್ ಮತ್ತು ವೈದ್ಯ.

10. ಕೀರ್ತನೆಕಾರರೂ, ಲಾವಣಿ ಪದಕಾರರೂ (Musicians and Ballad Reciters)
ಭಟ್ರಾಜು, ಮೇಳಕ್ಕರಸ್, ಪುರಸ, ಸಪ್ಪಳಿಗ, ವಾದ್ಯಕಾರ, ವಾಲಗದವ.

11. ಕುಣಿಕೆಯುವರೂ,ಹಾಡುಗಾರರೂ (Dancersand Singers)
ದಕ್ಕೇರ, ಕಲಾವಂತ, ಪಾರ್ವತಿಕಾರ, ಪಟ್ರ, ಮೇಳ, ಸನಿ.

12. ವ್ಯಾಪಾರಸ್ಥರು (Traders)
ಬಜಿಲ, ಬಣಜಿಗ, ಬನಿಯ, ಬೋರ, ಚೆಟ್ಟಿ, ಗೋಪ್ತಿ, ಗುಜ್ಜರ, ಕವರಯಿ, ಭೋಜ, ಕೋಮಟಿ, ಲಬ್ಬಾಯಿ, ಮಣಿ ಸರ್ಕಾರ, ಮಾಪಿಳ್ಳ, ಮಿಾಮಾನ್,ನವಾಯತ್, ನಿಮಿಸಾಕ್ರ, ವೈಶ್ಯ, ವಾಣಿ.

13. ಹೊರುವವರು (Carriess) ಲೊಂಬಾಡಿ.

14. ಅಕ್ಕಸಾಲಿಗರು (Goldsmiths)
ಅಕ್ಕಸಾಲೆ, ಪೊನ್ನ ಸೆಟ್ಟಿ, ಸೋನಾರ್, ತಟ್ಟನ್.

15. ಕಾಮಿಾಗರು (Artisans)
ಕಮ್ಮಾರ, ಶಿಲ್ಪಿ, ತಗರದವ.

16. ಕ್ಷೌರಿಕರು (Barbars)
ಹಜಾಮ, ಕಾವುತೀಯನ್, ಕೆಲಸಿ (ಕ್ಷೌರಿಕ), ಮಂಗಲ, ನವುದೀಯ,ವೇಳಕ್ಕತಲವನ್.

17 ಬಡಗಿಯರೂ, ಮೇಸ್ತ್ರಿಗಳೂ, ಗಾಡದ ಕೆಲಸ ಮಾಡುವವರೂ (Carpenters, Masons and Turners)

ಅಯಿರಿ, ಬಡಗಿ, ಚರೋಡಿ, ಚೇಷ್ಟಿಗಾರ, ಗುಡಿಗಾರ, ಕಲ್ಲುಕುಟ್ಟಿ, ಮೊದಯನ್, ಮೇಸ್ತ್ರ, ವಡ್ಡ್ವರಿ, ತಾಶ್ಚನ್, ಉರಳಿ.

18 ದರ್ಜಿಗಳು (Tailors)

ಚಿಂಪಿಗ, ದರ್ಜಿ, ನಾಮದೇವ, ಶಿಪಗಾರ್.

19 ಹುರಿಯುವವರೂ, ದೇವಡಿಗಾರರೂ (Grain-Parchers and Confectioners) : ಕೂಡ್ಲುಕಾರ, ಪೆನ್ನಗಾರ.

20 ನೇಯ್ಗಾರರೂ, ಪಂಚಾಂಗಕರ್ತರೂ, ವರ್ಣಗಾರರೂ (Weavers, Calenderers and Dyers)

ಅಟಕರಿ, ಬಣ್ಣಗಾರ, ಬಿಳಿಮಗ್ಗ, ದೇವಾಂಗ, ಜಾಡ, ನಗಲಿಕ, ಪಟ್ಟಿಗಾರ, ಸಾಲೆ, ಸೇಣಿಯು.

21 ಮಡಿವಾಳ (Washermen)

ಅಗಸ, ಡೋಬಿ, ಮಡಿವಾಳ, ನೆಕ್ಕಾರ, ಪರಿಯಾತ, ವಣ್ಣಾನ್ , ವೇಲುತ್ತಿದನ್.

22 ಕುರುಬರೂ, ಕಂಬಳಿ ತಯ್ಯಾರಿಸುವವರೂ (Shepherds and wool-weavess)

ಗೊಲ್ಲನ್, ಹೆಗ್ಗಡೆ, ಇದೈಯನ್‌ಯಾ ಯಾದವನ್, ಕುರುಂಬನ್.

23 ಎಣ್ಣೆ ತೆಗೆಯುವವರು (Oilpressers)

ಚಾಲ್ಯ, ಗಾಣಿಗ, ತೇಲಿ.

24 ಮಡಕೆ ತಯಾರಿಸುವವರು (Potters): ಕುಂಬಾರ (ಕುವ್ಮಾರ), ಕೂಸವನ್.

25 ಬಳೆಗಾರರು, ಗಾಜುಗಾರರು (Bangle-Makers and Glass workers: ವಳೈಯಾಲ್ಕಾರನ್.

26 ಉಪ್ಪುತಯಾರಿಸುವವರು (Salt—workers) : ಉಪ್ಪಾರ,

27 ಬೆಸ್ತರೂ, ದೋಣಿ ನಡೆಸುವವರೂ, ಪಾಲಕಿ ಹೊರುವವರೂ. ಅಡಿಗೆಯವರೂ (Fishermen, Boatmen, Palaki wearers cooks etc)

ಅಂಬಿಗ, ಬೆಸ್ತ, ಭಾದೆಲ, ಬೋಯಿ, ಗಬಿತ, ಹರಿಕಾಂತ್ರ, ಕೌಡೆಗಾರ, ಕಾರ್ವಿ, ಮರಕಾಲ, ಮೊಗೇರ, ಮೇಯನ್, ಮುಕ್ಕುವನ್, ಪಳ್ಳಿಚ್ಚನ್, ವಲ್ಲುವನ್.

28 **ಡೊಂಬರು** (Tumblers and Acrobats)

ದೊಮ್ಮಾರರು, ಬೆಟ್ಟ, ಪಯಿಲ್ವಾನ್.

29 **ಗುಡಿಗಾರರೂ, ಹಾವಾಡಿಗರೂ, ಪ್ರಾಣಿಗಳ ಪ್ರದರ್ಶಕರು** (Jugglers, Snake Charmers &Animal Exhibitors)

ಹವಾತ್ರಾತ.

30 **ಮಾಟಗಾರರು** (Sorcerers) **ವೇಲನ್.**

31 **ಹಿಂದೂದೇಶದವರಲ್ಲದ ಆಸ್ಯಾಖಂಡದ ವಂಶೀಯರು** (Non-Indian Asiatic Races)

ಅರಬರು, ಬೆಲುಚಿಯರು, ಚೀನೀಯರು, ಮೊಗಲರು, ಪಾರ್ಸಿ, ಪಠಾಣರು, ಸೈಯದರು, ಶೈಕರು.

32 **ಆಸ್ಯಾಖಂಡಕ್ಕೆ ಸೇರದ ವಂಶೀಯರು**(Non-Asiatic Races)
ಯುರೋಪಿಯಾನರು ಮತ್ತು ಮೊರೀತಿಯನರು.

33 ಯುರೇಶಿಯನರು (Eurasians)

34 **ಕೌಟುಂಬಿಕನಾಮಗಳು** (Titular Names)

ಮುದಲಿ, ನಾಯಕ, ನಾಯುಡು, ಪಿಡ್ಯಾ, ಸಾಹೇಬ.

35 **ಪ್ರಾದೇಶಿಕ, ಭಾಷಾವಾರು, ಜಾತಿಯ ಹೆಸರುಗಳು** Territorial, Linguistic and Sectarion Names

ಹನಫಿ, ಕೆನರೀಸ್ (ಕನ್ನಡ,) ಕನೌಜ, ಕೊಂಕಣಿ, ಲಿಂಗಾಯತ್, ಮುಸಲ್ಮಾನ್, ಪುದು ಇಸ್ಲಾಂ, ಶಾಫಿ, ಸ್ವಾಯಿ, ಸುನ್ನಿ, ಬ್ರಹ್ಮೋ, ಹಿಂದೂಸ್ಥಾನ, ಜೆಂಟೂ, ಕಚ್‌ಹಿ, ಮಲಯಾಳಿ, ತಮಿಲ, ತೆಲಂಗಿ, ವೈಷ್ಣವ.

36. **ವಿಭಾಗಿಸಲ್ಪಡದ ಜಾತಿಗಳು** (Unclassified Castes)

ಅಂಬಲಿ, ಬಾಪಡ, ಬಟ್ಟಲೆಕಾರ, ಬೆಲಂ, ಭಾಯಂ, ಬ್ಯಾರಿ, ಚಂಚುನಿ, ದಾಲ್ಜಿ, ದವಳ, ದ್ವಿಜ, ಹನಿಬಿ, ಹರಿಯುವ, ಹೊಟ್ಟೆ, ಜ್ಯಾತಿ, ಭ್ರಷ್ಟ, ಜಿಮ್ಮಿ, ಕಲ್ಲು, ಖಂಡಿವರ, ಕ್ಷೇತ್ರವಾಸಿ, ಮಾದಿರ, ಮಲಕಬಾವುರ, ಮಲ್ಲದಾರ, ಮಣಿಗಾರ, ಮಣಿಲವ, ಮೋಕ್ಷಮಾತ, ಮೊಲ್ಲೆನಿ, ಮೂಲ್ಯ, ಮುಸಕರು, ಮುಸುಕಿನವ, ನಾರ್ಬಲಿ, ನಿರೆತು, ನಿರ್ಪಟ್ಟಂ, ನಿರುಚನ್, ಪಲಯುಮಾರ, ಪಾಂಡ್ರವ, ಪಟ್ವೈತ, ಸಹಿರ, ಸಾಂತಾರ, ಸಿಲಬಲಿಕೆಯವರು, ಸಿಲೇರು, ಲೇಪಟನ್, ತಿರುಲರವ, ತಿರುಮನೆ, ವಾಡಾರಿ, ವಡೆಯ, ಯೆನ್ನಮಾಜಿ.

ದಕ್ಷಿಣಕನ್ನಡ ಜಿಲ್ಲೆಯ ಗಜೆಟಿಯರಿನಲ್ಲಿ ಕಂಡುಬರುವ (1901) ಜಾತಿ, ಪಂಗಡ ಮತ್ತು ವಂಶಗಳು (Castes, Tribes and Races) ಎಂಬ ವಿಭಾಗದಲ್ಲಿ ಈ ಕೆಳಗಿನ ವರ್ಗೀಕರಣ ಕಂಡುಬರುತ್ತದೆ.

ಹಿಂದುಗಳ ಮತ್ತು ಸರ್ವಜೀವತ್ವ ಜಾತಿಗಳು

(Hindu and Animistic Castes)

(a) ತಮಿಳು (Tamil) ಚೆಟ್ಟಿ, ಬ್ರಹ್ಮನ್, ಶೂದ್ರ, ಪಲ್ಲ, ಕುರವನ್, ಅಂಬಟ್ಟನ್, ಪರೈಯನ್, ಇತರರು (2056 ಸಂಖ್ಯೆ)

(b) ತೆಲುಗು Telugu) ದೇವಾಂಗ, ಸಾಲೆ, ಜೋಗಿ, ದಾಸಾರಿ, ಗೊಲ್ಲ, ಬಂಜ, ಮಾದಿಗ, ಉಪ್ಪಾರ, ತೆಲುಗು ವೈಶ್ಯ, ಕಾಪು, ಬೋಗಂ, ದೊಮ್ಮರ, ಇತರರು (16,406 ಸಂಖ್ಯೆ)

(c) ಮಲೆಯಾಳ (Malayalam):—ತೀಯತ್, ನಾಯರ್, ಕೊಲಯನ್, ಚೆರುಮಾನ್, ಮುಕ್ಕುವನ್, ಕಮ್ಮಲನ್, ಚಕ್ಕನ್, ಚರಿಯನ್, ಬ್ರಹ್ಮನ್, ಕಣಿಸಾನ್, ಅಂಬಲವಾಸಿ, ಪರವನ್, ವೇಲುತ್ತೆಡೆನ್, ಮರಯನ್, ಮುವ್ವಾರಿ, ಮುನ್ನನ್, ಅಂಡುರನ್, ಕವಿಲೇಯನ್ ಇತರರು (82, 467 ಸಂಖ್ಯೆ)

(d) ಕನ್ನಡದವರು (Kanarese):—ಬಿಲ್ಲವ, ಬಂಟ, ಹೊಲೆಯ, ಗೌಡ, ಬ್ರಹ್ಮನ, ಮೊಗೇರ, ಪಾಂಚಾಲರು, ಕುಂಬಾರ, ದೇವಡಿಗ, ಹಳೆಪೈಕ, ಗಾಣಿಗ, ಅಗಸ, ಕೋಟೆಗಾರ, ಕೆಲಸಿ, ಕೋಸಗ, ಕುಡಿಯ, ಮಲವ, ವ್ಯೊಲಿ, ಸಪ್ಪಳಿಗ, ಹೆಗ್ಗಡೆ, ಸಮಗಾರ, ವಕ್ಕಲಿಗ, ಗಟ್ಟಿ, ಕೊಟ್ಟಾರಿ, ಸ್ಥಾನಿಕ, ಪತ್ರನೇಲ, ನಲ್ಕೆಯವ, ಚರೋಡಿ, ಬಣಜಿಗ, ಭಂಡಾರಿ, ಪೊಂಬದ, ಬಲ್ಲಾಳ, ಬೆಲ್ಲಿರ, ಕೊಸಳ, ಗುಡಿಗಾರ, ಲಿಂಗಾಯತ, ಪಾನರ, ಜಂಗಮ, ಬಲ್ಲಾಳ, ಮಾಲೆಯವ, ಕುರುಬ, ಕಬ್ಬೇರ, ಅಣ್ಣಪ್ಪನ್ ಇತರರು (672, 225 ಸಂಖ್ಯೆ)

(e) ಇತರರು (Other Madras Languages):—ಬ್ರಾಹ್ಮಣ, ಮರಾಟಿ, ರಾಜಪುರಿ, ಕುಡುಬಿ, ಕ್ಷತ್ರಿಯ, ಖಾರ್ವಿ, ಚಾಪ್ಟೆಗಾರ, ಕೊಂಕಣಿ, ಸೊನೆಗಾರ, ವಾಣಿ, ನೇಕಾರ, ಕಾಡುಕೊಂಕಣಿ, ಇತರರು(140, 000)

(f) ಜೈನರು (9582 ಸಂಖ್ಯೆ)

ತುಳುನಾಡಿನ (ಅದರಲ್ಲೂ ದಕ್ಷಿಣಕನ್ನಡದ) ಸಮಾಜದಲ್ಲಿ ತೋರಿಬರುವ ಜಾತಿಗಳ ಸಹಜವಾದ ಚಿತ್ರಣವನ್ನು ಹಾಗೂ ರೂಪರೇಖೆಯನ್ನೀಯುವ ವರ್ಗೀಕರಣಗಳು ಮೇಲಿನವಲ್ಲವಾದರೂ, ಅವಲ್ಲಿ ಅವಲಂಬಿಸಿರುವ ಕ್ರಮದಲ್ಲಿ ನ್ಯೂನತೆ ಕಂಡುಬರುವುದಾದರೂ, 'ಬಲೆಯಂತಿರುವ' ತುಳುವರ ಬೇರೆ ಬೇರೆ ಸಾಮಾಜಿಕ ಘಟಕಗಳ ಪರಿಚಯವನ್ನು ಸ್ಥೂಲವಾಗಿ ಮಾಡಿಕೊಳ್ಳಲು ಪ್ರಯತ್ನಮಾಡ

ಲಾಗಿದೆ. ಮೊದಲನೆಯ ವರ್ಗೀಕರಣವನ್ನು ಉದ್ಯೋಗ ಯಾ ವ್ಯವಹಾರ ವನ್ನವಲಂಬಿಸಿ ಮಾಡಿದಂತೆಯೂ, ಎರಡನೇಯದನ್ನು ಪ್ರಾದೇಶಿಕವಲಸೆ ಯಾ ಭಾಷೆಯ ಮೇಲೆಯ ಮೇಲೆ ಹೊಂದಿಕೊಂಡು ಮಾಡಿದಂತೆಯೂ ಕಂಡು ಬರುತ್ತದೆ.

ಮೇಲಣ ವರ್ಗೀಕರಣದಲ್ಲಿ ಕಂಡುಬರುವ ಕೆಲವು ನ್ಯೂನತೆಗಳನ್ನು ತೋರಿಸು ವುದು ವಿಮರ್ಶೆಗೆ ಅಗತ್ಯ.

(1) ಆದಿಯಲ್ಲಿ ಒಂದೇ ಆಗಿದ್ದ ಜಾತಿಯು ಅನಂತರ ವಿವಿಧ ಕಸಬುಗಳನ್ನು ಮಾಡಲುದ್ಯುಕ್ತವಾಗಿ ಬೇರೆ ಬೇರೆ ಮೇಲ್ ಹೆಸರುಗಳನ್ನು ಹೇಗೆ ಪಡೆಯಿತು ಎಂಬ ವಿವರವನ್ನು ಈ ಪಟ್ಟಿಯು ಕೊಡುವುದಿಲ್ಲ. ಉದಾ:- ಬಂಟರೂ, ನಾಡವರೂ ಒಂದೇ ವರ್ಗಕ್ಕೆ ಸೇರಿದವರೆಂಬುದನ್ನೂ ಅಕ್ಕಸಾಲಿಗರೂ, ಕಮ್ಮಾರರೂ, ಕಂಚುಗಾರರೂ ಮೂಲದಲ್ಲಿ ಒಂದೇ ಜಾತಿಗೆ ಸೇರಿದವರೆಂಬುದನ್ನೂ ತಿಳಿಯತಕ್ಕುದು. ಅದೇ ರೀತಿ ಯಲ್ಲಿ ಗಾಣಿಗ, ದೇವಾಡಿಗ, ಕಪ್ಪಳಿಗ, ಶೇರಿಗಾರ—ವರ್ಗಗಳು ಉದ್ಯೋಗಗಳನ್ನು ಹೊಂದಿಕೊಂಡು ಬೇರೆ ಬೇರೆ ಜಾತಿ ಎಂದು ತಪ್ಪಾಗಿ ತಿಳಿಯಲ್ಪಡುವ ಸಂಭವವಿ ದ್ದರೂ ಅವರ ಮೂಲ ಒಂದೇ ಆಗಿದೆ.

(2) ವ್ಯಾಪಾರಸ್ಥರು ಒಂದು ವಿಶಿಷ್ಟಜಾತಿ ಎಂದು ಪರಿಗಣಿಸಲ್ಪಡುವುದು ಅಷ್ಟೊಂದು ಸಮಂಜಸವಲ್ಲ (ವೈಶ್ಯವೆಂಬುದು ಜಾತಿಯಲ್ಲ ವರ್ಣ) ವ್ಯಾಪಾರಸ್ಥರು ಒಂದು 'Community' (ಸಮಾಜ) ಎಂದು ಹೇಳಬಹುದೇ ವಿನಾ, ಅವರು ಒಂದು ಜಾತಿಯಾಗಲಾರರು. ಗುಜ್ಜರರು ಗುಜರಾತ್ ದೇಶದವರು ಅವರಲ್ಲಿ ವಿವಿಧ ಜಾತಿಗಳಿವೆ. ಅಂತೆಯೇ ಹೊಲೆಯರೆಂಬವರು ಒಂದು ಜಾತಿಯಲ್ಲ. ಹೊಲೆಯ ಎಂಬ ಶಬ್ದವು, 'ಹೊಲ' (field)ದಿಂದ ಬಂದುದಾಗಿದೆ.

(3) ಪಾಟಾಳಿ, ಸ್ಥಾನಿಕ, ಕೊಟ್ಟಾರಿ, ಭಂಡಾರಿ ಎಂಬೀ ಹೆಸರುಗಳು ಅಧಿ ಕಾರ ಸೂಚಕವಾದವುಗಳೇ ವಿನಾ ಜಾತಿ ನಿರ್ದೇಶಕಗಳಲ್ಲ.

(4) ಗೋವಳರೂ, ಕುರುಬರೂ ಒಂದೇ ಜಾತಿಗೆ ಸೇರಿದವರು. ಕಾಡುಕೊಂ ಕಣಿಯರು ಗಿರಿಜನರಲ್ಲಿ ಸೇರಿದವರಲ್ಲ.

(5) ಹಣಬರೂ. ವೀಳ್ಯಕಾರರೂ— ಅತಿ ಪ್ರಾಚೀನಜನಪ್ರಭೇದಗಳೆಂಬ ವಿಷ ಯವು ಇದರಲ್ಲಿ ಕಂಡುಬರುವುದಿಲ್ಲ. ಹಣಬರೆಂದರೆ ಪಣಿಗಳು, ವೀಳ್ಯಕಾರರೆಂದರೆ ಬೆಳ್ಳರು.

(6) ಕೊಡಗರೂ, ಅರೆಯರೂ, ಮರಾಟಿಯರೂ ಜಾತಿಗಳಲ್ಲ ಅವು ಪ್ರಾದೇ ಶಿಕ ಹೆಸರುಗಳಿಂದ ಬಂದ ನಾಮಧೇಯಗಳು. ಅಂತೆಯೇ ಹೊಲದಲ್ಲಿ ಕೆಲಸ ಮಾಡುವವರೆಲ್ಲ ಒಂದು ಪ್ರತ್ಯೇಕ ಜಾತಿಯಾಗಲಾರದು. ಹಳೆಗಾಲದಲ್ಲೂ ಹೊಲ ದಲ್ಲಿ ಕೆಲಸಮಾಡುವವರು ಬೇರೆ ಬೇರೆ ಜಾತಿಗೆ ಸೇರಿದವರಿದ್ದರು.

7) ವಿಭಾಗಿಸಲ್ಪಡದ ಜಾತಿಗಳ ಹೆಸರುಗಳಲ್ಲಿ ಅನೇಕ ಹೆಸರುಗಳು ಪದವಿಯನ್ನು ನಿರ್ದೇಶಿಸುವುವುಗಳಾಗಿವೆ ವಿನಾ, ಜಾತಿಗೆ ಸಂಬಂಧಿಸಿದುವುಗಳಲ್ಲ.

ಉದಾ: ದ್ವಿಜ, ಭ್ರಷ್ಟ, ಮಣೆಗಾರ, ತಿರುಮನೆ, ವಡೆಯ, ಜ್ಯಾತಿ, ಕಲ್ಲು ಕ್ಷೇತ್ರವಾಸಿ ಕಲ್ಲು ಇತ್ಯಾದಿ.

[ದಕ್ಷಿಣ ಕನ್ನಡ ಜಿಲ್ಲೆಯ ಗಜೆಟಿಯರಿನಲ್ಲಿ ಮಾಡಿದ ವಿಭಾಗಗಳು ಪ್ರಾದೇಶಿಕ ಹಾಗೂ ಭಾಷಾವಾರು ವಿಭಾಗಗಳು. ಅವು ಜಾತಿ ಎನ್ನುವುದು ಯೋಗ್ಯವಲ್ಲ. ಅದರೂ ನಮ್ಮ ನಾಡಿನಲ್ಲಿ ಹೊರಗಣಿಂದ ಬಂದ ಯಾವ ಯಾವ ಪಂಗಡಗಳು ಸೇರಿಕೊಂಡು, ಬೆರಕೆಯಾಗಿ, ನಾಡಿನ ಜನರಾಗಿ ಪರಿವರ್ತಿಸಲ್ಪಟ್ಟು ಸಮಾಜವನ್ನು ಬೆಳಸಿದುವು ಎಂಬುದನ್ನು ಈ ಪಟ್ಟಿಯು ತಿಳಿಸುತ್ತದೆ]

8) 'ಕನ್ನಡದವರು' (Kanarese) ಎಂಬ ವರ್ಗದಲ್ಲಿ ಸೇರಿಸಲ್ಪಟ್ಟ ಹೆಸರುಗಳೆಲ್ಲವೂ ನಿರ್ದಿಷ್ಟ ಜಾತಿವಾಚಕಗಳಲ್ಲವೆಂದು ತಿಳಿದು ಬರುತ್ತದೆ. ಉದಾ:- 'ಬಲ್ಲಾಳ' ವೆಂಬ ಮೇಲ್ ಹೆಸರು ಬ್ರಾಹ್ಮಣರಲ್ಲೂ, ಬಂಟರಲ್ಲೂ, ಜೈನರಲ್ಲೂ, ಕಂಡುಬರುತ್ತದೆ. ಇದು ಪದವಿಯನ್ನಾಧರಿಸಿ ಬಂದ ಹೆಸರು. ಅಂತೆಯೇ 'ಹೆಗ್ಗಡೆ' ಎಂಬ ನಾಮಧೇಯವು ಬಂಟರಲ್ಲೂ, ಜೈನರಲ್ಲೂ, ಕುರುಬರಲ್ಲೂ, ಗೌಡ ಸಾರಸ್ವತರಲ್ಲೂ, ಬ್ರಾಹ್ಮಣರಲ್ಲೂ ತೋರಿ ಬರುತ್ತದೆ. ಕುರುಬರ ಒಂದು ವರ್ಗವೇ ಹೆಗ್ಗಡೆ. ಕೊಟ್ಟಾರಿಯು ಜೈನನಾಗಬಹುದು, ಬ್ರಾಹ್ಮಣನಿರಲೂಬಹುದು, ಬಂಟನೂ ಇರಬಹುದು. ಅಂತೆಯೇ ಭಂಡಾರಿಯು ಕೆಲಸಿಯೂ ಆಗಿರಬಹುದು. ಬಂಟನಿರಲೂ ಬಹುದು ಅಥವಾ ಗೌಡ ಸಾರಸ್ವತನಿರಲೂ ಬಹುದು .ಅದೇ ರೀತಿಯಲ್ಲಿ ಚೆಟ್ಟಿ ಎಂಬುದನ್ನು 'ಪದವಿ' ಹೆಸರಾಗಿ ತಿಳಿಯುವುದುತ್ತಮ. ವೈಶ್ಯವೆಂಬುದು ಜಾತಿ ಹೆಸರಲ್ಲ. ಇನ್ನೂ ಅನೇಕ ದೃಷ್ಟಾಂತಗಳನ್ನು ಕೊಡಬಹುದು.

ತುಳು ನಾಡಿನ ಮೂಲಿಗರೆನಿಸುವ ಜನ ಪ್ರಭೇದಗಳು ಯಾ ಜಾತಿಗಳು ವಿಭಾಗಿಸಲ್ಪಡುವುದಾದರೆ ಈ ಕೆಳಗಿನಂತೆ ನಿರ್ಧರಿಸಬಹುದು.

1) ಬಿಲ್ಲವ (ಉತ್ತರ ಕನ್ನಡದಲ್ಲಿ ಹಳೆ ಪೈಕ)
2) ಮೊಗೇರ
3) ಹೆಗ್ಗಡೆ
4) ಕುಡಿಯರು ಯಾ ಮಲೆ ಕುಡಿಯರು
5) ನಾಡವರು ಯಾ ಬಂಟರು.
6) ಮಡಿವಾಳ
7) ಕೆಲಸಿ

8) ಮ್ಯೊಲಿ-ದೇವಡಿಗ (ಉತ್ತರ ಕನ್ನಡದಲ್ಲಿ)
9) ನಲ್ಕೆಯುವರು
10) ಬ್ರಾಹ್ಮಣರೂ, ಜೈನರೂ.

ಮೇಲ್ಕಾಣಿಸಿದ ವಿವಿಧ ಜಾತಿಗಳು ಈ ಕೆಳಗಿನ ಸಾಂಸ್ಕೃತಿಕ ಹಂತಗಳನ್ನು ಸೂಚಿಸಬಹುದು.

1) ಪ್ರಥಮ ಹಂತ— ಬಿಲ್ಲವ, ಮೊಗೇರ
2) ದ್ವಿತೀಯ ಹಂತ— ಕುರುವರು, ತುಳುವರು (ಹೆಗ್ಗಡೆ)
3) ತೃತೀಯ ಹಂತ—ಕುಡಿಯರು
4) ಚತುರ್ಥ ಹಂತ— ಬಂಟರು, ನಾಡವರು (ರಾಜಕೀಯದಲ್ಲಿ ಆಳ್ವರು)
5) ಆರ್ಯೀಕರಣ-ಬ್ರಾಹ್ಮಣರೂ, ಜೈನರೂ.

ಸಮಾಜದ ಸೇವಕರು-ಮಡಿವಾಳ, ಕೆಲಸಿ, ಮ್ಯೊಲಿ (ದೇವಡಿಗ), ನಲ್ಕೆಯುವ.

ಉಳಿದ ಎಲ್ಲಾ ಜಾತಿಗಳು ಕೊಂಕಣ,ತೆಲುಗು, ದ್ರಾವಿಡ (ತಮಿಳು), ಮಹಾರಾಷ್ಟ್ರ ಮತ್ತು ಕೇರಳಗಳಿಂದ ತಂಡ,ತಂಡವಾಗಿ,ಹಂತ, ಹಂತಗಳಾಗಿ ತುಳುನಾಡಿಗೆ ಬಂದು ಯಾ ತುಳುನಾಡಿಗೆ ತರಿಸಲ್ಪಟ್ಟು ನೆಲೆ ನಿಂತವರಾಗಿರುವರು. ಈ ದ್ರಾವಿಡ ದೇಶಗಳ ಪ್ರಭಾವವು ನಮ್ಮ ನಾಡಿನ ಮೇಲೆ ಗಣನೀಯ ರೀತಿಯಲ್ಲಿ ಬೀರಲ್ಪಟ್ಟರೂ, ನಮ್ಮ ನಾಡಿನ ಹಲ ಕೆಲವು ವೈಶಿಷ್ಟಗಳೇ ಅಳಿಯದೆ ಉಳಿದು ಬಂದ ಸಂಗಡಗಳನ್ನು ಪರಿವರ್ತಿಸಿದಂತೆ ಕಂಡು ಬರುತ್ತದೆ.

ಈ ಬಿಲ್ಲವ, ಮೊಗೇರ, ನಾಡವ (ಬಂಟ) ಇವರೊಳಗೆ ರಕ್ತ ಸಂಬಂಧವು ಮೂರು ವರ್ಗಕ್ಕೂ ಸಾಧಾರಣ ಸಮಾನವಾಗಿರುವ ಅವರ 'ಬಳಿ' (ಬರಿ) ಗಳಿಂದ ತಿಳಿದು ಬರುತ್ತದೆ.

1) ಪುಲ್ಯಟನ್ನಾಯ 2) ಸಾಲಿಯನ್ನಾಯ 3) ಬಾಗ್ಯೆಟನ್ನಾಯ 4) ಅರ್ಯನ್ನಾಯ 5) ತಿಂಗಳನ್ನಾಯ 6) ಸಾಲಿನ್ನಾಯ 7) ಬಂಗೇರನ್ನಾಯ 8) ಸಿರಿಯನ್ನಾಯ, 9) ಕೆಲ್ಲಿರನ್ನಾಯ 10) ಜಿರ್ಮೊತ್ತಿಬನ್ನಾಯ 11) ಪೆರ್ಗಡೆನ್ನಾಯ 12) ಬುಣ್ಣನ್ನಾಯ 13) ಕಾಂಚನ್ನಾಯ 14) ಕೋಚರನ್ನಾಯ 15) ಪುತ್ರನ್ನಾಯ 16) ನೆಲಬನ್ನಾಯ 17) ಸಲಬನ್ನಾಯ ಅಥವಾ ಅಯ್ಯಬನ್ನಾಯ 18) ಕನ್ನಡಿಬನ್ನಾಯ 19) ಉಳಿಬನ್ನಾಯ 20) ಕೋಮಟಿ ಬನ್ನಾಯ 21) ಕರ್ಮರನ್ನಾಯ 22) ಉಪ್ಪೊರನ್ನಾಯ 23) ತಲಾರಬನ್ನಾಯ 24) ಪಾಂಗಳನ್ನಾಯ

[ಅಹಿಛತ್ರದಿಂದ ಬಂದು ನೆಲೆಸಿದ ಬ್ರಾಹ್ಮಣರು ತುಳು ನಾಡಿನ ಬ್ರಾಹ್ಮಣೇತರ ಸ್ತ್ರೀಯರನ್ನು (ಮುಖ್ಯವಾಗಿ ಬಂಟರ ಸ್ತ್ರೀಯರನ್ನು) ವಿವಾಹವಾದುದವರ ಫಲವಾಗಿ ಅವರಲ್ಲಿಯೂ ಈ ಬಳಿಗಳು ಕುಲವಾಚಕಗಳಾಗಿ ಉಳಿದುವು ಎಂಬ ಅಭಿಪ್ರಾಯವಿದೆ.]

ಬೇರೆ ಬೇರೆ ಜಾತಿಗಳ ಕೌಟುಂಬಿಕ ಹೆಸರುಗಳನ್ನು (Surnames or honofiic titles) ಓದುಗರ ಅವಗಾಹನೆ ಬಗ್ಗೆ ಸಾಧ್ಯವಾದ ಮಟ್ಟಿಗೆ ಕ್ರೋಢೀಕರಣ ಮಾಡಿ ಈ ಕೆಳಗೆ ಕೊಟ್ಟಿದ್ದೇನೆ. ಈ ಕ್ರೋಢೀಕರಣವು ಪರಿಪೂರ್ಣವಾದುದಲ್ಲವೆಂದು ತಿಳಿಸಲು ಹಿಂಜರಿಯಲಾರೆ.

1. **ಬಿಲ್ಲವರು:** ಪೂಜಾರಿ, ಬೋಂಟ್ರ, ಸುವರ್ಣ, ಮೆಂಡ, ಸಾಲಿಯಾನ, ಬೈದ್ಯ, ಅಳ್ವ, ಸಾಲಿಯಾನ್, ಕರ್ಕೇರ, ಕುಂದರ್, ಕೋಟಿಯಾನ್, ಪುತ್ರನ್, ನೋಂಡ.

2. **ಮೊಗೇರರು:** ಮೊಗೇರ, ಮರಕಲ, ಬೋವಿ,ಬಂಗೇರ, ಕೋಟಿಯಾನ, ಸಾಲಿಯಾನ, ಪುತ್ರನ್, ಸುವರ್ಣ, ಕರ್ಕೇರ, ಕುಂದರ್, ಕಾಂಚನ್, ತೋಳಾರ, ಅಮೀನ್, ಶ್ರೀಯನ್, ಮೆಂಡನ್ ಈ ಹೆಸರುಗಳು ಅವರ ಬಳಿಗಳ ಹೆಸರುಗಳಿಂದ ಬಂದಂತೆ ಕಂಡು ಬರುತ್ತದೆ.

1. ಬಂಗಾರಣ್ಣಾಯ—ಬಂಗೇರ (ಬಡಳಾಗಿ ಗಂಗರ)
2. ಸಾಲಿಯನ್ನಾಯ—ಸಾಲಿಯಾನ್
3. ಪುತ್ರನ್ನಾಯ—ಪುತ್ರನ್
4. ದೋರಣ್ಣಾಯ – ಸುವರ್ಣ
5. ಕುಂದಲಾಯ —ಕುಂದರ್
6. ಕಾಂಚನ್ನಾಯ—ಕಾಂಚನ್
7. ಸಿರಿಯನ್ನಾಯ—ಶ್ರಿಯಾನ್
8. ಮುಂದಣ್ಣಾಯ—ಮೆಂಡನ್
9. ತಿಂಗಳನ್ನಾಯ—ತಿಂಗಳಾಯ
10. ಕಬರ್ಗನ್ನಾಯ—ಕರ್ಕೇರ
11. ತೆಳರಬನ್ನಾಯ—ತೋಳಾರ್

3. **ನಾಡವರು (ಬಂಟರು) :** ಪಾಂಡ್ಯ, ಬಳ್ಳಾಳ, ಹೆಗ್ಗಡೆ, ಸೆಟ್ಟಿ, ರೈ (ಅೖೈ), ಬಂಟ, ಪೋಲಂಟ, ನಾಯಕ, ಭಂಡಾರಿ, ಶೇಕ, ಪಕ್ಕಳ, ಅಜಿಲ,ಮಾರ್ಲ, ಆಳ್ವ, ಸೇನವ, ತೋಳಾರ, ಪೂಂಜ, ಚೌಟ, ಅಧಿಕಾರಿ, ಅಡ್ಯಂತಾಯ, ಅರಸ,

ಸುಳಾಯ, ಸೇವಿತ, ಶೇರ್ವೆಗಾರ, ಅಡಪ್ಪ, ನೋಂಡ, ಕಂಬಳಿ, ಕಡಂಬ, ಮಾಡ, ಮೇಂಡ, ಪೂವಣಿ, ಕುದ್ರೆ, ಮುದ್ಯ, ಕಾವ, ಕಾಂತೀವ, ಮಲ್ಲಿ, ಮುಂಡ, ಮಲ್ಲ, ವರ್ಮ, ಪೈಯಡ, ಮುರಯ್ಯ, ಅರಿಗ, ನಾಯರ, ಬಿನ್ನಣಿ, ಮುಕ್ಕಾಲ, ಮಾಣಾಯಿ' ಪಾಲ, (ಪಡ್ಯಲ), ಸಾವಣಿ, ಭೋಜ, ಅಜಿರಿ, ಬುನ್ನಾಳ, ಕಾಂಞಾವ, ಅತ್ತರ, ಕೊಟ್ಟಾರಿ, ಬುಡಲೆ, ಧೊರಿ, ಸಾಮಂತ, ಪೆರ್ಗಡೆ, ರಾಜ, ಮದ್ದಾಲ.

ಹಿಂದಕ್ಕೆ ಕೊಟ್ಟ 24 ಪ್ರಧಾನ ಬಳಿಗಳು ಹೊರತಾಗಿ ಈ ಕೆಳಗಿನ ಹೊಸಬಳಿಗಳು ನಾಡವ ಸಮಾಜಕ್ಕೆ ಸಂಬಂಧಿಸಿದುವುಗಳಾಗಿವೆ.

ಐಬನ್ನಾಯ, ಇರ್ವತ್ತೂರನ್ನಾಯ, ಸಾಮಂಣಾಯ, ಮುದ್ದರನ್ನಾಯ ಗುವೆಲನ್ನಾಯ, ಕರ್ಕಟನ್ನಾಯ, ಕೊಂಗೆನ್ನಾಯ, ಕೋಯನ್ನಾಯ, ಕಾಯರನ್ನಾಯ, ಸೆಟ್ಟಿಬನ್ನಾಯ, ಕೇರಟಿಬನ್ನಾಯ, ಓಡರನ್ನಾಯ, ಕತ್ತಿಬನ್ನಾಯ, ಅಂಚಬನ್ನಾಯ, ಅಡ್ಯಾರನ್ನಾಯ, ಪಿಲಿಬನ್ನಾಯ, ಮಾಯನ್ನಾಯ, ನೆಟ್ಟನ್ನಾಯ, ರಂಡೇತಿನ್ನಾಯ, ನೀರನ್ನಾಯ, ಕುಕ್ಕೇನ್ನಾಯ, ಚಾಟರನ್ನಾಯ: ಯೇಮರನ್ನಾಯ, ನಾಯರನ್ನಾಯ, ಆದರನ್ನಾಯ, ನಾವರಿಬನ್ನಾಯ, ತೊಂದರನ್ನಾಯ, ನೆಲಪಾಡಿದನ್ನಾಯ, ಕೊಯ್ಯಾರಬನ್ನಾಯ, ಪಾದೂರನ್ನಾಯ, ಗುಜ್ಜರಬನ್ನಾಯ, ಐವರನ್ನಾಯ, ಕುಂದೋನಿಬನ್ನಾಯ, ಕರಂಬರನ್ನಾಯ, ಬಿರ್ಮರನ್ನಾಯ, ಸಾಮಣ್ಣಾಯ (24+36=60 ಬಳಿಗಳು)

4. ಬ್ರಾಹ್ಮಣರು

1. **ಸ್ಥಾನಿಕರು:**—ಉಪಾಧ್ಯ, ಶಾಸ್ತ್ರಿ, ಅಯ್ಯ, ಅಪ್ಪ, ಅಣ್ಣ, ಪಂಡಿತ, ಜೋಯಿಸ, ಶರ್ಮ, ಓಜ, ಜೀಯ, ರಾವ್ (ರಾಯರು), ಹೆಬ್ಬಾರ

2. **ಹವಿಕರು:** ಸಭಾಹಿತ, ಮಧ್ಯಸ್ಥ, ದೀಕ್ಷಿತ (ಯಾಜೀ) ಭಟ್ಟ, ಅವಭೃತ (ಅಪ್ಪರ್ತ), ತಂತ್ರಿ, (ತಾಂತ್ರಿಕ), ಪ್ರಭು (ಹೆಗ್ಗಡೆ), ಹೆಬ್ಬಾರ, ಅಡಿ, ಕಡ್ಗಿ, ಗೋಪಿ, ಕಾರಂತ.

3. **ಅಹಿಚ್ಛತ್ರದ ಬ್ರಾಹ್ಮಣರು:** ತಲಪಾಡಿತ್ತಾಯ, ಪಾತೂರತಾಯ, ಕರಿವೂರುತಾಯ, ಕುದ್ರೆತ್ತಾಯ, ಇಚ್ಚಿಲತ್ತಾಯ, ಅನಂತೋಡಿತ್ತಾಯ, ಮಯ್ಯರುತಾಯ, ಪೊಯ್ಯೆತಾಯ.

ಮದವೂರುತ್ತಾಯ, ತಾಳಿತ್ತಾಯ, ನಾರಳತ್ತಾಯ, ಅರಿಯಪ್ಪಿನಾಯ. ನೇತ್ರತ್ತಾಯ, ಮಂಜನಾಡಿತ್ತಾಯ.

ಬಕ್ಕುತ್ತಾಯ, ಇನ್ನೊಂತಾಯ.

ಸುಳ್ಯಣ್ಣಾಯ, ಪದಕಣ್ಣಾಯ.

ಇನ್ನೂರಾಯ, ಕಿದೆವೂರುತ್ತಾಯ, ಕುಣಿಲಾಯ, ಕುಡಲತ್ತಾಯ.

ಕಣ್ಣರಣ್ಣಾಯ ಕಂಬೂರನ್ನಾಯ, ಇರ್ವತ್ತೂರಾಯ, ಮಿತ್ತಡಕತ್ತಾಯ.

ಬಜೆತ್ತಾಯ, ಪಿಳಿಕರೆತ್ತಾಯ, ಕಂಬ್ಲಂತೋಡಿತ್ತಾಯ, ಮೂಡೆಂತ್ತಾಯ

ಅಂಬರತ್ತಾಯ, ಶಂಬರತ್ತಾಯ, ಇಂದ್ರವಳ್ಳಿತ್ತಾಯ, ಕಣ್ಣಾರಣಾಯ,

ಕಂಬಾರಣಾಯ, ಇರುವಂತೂರಾಯ, ಕಾಯಕೋಡಿತ್ತಾಯ, ಮಿತ್ತನಾಡುತ್ತಾಯ.

ಕಡಂಬಳತ್ತಾಯ, ಗಂಗೆತ್ತಾಯ, ದೆವ್ಪುಂಜಿತ್ತಾಯ, ಬಳ್ಕುಳುತ್ತಾಯ.

ಶ್ರೀಮಂತೂರುತ್ತಾಯ, ಶಿಬರುತ್ತಾಯ, ಮುನ್ನೂರಾಯ, ಮುಚ್ಚತ್ತಾಯ, ಮಡಿಕುಳಾಯ, ಸೆಡಿಕುಳಾಯ, ಅಸುರಣ್ಣಾಯ, ಪೆರಣ್ಣಾಯ

ಮೊಗೆನಾಯ, ಮಿತ್ತಂತಾಯ, ಮಡುಮಣ್ಣಾಯ, ವೈಲಾಯ, ಕಾಂಚತಾಯ, ಔತಣ್ಣಾಯ, ಬರ್ಕಣ್ಣಾರಿತ್ತಾಯ, ಉಳ್ಳುರಾಯ.

ಅಲೆವೂರಾಯ, ಕೊಡಂಚತ್ತಾಯ, ಪುಳಿತ್ತಾಯ, ಮಂಜತ್ತಾಯ, ಸರಳತ್ತಾಯ, ಕುತ್ತುಒಳಿತ್ತಾಯ,

ಸಗರಿತ್ತಾಯ, ತೆಂಕಿಲ್ಲಾಯ, ನಡ್ವತ್ತಿಲ್ಲಾಯ, ಕುಂಜಿತ್ತಾಯ,

ಕೂಡೆಮೂರುತ್ತಾಯ, ಪುತ್ತೂರಾಯ, ಬಾಯರಿತ್ತಾಯ, ಕೊಡೆತ್ತಾಯ.

ಹೇರಳ, ಹೆಬ್ಬಾರ, ಮೈಯ, ಕಾರಂತ, ಹಂದೆ, ಬಾಸರಿ, ನಾವಡ, ಹೊಳ್ಳ,

ಹೆಬ್ಬಾರ, ಉಡುಪ.

ಬೈಪಾಡಿತ್ತಾಯ, ಕುಜಿಮಣ್ಣಾಯ, ಯತ್ರಾಡಿತ್ತಾಯ, ಮಾಗಣ್ಣಾಯ, ಕಾಡಂತಾಯ,

ಉರಿವುಳ್ಳ ಬೈಪಾಡಿತ್ತಾಯ, ಪಾಂಗಣ್ಣಾಯ.

ಪುಳಿಂಪೊಡಿತ್ತಾಯ, ಅಂಬುಳಣ್ಣಾಯ.

ಪಡುವಂತಾಯ, ಮಲಿಪಾಡಿತ್ತಾಯ,

ಅಪ್ಪುಂತಾಯ, ಅರಿಮನಿನಾಯ, ಕುಕ್ಕೋಡಿತ್ತಾಯ, ಮುಂಡತಾಡಿತ್ತಾಯ, ಮುಡಿಪಾಡಿತ್ತಾಯ, ಅರಿಪಾಡಿತ್ತಾಯ, ಶಿಲಣ್ಣಾಯ, ಅರ್ಬಿತ್ತಾಯ.

ಪುರತ್ತಾಯ, ಕುಂಜಾಮಾರ್ಗತ್ತಾಯ, ಪೆರಡಿತ್ತಾಯ, ಮುಚ್ಚಿಂತ್ತಾಯ, ಅಳ್ಳಿತ್ತಾಯ, ಮಡುವಿನಾಯ, ಕುದ್ದಣ್ಣಾಯ, ಕೊರಂಗಿನ್ನಾಯ, ಕಕ್ಕರನ್ನಾಯ,

ಇಡೆಪಾಡಿತ್ತಾಯ, ಶಬರಾಯ, ಉಪರಣ್ಣಾಯ, ಕೊಡಿತ್ತಿಲ್ಲಾಯ.

ನೊರಿತ್ತಾಯ, ಮಟ್ಟೆನ್ನಾಯ, ತೆಂಜಿತ್ತಾಯ, ಪೆರ್ಲತ್ತಾಯ,

ಪುದಿನಾಯ, ಅಮತೋಡಿತ್ತಾಯ, ಪೊರಳತ್ತಾಯ, ಇಲ್ಲಡಿತಾಯ.

ಬಾಯಾರಿತ್ತಾಯ, ಉಮ್ಮಣಿತ್ತಾಯ, ಅಮ್ಮಣಿತ್ತಾಯ.

**ಮೋಡಿಂಪಾಡಿತ್ತಾಯ**, ಎಡೆಕಿಲ್ಲಾಯ, ಇಬ್ಬಳಿತ್ತಾಯ, ಮೂಸೆಪಾಸಿತ್ತಾಯ

ಮಣಿಕಳ್ಳಾಯ, ಕೆಳ್ತಾಯ, ಷಡಂಗತ್ತಾಯ, ಅಬಿಲಿತ್ತಾಯ, ಮಣಗಳತ್ತಾಯ, ಅರುಂಬುಡತ್ತಾಯ.

ಬಿಜತ್ತಾಯ.

ಇಡೆಬೆಟ್ಟನಾಯ, ಅನಿಂಜತ್ತಾಯ.

ಶಿರಿಯಾಡಿತ್ತಾಯ, ಕುಂಟಾರಂತಾಯ, ಕುಂಕೋಡಿತ್ತಾಯ, ಬಾಜಿತ್ತಿಲ್ಲಾಯ, ಕೆಮ್ಮುಂಡೆತ್ತಾಯ.

ಇರೆಕಟ್ಟತ್ತಾಯ, ಪೊನ್ನೆತ್ತಾಯ, ಅರ್ಕ್ಯಂತಾಯ, ಸಿರತ್ತಾಯ, ಕಜೇಕಂತಾಯ,

**ಅಗ್ನಿಹೋತ್ರಿ**:—ಅಲೆವೂರಾಯ, ಸಿಮಂತೂರಾಯ, ಮುಚ್ಚಂತಾಯ, ಮುನ್ನೂರಾಯ, ಕೊಡಂಚತ್ತಾಯ, ಮಡಿನಳಿತ್ತಾಯ, ಮುಂಜಿತ್ತಾಯ, ಕುಂಜಿತ್ತಾಯ ನಡ್ವತಿಲ್ಲಾಯ, ಸಗರಿತ್ತಾಯ, ತೆಂಕಿಲ್ಲಾಯ, ಕಡಂಬಳಿತ್ತಾಯ, ಕೆಕೊಡೆನಾಯ, ಕೊರೆನಾಯ, ಬನ್ನಿಂಜೆತ್ತಾಯ, ಮರಡಿತ್ತಾಯ, ಶಿವತ್ತಾಯ, ಇಡೇಪಾಡಿತ್ತಾಯ, ಪಾಂಗಣ್ಣಾಯ, ಉಡುಪ, ಇರಿತ್ತಾಯ, ಕುಂಜೂರಾಯ, ಮಿತ್ತಂತಾಯ, ಸರಳಾಯ.

**ಸ್ಮಾರ್ತಜನರು**:—ತಾಳಿತಾಯ, ನಾರಳತಾಯ, ಅರಿಯಪಿನಾಯ, ಕಿದೆಕಿದೆನಾಯ, ನೂರಿತ್ತಾಯ, ಚಂಪಗೆತ್ತಾಯ, ಮೂಲೆಪಾಡಿತ್ತಾಯ, ಕಲ್ಲೂರಾಯ, ಉಡುಪ, ಬೈಪಾಡಿತ್ತಾಯ, ಅಲೆವೂರಾಯ, ಮೂಡುಂಪಾಡಿತ್ತಾಯ, ಕೊರಿಂಗನ್ನಾಯ, ಬ್ರಹ್ಮತ್ತಾಯ, ಕಾರಂತ.

**ಭಟ್ಟಜನರು**: ಮುನ್ನೂರಾಯ, ಅಲೆವೂರಾಯ, ಪೆಣ್ಣಾಯ ಮಂಜಿತ್ತಾಯ, ಬೈಪಾಡಿತ್ತಾಯ, ಪಿಜತ್ತಾಯ, ಪಾದೂರಾಯ, ಇಂದ್ರವಳ್ಳಿತಾಯ, ಮುಚ್ಚಿತ್ತಾಯ, ಸಿರಿಮಂತೂರಾಯ, ಕೊಡೆನ್ನಾಯ, ಬಡಿಕೊಳತಾಯ, ಕುಂಜತ್ತಾಯ, ಮಡುವಿನಾಯ, ಕೊಡಂಚ, ಕಲ್ಲೂರಾಯ, ಮೊಗೆರಾಯ, ಬ್ರಹ್ಮಕಾರಂತ, ಉಡುಪ, ಒಪ್ಪಂತಾಯ, ನೂರಿತ್ತಾಯ, ಅರಿಮನೆತ್ತಾಯ, ಇಡೆಪಾಡಿತ್ತಾಯ, ಸರಳಾಯ, ಶಬರಾಯ, ಉಪರಣ್ಣಾಯ, ಇರುವತ್ತೂರಾಯ, ಮೂಡುಪಾಡಿತ್ತಾಯ, ಬಜೆತ್ತಾಯ, ಪರಳತ್ತಾಯ, ತೆಂಕಿಲ್ಲಾಯ, ಬಾಯಾರಿತ್ತಾಯ, ಕೆಕೊಜೆತ್ತಾಯ, ಕೊರಿನ್ನಾಯ, ಬನ್ನಿಂಜತ್ತಾಯ, ಮರಡಿತ್ತಾಯ, ಶಿವತ್ತಾಯ, ನಡುವತ್ತಿಲ್ಲಾಯ, ಸಗರಿತ್ತಾಯ, ಕಂಬಳತ್ತಾಯ,

ತಂತ್ರಿ ಜನ:— ಇಚ್ಚಿಲತ್ತಾಯ, ನೇತ್ರತಾಯ, ಪಾಂಗಣ್ಣಾಯ, ಪುತ್ತೂರಾಯ
ಪಂಡಿತ ಜನ:— ದಸ್ಪಂತಾಯ, ಪಿಜತ್ತಾಯ
ಪಕ್ಷನಾಥರು: — ಮೂಡಿಲ್ಲಾಯ, ನಿಡುಂಬೂರಾಯ
ಬಲ್ಲಾಳ ಜನ:— ತಲೆಪಾಡಿತಾಯ, ಮಂಜನಾಡಿತಾಯ, ಕುಂಜಾಮಣ್ಣಾಯ, ಕುಡಂಬಾಡಿತಾಯ

ಗ್ರಾಮಣಿಗಳು:— ಕಿದೆಕಿದೆನ್ನಾಯ, ಸುಳ್ಳಣ್ಣಾಯ, ಕೋಲಟಿಪುಂಜತ್ತಾಯ, ಕಾವೋಟಿ, ಕೀಮಂತೂರಾಯ, ಅಂಬರಂತಾಯ, ಮಡುಮಣ್ಣಾಯ, ನಡ್ವತ್ತಿಲ್ಲಾಯ, ನಾರಿತಾಯ, ಉಡುಪ, ಅತ್ರಾಡಿತ್ತಾಯ, ಚಂಪಗೆತ್ತಾಯ, ಕುಡವಣ್ಣಾಯ, ಇಡೆತಾಡಿತ್ತಾಯ, ಅರಮನೆತಾಯ, ಪುದಿನ್ನಾಯ, ಮಣಿಕಳತ್ತಾಯ, ನೂರಿತ್ತಾಯ, ಇಡೆಪಟ್ಟನಾಯ, ಮಿತ್ತಂತಾಯ, ಮೂಡಂಪಾಡಿತ್ತಾಯ, ಪಾತೂರಾಯ, ಇಣ್ಣರಾಯ, ಕಣ್ಣಾರಂಣ, ಪಾಡಿಂಕಿಲ್ಲಾಯ, ಹೇರಳ, ಕಾರಂತ, ಹೆಬ್ಬಾರ, ನಿಲಾವರ, ಕೊಳತಾಯ, ಓಬಳ್ಳಿ

ಸಭಾಪತಿಜನ:— ಶಿಬರೂರಾಯ, ಶಬರೂರಾಯ

ಜನ್ನಿಜನಗಳು:— ಶಿಡಿಕುಳ್ಳಾಯ, ಮಡಿಕುಳ್ಳಾಯ, ಮಿತ್ತಂತಾಯ, ಪಯಿಲಾಯ, ಕಂಜತ್ತಾಯ, ಮಂಜತ್ತಾಯ, ಕೆಮ್ಮಂಡೆತ್ತಾಯ, ಮುಡೆಂಪಾಡಿತ್ತಾಯ, ಮಿಶಪಾಡಿತ್ತಾಯ, ಹೆಬ್ಬಾರ, ಉಗ್ರವಳ್ಳಿತ್ತಾಯ, ಇಡೆವೆಡನಾಯ (ಎಡೆಬದಿನಾಯ), ಕಡೆಕಲ್ಲಾಯ, (ಎಡೆಕಲ್ಲಾಯ), ಕ್ಯೊಕೊಡಿತಾಯ, ಉಳ್ಳೂರಾಯ, ಮೂಡಿಲ್ಲಾಯ, ಮಟ್ಟನ್ನಾಯ, ಸಣ್ಣಡ್ಕತಾಯ, ಕುಣಿಕುಡರಾಯ, ಅನಂತೋಡಿತ್ತಾಯ, ಕಣ್ಣಾರಾಯ, ಕಂಬರಣ್ಣಾಯ, ಪುಪನಾಯ, ಪುಳಿಂತಾಯ, ಪಡಂಗ, ಇರೆಕಟ್ಟತ್ತಾಯ, ಪಾಡಿತ್ತಾಯ, ಹೊಳ್ಳಮಯ, ಪಡತ್ತಾಯ, ಜಕಣ್ಣಾಯ, ಅಮ್ಮಣಿತ್ತಾಯ, ಕಂಬಳಕೊಡಿತಾಯ, ಅರಮನೆತ್ತಾಯ, ಪೆಳ್ಳಕರತ್ತಾಯ, ಪೊಗೆತ್ತಾಯ, ಮೂಡಂತಿಲ್ಲಾಯ, ಮುಸಿಪಾಸಿತ್ತಾಯ, ಕೊಕ್ಕಡನಾಯ, ಕುತ್ಯಾರಾಯ, ಮಾಮಂತಾಯ, ಉಳಿತಾಯ, ಆದೂಂಡತಾಯ, ಊರಾಳ, ಪಡ್ಡಿಲ್ಲಾಯ, ನಕಕಟತಾಯ, ಪೊಣೆತ್ತಾಯ, ಕಜೆಕೊಡಿನಾಯ

ಅಧಿವಾಸಿಗಳು:— ಅರಿಪಾಡಿತ್ತಾಯ, ಮಡುವಿನ್ನಾಯ, ಅರ್ಬಿತಾಯ, ಕೊಡ್ವಟರಾಯ (ಕಡಟರಾಯ), ಅಗ್ಗಿತ್ತಾಯ, ಕಜೆಕೊಡಿನಾಯ, ರೆದೆಮೂರಾಯ, ಕುದುರಾಯ, ಬಳ್ಳಂಣ್ಣಾಯ, ಗಂಜಿತ್ತಾಯ, ಬಾರಿತ್ತಾಯ, ಪೊಯ್ಯತ್ತಾಯ, ಕೊಡಿಶಿಲ್ಲಾಯ, ಉಚ್ಚಿಲಣ್ಣಾಯ, ಇಲ್ಲಡಿತಾಯ, ಮಿತ್ತಡ್ಕತ್ತಾಯ, ಪಾಂಗಣ್ಣಾಯ, ಆತಿಮೂರಾಯ, ಕುದುರೆತ್ತಾಯ, ಅಂಣಕುಂಜತ್ತಾಯ ಅಂಬಿತಾಯ, ಕನ್ನಪಾಡಿ

ತ್ತಾಯ, ಕಂಬರಣ್ಣಾಯ, ಪೆಡಂಗಾಯ, ಮುಲಿಪಾಡಿತ್ತಾಯ, ಮೂಡುಪಡಿಕತ್ತಾಯ, ಪರಿಕತ್ತಾಯ, ಮಂಜರೋಡಿತ್ತಾಯ, ಪಡುಕಣ್ಣಾಯ, ನಿಂಜೂರಾ

ತುಳುಬ್ರಾಹ್ಮಣರಲ್ಲಿ ಆಚಾರ್ಯ, ಉಪಾಧ್ಯಾಯ, ಸೋಮಯಾಜಿ, ದೀಕ್ಷಿತ, ಶ್ಯಾನುಭಾಗ, ದಾಸ, ರಾವ್, ಪಟ್ಟಾಭಿ, ಮಧ್ಯಸ್ಥ, ಶರ್ಮ, ಶಾಸ್ತ್ರಿ, ಅಡಿಗ, ಅವಧಾನಿ ಎಂಬ ಮೇಲ್ ಹೆಸರುಗಳೂ, ಇವೆ. ಮುಡಿ, ಹಡಪ, ಮಡಿಕೊಳ, ಸೂರ, ಖರಬ, ಉಪ್ಪೂರ, ವರ್ಣ, ಹಳ್ಳರ, ಕೊಡಗಿ, ಉಳ್ಳೂರ ಎಂಬ ಹೆಸರುಗಳೂ ಕಂಡುಬರುತ್ತವೆ.

## 5 ಇತರ ನಾಮಧೇಯಂಗಳು

ಕುರುಬರ ವರ್ಗದಲ್ಲಿ ಹೆಗ್ಗಡೆ, ಗೌಡವೆಂದೂ, ಒಕ್ಕಲಿಗರಲ್ಲಿ ಗೌಡವೆಂದೂ, ಸೇರ್ವೆಗಾರರಲ್ಲಿ ಕ್ಷತ್ರಿಯ, ನಾಯಕ, ಅಯ್ಯ, ಶೇರಿಗಾರ ಮತ್ತು ರಾವು ಎಂಬ ಹೆಸರುಗಳೂ, ಪಾಂಚಾಲರಿಗೆ ಆಚಾರಿ ಎಂದೂ, ಚೆಪ್ಪೆಗಾರರಲ್ಲಿ ನಾಯಕ್ ಮತ್ತು ಶೆಣೈಯೆಂದೂ, ಜರೋಡಿಯವರಲ್ಲಿ ನಾಯ್ಕನೆಂದೂ, ಗುಡಿಗಾರರಲ್ಲಿ ಸೆಟ್ಟಿ ಎಂದೂ, ಕಾಡು ಕೊಂಕಣದಲ್ಲಿ ನಾಯ್ಕವೆಂದೂ, ದೇವಾಂಗರಲ್ಲಿ ಚೆಟ್ಟಿ ಎಂದೂ, ನೇಯ್ಕಾರರಲ್ಲಿ ಸೆಟ್ಟಿಗಾರನೆಂಬುದಾಗಿಯೂ, ಕುಂಬಾರರಲ್ಲಿ ಹಂದವೆಂದೂ, ಹಳೆಪೈಕರಲ್ಲಿ ಪೂಜಾರಿ ಎಂದೂ, ಇನ್ನಿತರರಲ್ಲಿ, ಓಡಾರಿ, ಖಾರ್ವಿ, ಮಡಿವಾಳ, ಕೆಲಸಿ (ಭಂಡಾರಿ) ಕೊಡಿಯ, ಕುಡುಬಿ, ಕೊಟ್ಟಾರಿ, ಮ್ಯಾಲಿ, ಮಾಲಿಯ, ದೋಲಿಯ, ಮೂಲ್ಯ, ಸಪ್ಪಳಿಗ, ಒಡೆಯ, ನಾರಿಗ, ದೇವಡಿಗ, ಗಾಣಿಗ, ಬಂದಿಗ, ಶೇರಿಗಾರ, ಮೇಸ್ತ್ರಿ, ವೈದ್ಯ, ಯಡೆಯಾಲ, ಕನಡ, ಜೋಗಿ, ಜೆಟ್ಟಡ, ಬಾಕುಡ, ಇತ್ಯಾದಿ ಕೌಟುಂಬಿಕ ಹೆಸರುಗಳಿವೆ.

## 6 ಗೌಡ ಸಾರಸತ್ವರು

ಕಾಮತ, ನಾಯಕ, ಕಿಣಿ, ಪ್ರಭು, ಹೆಗ್ಗಡೆ, ಬಾಳಿಗ, ಪೈ, ಪಡಿಯಾರ, ಭಂಡಾರಿ, ಶೆಣೈ, ಮಲ್ಯ, ಕುಡುವ, ಶ್ಯಾನುಭಾಗ, ಭಕ್ತ, ಪುರಾಣಿಕ, ಭಟ್ಟ, ಪಂಡಿತ, ರಾವ್, ಆಚಾರ್ಯ, ಜ್ಯೋಶಿ, ಗಡಿಯಾರ, ಅವಧಾನಿ.

## 7 ಸಾರಸತ್ವರು

ಕರಣಿ, (ನಾಡ ಕರಣಿ) ಶ್ಯಾನುಭಾಗ, ಭಟ್ಟ, ರಾವ್, ಶೆಣೈ,

ಮೇಲಿತ್ತ ಹೆಸರುಗಳನ್ನು ಜಾತಿಗೆ, ಉದ್ಯೋಗಕ್ಕೆ ಮತ್ತು ಗೌರವಕ್ಕೆ ಸಂಬಂಧಿಸಿದವುಗಳೆಂದು ಮೂರು ವಿಭಾಗಳಾಗಿ ಮಾಡಬಹುದು. ಈಗ ಜಾತಿ ಸಂಬಂಧವಾದ ಹೆಸರುಗಳನ್ನು ಬರೆಯುವುದು ಬಹಳ ವಿರಳವಾಗಿದೆ. ಗೌರವಾರ್ಥವಾಗಿಯೂ ಪದವಿಯಿಂದಲೂ ಹೆಸರುಗಳು ಹೇಗೆ ಬಂದುವೆಂಬುದನ್ನು ಅನುಬಂಧದಲ್ಲಿ ಕಾಣಬಹುದ.

Proper names consist of three parts:-First,village names;Secondp roper nouns; and Third cast,profession, and honorific names. It is not however an invariable rule that the first name is taken from a village; it is sometimes taken from a proper name· Likewise it must be understood that but a very small proportion of the terms indicating distinations of caste are employed as third names ]

ಈ ವಿವರವು ಪರಿಪೂರ್ಣವೂ,ಸಂಪೂರ್ಣವೂ ಆಗಿದೆಯೆಂಬ ಭರವಸೆ ನನಗಿಲ್ಲ. ಸಾಮಾನ್ಯ ದಾಖಲೆಗಳ ಆಧಾರದಿಂದ ನಿರೂಪಣೆ ಮಾಡಿದ್ದೇನೆ. ಈ ಲೇಖನದ ವಸ್ತುವೇ ಆಳವಾದ ಅಭ್ಯಾಸಕ್ಕೆ ಯೋಗ್ಯವಾದುದಾಗಿದೆ. ಒಂದು ಸಂಗತಿಯು ಈಗ ಸ್ಪಷ್ಟವಿದೆ. ಆಧುನಿಕ ಹೆಸರುಗಳಿಂದ ನಮಗೆ ಈಗ ಯಾವ ನಿರ್ಧಾರಗಳನ್ನು ಮಾಡುವುದಕ್ಕೂ ಸಾಧ್ಯವಿಲ್ಲ. ಈಗ ನಾವಿಡುವ ಹೆಸರುಗಳು ಜಾತಿಯನ್ನಾಗಲೀ,ಉದ್ಯೋಗವನ್ನಾಗಲೀ ತಿಳಿಸುವುದಿಲ್ಲ. ಬ್ರಾಹ್ಮಣರ ಅನೇಕ ಕುಲನಾಮಗಳು ಈಗ ಮರೆತೇ ಹೋಗಿವೆ. ಮಾಡುವ ಕರ್ತವ್ಯಕ್ಕನುಗುಣವಾಗಿ ಹಿಂದಿನ ಕೌಟುಂಬಿಕ ಹೆಸರುಗಳಿದ್ದುವೆಂಬುದರಲ್ಲಿ ಸಂದೇಹವಿಲ್ಲ.

# ತುಳುನಾಡಿನಲ್ಲಿ ಜೈನಧರ್ಮ

ತುಳುನಾಡಿನ ಚರಿತ್ರೆಯಲ್ಲಿ- ಸಾಮಾಜಿಕವಾಗಲೀ, ರಾಜಕೀಯವಾಗಲೀ, ಧಾರ್ಮಿಕವಾಗಲೀ--ಜೈನರ ಕುರಿತು ವಿವರವನ್ನು ಕೊಡುವುದು ಅತ್ಯಗತ್ಯವಾಗಿದೆ. ಕಾರಣವನ್ನು ಸ್ಪಷ್ಟೀಕರಿಸಲು ಕಷ್ಟವಿರಲಾರದು. ಪ್ರಾಚೀನತೆಯಲ್ಲಿ ಅವರು ತುಳುನಾಡಿನ ಪ್ರಥಮ ಹಂತದ ಬ್ರಾಹ್ಮಣರಷ್ಟೇ ಹಿರಿಯರು. ಸಾಮಾಜಿಕ ದೃಷ್ಟಿಯಲ್ಲಿ ವಿವೇಚಿಸುವುದಾದರೆ ಜೈನ ಧರ್ಮದ ಪ್ರಭಾವವು ನಮ್ಮ ನಾಡಿನ ಆಹಾರ, ಆಚಾರ, ಇತ್ಯಾದಿಗಳ ಮೇಲೆ ಗಣನೀಯವಾಗಿದ್ದುದು ಕಂಡು ಬರುತ್ತದೆ. ಬ್ರಾಹ್ಮಣರ ಮೇಲಂತೂ ಜೈನ ಧರ್ಮವು ತುಂಬಾ ಪ್ರಭಾವಿತವಾಗಿತ್ತು. ದಕ್ಷಿಣ ಕನ್ನಡದ ಕಲಾ ಕ್ಷೇತ್ರದಲ್ಲಿಯ ನೈಪುಣ್ಯವಾಗಲೀ ಶ್ರೇಷ್ಠತೆಯಾಗಲೀ ಜೈನರ ಮೇಲೆ ಹೊಂದಿಕೊಂಡಿತ್ತು. ರಾಜಕೀಯದಲ್ಲಂತೂ ಅವರು ಕ್ರಿ.ಶ. 18ನೆಯ ಶತಮಾನದ ವರೆಗೆ ಪ್ರಕಾಶವಂತರಾಗಿದರು. ಆದರೂ ಇಷ್ಟರ ತನಕ ಅವರ ವಿಮರ್ಶೆ ಬಾರದಿರಲು ಕಾರಣವೇನೆಂದು ಓದುಗರು ಪ್ರಶ್ನಿಸಬಹುದು. ಈ ಪುಸ್ತಕದಲ್ಲಿ ನಾನು ನಮ್ಮ ನಾಡಿನ ಸಮಾಜದ ಪ್ರಧಾನ ನಿರ್ಮಾಪಕರ ಮೂಲದ ಕುರಿತಾದ ಪರಿಶೋಧನೆಯನ್ನು ಮಾತ್ರ ಮಾಡಲು ಯತ್ನಿಸ್ದೇನೆಯೇ ವಿನಾ, ಸಮಾಜದ ಎಲ್ಲಾ ವಿವರಗಳನ್ನು ಕೂಲಂಕಷವಾಗಿ ಚರ್ಚಿಸುವ ಅಗಾಧ ಪ್ರಯತ್ನಕ್ಕಿಳಿಯಲಿಲ್ಲ. ಜೈನರಲ್ಲಿ ಹೆಚ್ಚಿನವರು ಮೂಲದಲ್ಲಿ ನಾಡವರಾಗಿದ್ದವರು ಎಂಬುದಾಗಿ ಚರಿತ್ರೆ ತಿಳಿಸುತ್ತದೆ. ಈ ನಾಡವರೇ ಮತಾಂತರ ಹೊಂದಿ ಜೈನರಾದರು. ನಾಡವರ ಮೂಲವನ್ನು ಹಿಂದಕ್ಕೆ ವಿಮರ್ಶೆ ಮಾಡಿದ್ದೇನೆ. ತುಳುನಾಡಿನ ಜೈನರಲ್ಲಿ ಏನು ವೈಶಿಷ್ಟ್ಯವಿದೆ ಎಂಬುದನ್ನು ಮಾತ್ರ ಇಲ್ಲಿ ಕೊಡಲು ಬಯಸುತ್ತೇನೆ.

ಜೈನ ಧರ್ಮವು ನಮ್ಮ ನಾಡಿನಲ್ಲಿ ಎಂದಿನಿಂದ ಬೇರೂರಿತು ಎಂಬುದು ಹಿರಿದಾದ ಹಾಗೂ ಗುರುತರವಾದ ಪ್ರಶ್ನೆಯಾಗಿದ್ದರೂ, ಇಷ್ಟರ ತನಕ ನಮಗೆ ದೊರೆತ ಆಧಾರಗಳಿಂದ, ಅದು ಕನಿಷ್ಟಪಕ್ಷ ಕ್ರಿ. ಪೂ. 3ನೆಯ ಶತಮಾನದಿಂದ ಆರಂಭವಾಗಿದ್ದಿರಬೇಕೆಂದು ತಿಳಿದು ಬರುತ್ತದೆ. ಶ್ರೀ ಗೋವಿಂದ ಪೈಗಳು ಈ ರೀತಿಯಾಗಿ ಅಭಿಪ್ರಾಯ ಪಟ್ಟುದು ನನಗೂ ಸಮ್ಮತವಿದೆ. "ಜೈನ ಧರ್ಮದ ಅಂತಿಮ ಶ್ರುತ ಕೇವಲಿಯಾದ ಭದ್ರಬಾಹು ಎಂಬಾತನು ಉಜ್ಜಯಿನಿಯಲ್ಲಿ ೧೨ ವರ್ಷಗಳ ಬರಗಾಲವು ಬರುತ್ತದೆಂಬುದನ್ನು ಮುಂದರಿತು, ಜೈನಸಂಘವನ್ನು ದಕ್ಷಿಣ ಭಾರತಕ್ಕೆ ಕೊಂಡು ಬಂದನೆಂದಿದೆ. (................ಭದ್ರಬಾಹು ಸ್ವಾಮಿನಾ ಉಜ್ಜಯಿನ್ಯಾಮಷ್ಟಾಂಗಮಹಾನಿಮಿತ್ತ ತತ್ವಜ್ಞೇನ ತ್ರೈಕಾಲದರ್ಶಿನಾ ನಿಮಿತ್ತೇನ

ದ್ವಾದಶಸಂವತ್ಸರಕಾಲವೈಷಮ್ಯಮುಪಲಭ್ಯ ಕಥಿತೇ ಸರ್ವಸಂಗಉತ್ತರಾಪಥಾತ್ ದಕ್ಷಿಣಾಪಥಂ ಪ್ರಸ್ಥಿತಃ—ಶ್ರವಣಬೆಳ್ಗೊಳ ನಂ. 1ನೆಯ ಶಾಸನ — ಕ್ರಿ. ಶ. ಸುಮಾರು 600 ('Epigraphia Carnatica' Vol II) ಆತನು ಇನ್ನು ತನ್ನ ಜೀವಿತ ಶೇಷವು ಕೊಂಚವಷ್ಟೆ ಉಳಿದಿದೆ ಎಂಬುದನ್ನು ಮುಂಗಂಡು, ತಾನು ಶ್ರವಣಬೆಳ್ಗೊಳದಲ್ಲಿಯೇ ತಂಗಿಕೊಂಡು, ತನ್ನೊಂದಿಗೆ ಕರೆದೊಯ್ದ ಜೈನ ಸಂಘವನ್ನು ಇನ್ನೂ ದಕ್ಷಿಣದಲ್ಲಿರುವ ಚೋಳ ಪಾಂಡ್ಯಾದಿ ದೇಶಗಳಿಗೆ ಮುಂದರಿಸಿ ಕಳುಹಿಸಿ ಕೊಟ್ಟು, ತಾನು ಶ್ರವಣಬೆಳಗೊಳದಲ್ಲಿಯ ಹಿರಿಯ ಚಂದ್ರಗಿರಿಯಲ್ಲಿ ಮುಕ್ತನಾದನೆಂದೂ, ಅಲ್ಲಿಂದ ಮುನ್ನಡೆದ ಸಂಘವು ದಕ್ಷಿಣ ಭಾರತದ ಹಲವೆಡೆಗಳಲ್ಲಿ ಸಂಚರಿಸಿ ಜೈನಧರ್ಮವನ್ನು ಆಯಾ ದೇಶಗಳಲ್ಲಿ ಸಾರಿ, ಉತ್ತರ ಭಾರತದಲ್ಲಿಯ ಕ್ಷಾಮವು ಮುಗಿದ ಬಳಿಕ ಅತ್ತ ಕಡೆಗೆ ಮರಳಿತೆಂದೂ, ಐತಿಹ್ಯವಿದೆ. ಇದೇನೂ ಕೇವಲ ದಂತಕತೆಯಲ್ಲ. ಐತಿಹಾಸಿಕ ವಿಷಯವೇ. ಇದು ಸಂಭವಿಸಿದ ಕಾಲವನ್ನು ಕುರಿತು ಪಾಶ್ಚಾತ್ಯ ವಿದ್ವಾಂಸರೂ, ಏತದ್ದೇಶಿಯ ವಿದ್ವಾಂಸರೂ ಕ್ರಿ. ಪೂ. 3ನೆಯ ಶತದಲ್ಲಿ, ಮೌರ್ಯ ಚಕ್ರವರ್ತಿಯಾದ ಚಂದ್ರಗುಪ್ತನ ಆಳ್ವಿಕೆ(ಕ್ರಿ. ಪೂ. 324—301) ಕೊನೆಯಲ್ಲಿ ಭದ್ರಬಾಹು ಜೈನ ಸಂಘದೊಂದಿಗೆ ದಕ್ಷಿಣ ಭಾರತಕ್ಕೆ ಇಳಿತಂದನೆಂದು ನಂಬುವರಾದರೂ, ಹಲಕಾರಣಗಳಿಂದ ಅವರ ಈ ಕಾಲ ನಿರ್ಣಯಕ್ಕೆ ನನ್ನ ಮನಸ್ಸು ಒಡಂಬಡದು. ಆದರೆ ಆ ಕಾಲ ನಿರ್ಣಯದ ವಿಷಯದಲ್ಲಿ ನನಗುಳ್ಳ ಅಭಿಪ್ರಾಯವನ್ನು ಸಾಧಾರವಾಗಿ ವ್ಯಕ್ತಗೊಳಿಸಲಿಕ್ಕೆ ಈ ಲೇಖವು ಅಸ್ಥಾನವೆಂಬುದರಿಂದಲೂ, ನನ್ನಾಭಿಪ್ರಾಯವನ್ನು ಪ್ರಕಟಿಸುವ ವರೆಗೆ ಇತಿಹಾಸದಲ್ಲಿ ಪ್ರತಿಪನ್ನವಾಗಿರುವ ನಿರ್ಣಯವನ್ನು ಆಧರಿಸಬೇಕೆಂಬುದರಿಂದಲೂ, ಜೈನ ಧರ್ಮವು ದಕ್ಷಿಣ ಭಾರತಕ್ಕೆ ಪ್ರಥಮತಃ ಬಂದುದು ಕ್ರಿ. ಪೂ. 3ನೆಯಶತಕದಲ್ಲಿಯೇ ಎಂದಿಟ್ಟುಕೊಳ್ಳೋಣ. ಶ್ರವಣಬೆಳ್ಗೊಳದ ಪ್ರಾಂತಗಳಲ್ಲಿ ಆ ಧರ್ಮವು ಹಬ್ಬಿದ ಬಳಿಕ ಅಲ್ಲಿಂದ ನಮ್ಮಾ ತುಳುನಾಡಿಗೆ ಬರುವರೆ ಅದಕ್ಕೆ ಹೆಚ್ಚು ಕಾಲ ಬೇಕೆಂದಿಲ್ಲ—ಎಂಬುದರಿಂದ ಅದು ಹೆಚ್ಚೆಂದರೆ ಕ್ರಿ. ಪೂ. 3ನೆಯ ಶತಕದ ಅಂತ್ಯದೊಳಗೆ ನಮ್ಮಾ ದೇಶದಲ್ಲಿ ನೆಲಸದಿರಲಾರದು. ಭದ್ರಬಾಹುವಿನ ಶಿಷ್ಯನಾದ ವಿಶಾಖಾಚಾರ್ಯನು. ಗುರುವಿನಿಂದ ನಿರ್ದಿಷ್ಟನಾಗಿ ಚೋಳ, ಪಾಂಡ್ಯಾದಿ ದೇಶಗಳಿಗೆ ಜೈನ ಸಂಘವನ್ನು ಕೊಂಡೊಯ್ದುದರಿಂದ, ಕ್ರಿ.ಪೂ. 3ನೆಯ ಶತಕದಲ್ಲಿ ಜೈನಧರ್ಮವು ಆ ದೇಶಗಳನ್ನು ಸೇರಿರಬೇಕಷ್ಟೆ. ಬಹಳ ಹಿಂದಣ ಕಾಲದಿಂದ ನಮ್ಮಾ ತುಳುನಾಡಿಗೂ ಪಾಂಡ್ಯ ದೇಶಕ್ಕೂ ಸಮುದ್ರ ವ್ಯಾಪಾರದ ಸಂಬಂಧವಿದ್ದುದರಿಂದ, ಅಲ್ಲಿಂದ ಕೂಡಾ ಜೈನಧರ್ಮವು ಕ್ರಿ. ಪೂ. 2ನೆಯ ಶತಕದೊಳಗೆ ಇಲ್ಲಿಗೆ ಬಾರದಿರಲಾರದು.

ಅತಿ ಪ್ರಾಚೀನ ಕಾಲದಿಂದಲೂ ಮೈಸೂರು ರಾಜ್ಯಕ್ಕೂ ನಮ್ಮ ತುಳುನಾಡಿಗೂ ಪರಸ್ಪರ ಸಂಬಂಧವಿದ್ದುದು ಕಂಡುಬರುತ್ತದೆ. ಅದರಿಂದಾಗಿ ಕ್ರಿ. ಪೂ. 3ನೆಯ ಶತಮಾನದಲ್ಲಿ ಬೆಳ್ಗೊಳದಲ್ಲಿ ಹರಡಿದ್ದ ಜೈನ ಧರ್ಮವು, ಒಂದು ಶತಮಾನದ ಅನಂತರದಲ್ಲಿ ಹರಡಿರಬೇಕೆಂಬ ಶ್ರೀ ಗೋವಿಂದ ಪೈಗಳ ನಿರ್ಧಾರವು ಸಮಂಜಸವೇ ಸರಿ. ನಾನೀ ಮೊದಲು ಬ್ರಾಹ್ಮಣರ ಆರಂಭದ ಆಗಮನವು ಕ್ರಿ. ಪೂ. 3ನೆಯ ಶತಮಾನದಲ್ಲಾಗಿರಬೇಕೆಂಬುದಾಗಿ ನಿರ್ಧರಿಸಿದ್ದೆ. ಹಾಗಾದರೆ ಬ್ರಾಹ್ಮಣ್ಯವೂ, ಆರ್ಹಂತ ಮತವೂ (ಜೈನಧರ್ಮ) ನಮ್ಮ ತುಳುನಾಡಿನಲ್ಲಿ ಒಟ್ಟೊಟ್ಟಿಗೆ ಪ್ರಚಾರವಾಗಿ ಪರಸ್ಪರ ಪ್ರಭಾವಕ್ಕೊಳಗಾಗಿರಬೇಕೆಂಬುದರಲ್ಲಿ ಸಂದೇಹವಿಲ್ಲ. ಈ ಜೈನ ಮಹನೀಯರು ಧರ್ಮದಕ್ಷರೂ, ದಯಾನಿಧಿಗಳೂ, ವ್ಯಾಪಾರ ಕುಶಲರೂ, ಸಂಸ್ಕೃತ, ಪ್ರಾಕೃತ ಮೊದಲಾದ ಭಾಷೆಗಳಲ್ಲಿ ಅದ್ವಿತೀಯ ವಿದ್ವಾಂಸರೂ ಆಗಿದ್ದರು. ಆದುದರಿಂದಲೇ ಕಾಲಕ್ರಮೇಣ ನಮ್ಮ ತುಳುನಾಡಿನ ಪ್ರಮುಖ ಸಮಾಜ ವರ್ಗವಾದ ಬಂಟರ (ನಾಡವರ) ಮತಾಂತರವಾಗಲು ಕಾರಣವಾಯಿತು.

ಹೊಯ್ಸಳ ಬಲ್ಲಾಳನಾದ ವಿಷ್ಣುವರ್ಧನನು ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಮತವನ್ನು ಅವಲಂಬಿಸಿ ವೈಷ್ಣವನಾದ ಅನಂತರ (ಎಂದರೆ ಕ್ರಿ. ಶ. 1137) ಪಟ್ಟಿಹುಮ್ಮಚ್ಚದಲ್ಲಿ ಆಳುತ್ತಿದ್ದ ಭೈರಸ ಒಡೆಯರು ತುಳುವದ ಕಾರ್ಕಳಕ್ಕೆ ವಸಾಹತು ಬಂದು ಅಲ್ಲಿ ತಮ್ಮ ರಾಜಧಾನಿಯನ್ನು ನಿರ್ಮಿಸಿದರು. ಈ ಕಾಲಾವಧಿಯ ಅನಂತರ ಹೊಯ್ಸಳ ರಾಜ್ಯದಿಂದ ಅನೇಕ ಜೈನರ ತಂಡಗಳು ತುಳುವಕ್ಕೆ ಬಂದು ನೆಲೆನಿಂತವು. ಹನ್ನೆರಡನೆಯ ಶತಕದಿಂದ 16ನೆಯ ಶತಕದ ವರೆಗೆ ಜೈನರಾಳ್ವಿಕೆಯಲ್ಲಿ ಜೈನ ಕಲೆಯು ಪ್ರಾದುರ್ಭಾವ ಹೊಂದಿತು.

ಜೈನರು ಮೊತ್ತಮೊದಲು ವ್ಯಾಪಾರಕ್ಕಾಗಿ ನಮ್ಮ ನಾಡಿನಲ್ಲಿ ನೆಲೆಸಿದರೆನ್ನಬೇಕು. ಇವರೇ ಶ್ರೇಷ್ಠಿಗಳು (ಶೆಟ್ಟಿಗಳು) ಕಾಲಕ್ರಮೇಣ ಈ ನಾಡಿನಲ್ಲಿ ಹೆಚ್ಚಿನ ಮತಾಂತರವು ನಡೆಯಿತು. ಜೈನರಲ್ಲಿ ಹೀಗೆ, ಎರಡು ಪ್ರಭೇದಗಳಿವೆ.

1. ಪೇಟೆಯವರು (ಶ್ರೇಷ್ಠಿಗಳು ಯಾ ಸೆಟ್ಟಿಗಳು) ಹೊರಗಿಣಿಂದ ಬಂದ ಪರಿಶುದ್ಧ ಜೈನರು.

2. ಹಳ್ಳಿಯವರು (ಮತಾಂತರ ಹೊಂದಿದ ಜೈನರು)– ಈ ಮತಾಂತರದ ಲಕ್ಷಣ ಇವರಲ್ಲಿ ಇಂದಿಗೂ ಕಂಡುಬರುತ್ತದೆ. ಮತಾಂತರ ಹೊಂದುವ ಮೊದಲು ಅವರಲ್ಲಿದ್ದ ಭೂತಪೂಜೆ ಇಂದಿಗೂ ಇದೆ. ಅವರಲ್ಲಿ ಸೂತಕ ಪಾತಕಾದಿಗಳು ಹಿಂದಿನಂತಿದೆ. ಮದುವೆ ಮೊದಲಾದ ಸಂಸ್ಕಾರಗಳು ಸಹ ಹಿಂದಿನಂತೆಯೇ ಇವೆ. ಮಾತ್ರವಲ್ಲದೆ ಅವರಲ್ಲಿ ಕಂಡುಬರುವ ಕೌಟುಂಬಿಕ ಹೆಸರುಗಳು ಸಹ ಹಿಂದಿನಂತೆಯೇ

ಇವೆ. ಈ ಕೌಟುಂಬಿಕ ಹೆಸರುಗಳ ಯಾದಿಯನ್ನು ಓದುಗರ ಅವಗಾಹನೆ ಬಗ್ಗೆ ಕೊಟ್ಟಿದ್ದೇನೆ.

ಚೌಟ, ಆಳ್ವ, ಪಕ್ಕಳ, ಅಜಿರಿ, ಬಂಗ, ಪಾಂಡಿ, ಅರಿಗ, ಕುದುರೆ, ಹೆಗ್ಗಡೆ, ಪೂರ್ಲ, ಅತಿಕಾರಿ, ಪೂಂಜ, ಸೇವಿತ, ಭಂಡಾರಿ, ಬಲ್ಲಾಳ, ಮುರಾಯ, ಪೂವಣಿ, ಕಡಂಬ, ಮುದ್ಯ, ಕಾಜವ, ಬಲಿಪ, ಮಲ್ಲ, ಪಡಿವಾಳ, ಯಾದವ, ಕಂಬಳಿ, ಬುಣ್ಣು, (ಭಿನ್ನಾಣಿ) ಕೊಟ್ಟಾರಿ, ಅರಸ, ಪಾಲ, ಸಾಮಣಿ, ಸಾಮಂತ, ತೋಳಾರ, ಭೋಜ, ರಾಜ, ಮತ್ತು ಸೆಟ್ಟಿ ಮತ್ತು ಪುರೋಹಿತರಾದ ಇಂದ್ರರು. ಸೆಟ್ಟಿ ಮತ್ತು ಇಂದ್ರ ಎಂಬ ಹೆಸರುಗಳು ಹೊರತಾಗಿ ಉಳಿದು ಬಂಟರಿಂದ ಬಂದುವುಗಳು. "ನಮ್ಮ ತುಳುನಾಡಿನಲ್ಲಿ ಪ್ರಾಚೀನ ಮತ್ತು ಅರ್ವಾಚೀನ ಬಸದಿಗಳು ಸುಮಾರು ೧೮೦; ಅವುಗಳಲ್ಲಿ ಮೂಡಬಿದ್ರೆಯಲ್ಲಿ ೧೮, ಕಾರ್ಕಳದಲ್ಲಿ ೧೮, ಬಂಟ್ವಾಳ ೩, ಹಾಡುವಳ್ಳಿ ೯, ಗೇರೆಸೊಪ್ಪೆ ೪, ವೇಣೂರು ೮, ಮೂಲ್ಕಿ ಹೊಸಂಗಡಿ ೮. ಇತರ ಕಡೆಗಳಲ್ಲಿ ೧೦೧, ಹೊಸದಾಗಿ ಆದ ಬಸದಿಗಳು ೧೧, ಒಟ್ಟು ಬಸದಿಗಳು ೧೮೦ ಅವುಗಳಲ್ಲಿ (1) ನರಿಬಂಡಹೊಳೆ (2) ಮೊಗರು (3) ದೇಶೀತ್ (4) ಶೀರಾಡಿ (5) ಏಣಿಗಲ್ಲು (6) ಕನ್ನರಪಾಡಿ (7) ಪಂಜ (8) ಚಿಕ್ಕಂಗಡಿ (9) ಬಂಡಾಡಿ (10) ಕೊಂಬಾರು (11) ನಂದಾವರ (12) ಉಚ್ಚಿಲ (13) ಉಲ್ಲಾಳ (14) ಮೂಲ್ಕಿ, ಹೊಸಂಗಡಿಯ ೮ ಬಸದಿಗಳಲ್ಲಿ ೫ ಬಸದಿಗಳು ಹೀಗೆ ಸುಮಾರು ೧೮ ಬಸದಿಗಳು ಸಂಪೂರ್ಣವಾಗಿ ನಾಶವಾಗಿವೆ."

ಧವಲಾದಿ ಸಿದ್ಧಾಂತಗಳು ಇರುವುದರಿಂದ ಪುಣ್ಯ ಕ್ಷೇತ್ರವೂ, ಜೈನ ಮತಾಲಂಬಿಗಳಿಗೆ ಪೂಜ್ಯಸ್ಥಾನವಾಗಿರುವುದರಿಂದ 'ಜೈನ ಕಾಶಿ' ಎಂಬುದಾಗಿಯೂ, ವೇಣುಪುರ, ವೃತಪುರ, ಮೂಡುಬಿದರೆ ಮೊದಲಾದ ನಾಮಾಂತರಗಳಿಂದಲೂ ಪ್ರಸಿದ್ಧವಾಗಿವೆ. ತುಳುನಾಡಿನ ಮೂಡುಬಿದ್ರಿ, ಕಾರ್ಕಳ ಮತ್ತು ವರಾಂಗ ಮಠಗಳು ಹುಂಬುಚ್ಚ ಮಠಕ್ಕೆ ಸೇರಿದ್ದಾಗಿವೆ.

ಸಾಮಾಜಿಕ ವ್ಯವಹಾರಗಳಲ್ಲಿ ಈ ಜೈನರು, ಸೆಟ್ಟಿಗಳು ಮತ್ತು ಪುರೋಹಿತರಾದ ಇಂದ್ರರೊಳಗೆ ಪರಸ್ಪರ ವಿವಾಹವಾಗುತ್ತಿರಲಿಲ್ಲ. ಪುರೋಹಿತರಲ್ಲಿ ತುಳು ಮತ್ತು ಕನ್ನಡ ವರ್ಗಗಳಿದ್ದು, ಅವರೊಳಗೂ ಪರಸ್ಪರ ವಿವಾಹಗಳಾಗುತ್ತಿದ್ದಿಲ್ಲ. ಆದರೆ ಈಗ ಈ ಸಾಮಾಜಿಕ ನಿಬಂಧನೆಗಳು ಎಷ್ಟೋ ಸಡಿಲಾಗಿವೆ.

ಇತರ ದೇಶಗಳಲ್ಲಿ ಮುಸುಲ್ಮಾನ ಮೊದಲಾದವರ ಆಳ್ವಿಕೆಯಲ್ಲಿ ಈ ಧರ್ಮಕ್ಕೆ ಹೆಚ್ಚಿನ ಬಾಧೆಗಳು ಸಂಭವಿಸಿದ್ದರೂ ನಮ್ಮ ತುಳುನಾಡಿನಲ್ಲಿ ಅಂಥ ಅಪಾಯಗಳು ಸಂಭವಿಸಲಿಲ್ಲ. ಅದಕ್ಕೇ ನಮ್ಮ ನಾಡಿನ ಪ್ರಾಚೀನ ಜಿನಾಲಯಗಳೇ ಪ್ರಮಾಣಗಳು.

ಗಿವೆ. ಈ ಕೆಲವು ಜಿನಾಲಯಗಳು ಹಿಂದೂ ದೇವಸ್ಥಾನಗಳಾಗಿ ಪರಿವರ್ತನೆಯಾದಂತೆ ಕಂಡುಬರುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ಮೆನ್ಯುವೆಲ್ಲಿನಲ್ಲಿ ಜೈನರ ಕುರಿತಾದ ಚಿಕ್ಕವಿವರವಿದೆ. ಅದರಲ್ಲಿ ಜೈನ ಧರ್ಮವು ಭೌದ್ಧ ಧರ್ಮದ ಒಂದು ಶಾಖೆ ಎಂಬುದಾಗಿ ಬರೆದುದು ಸರಿಯಲ್ಲ. ಆದರೆ ಜೈನರ ರೀತಿ, ನೀತಿ, ಆಚಾರ, ವಿಚಾರಗಳ ವಿಷಯವಾಗಿ ಈ ಕೆಳಗಿನ ವರ್ಣನೆ ಇರುವುದು ಸಮಂಜಸವಾಗಿದೆ.

"ತುಳುನಾಡಿನ ಜೈನರು ತಮ್ಮ ಉಡುಗೆ, ಪದ್ಧತಿ ಮತ್ತು ಆಚಾರಗಳಲ್ಲಿ ಬಂಟರನ್ನೆ ಹೆಚ್ಚಿನಂಶ ಹೋಲುತ್ತಾರೆ. ಬಂಟರಿಗಿಂತ ವಿಭಿನ್ನರಾಗಿರುವುದೆಂದರೆ ಯಜ್ಞೋಪವೀತಧಾರಣೆಯಲ್ಲಿಯೂ, ಮಾಂಸಾಹಾರ ತ್ಯಾಗದಲ್ಲಿಯೂ, ಅಮಲು ಪದಾರ್ಥಗಳ ಸೇವನೆಯನ್ನು ಮಾಡದಿರುವುದರಲ್ಲಿಯೂ, ಸೂರ್ಯಾಸ್ತಮಾನ ನಂತರ ಆಹಾರ ತೆಗೆದುಕೊಳ್ಳದಿರುವುದರಲ್ಲಿಯೂ ಆಗಿದೆ. ಅವರು ಉಪಯೋಗಿಸುವ ನೀರನ್ನು ಜಾಗ್ರತೆಯಿಂದ ಗಾಳಿಸುತ್ತಾರೆ. ಉದ್ದೇಶ ಪ್ರಾಣಿಹಿಂಸೆ ಮಾಡಬಾರದೆಂಬುದೇ ಆಗಿದೆ. ಅವರ ಮದುವೆ ಮತ್ತು ಉತ್ತರ ಕ್ರಿಯಾಪದ್ಧತಿಗಳು ಬಂಟರ ಕ್ರಮಗಳನ್ನೇ ಹೋಲುತ್ತವೆ. ಉತ್ತರ ಕ್ರಿಯೆಯಲ್ಲಿ ಹೆಚ್ಚಿನ ಅಂಶವೆಂದರೆ ಮೃತವಾದ 16ನೆಯ ದಿನದಂದು ಬಸದಿಯಲ್ಲಿ 'ಅಭಿಷೇಕ'ವನ್ನು ಮಾಡಿಸುವುದಾಗಿದೆ. ಅವರ ಹೆಸರುಗಳೂ, ಕೌಟುಂಬಿಕ ನಾಮಧೇಯಗಳೂ ಬಂಟರ ಹೆಸರುಗಳನ್ನೇ ಹೋಲುತ್ತವೆ."

ಮೇಲಿನ ವಿವರದಿಂದ ಡಾ. ಸಾಲೆತೂರರ ಜೈನ ಧರ್ಮವು ತುಳುನಾಡಿನಲ್ಲಿ ಕ್ರಿ. ಶ. 9ನೆಯ ಶತಮಾನದ ಅನಂತರವೇ ಪ್ರಚಾರವಾಗಿದ್ದಿರಬೇಕೆಂಬುದಕ್ಕೆ ತೃಪ್ತಿಕರವಾದ ಕಾರಣಗಳು ದೊರಕುವುದಿಲ್ಲ.

# ಸಮರ್ಥನೆ ಮತ್ತು ಸಮರ್ಪಣೆ

## — ಅ —

ವಿಲಿಯಂ ಲೋಗಾನರು ಬರೆದಿರುವ 'ಮಲಬಾರ್' ಎಂಬ ಗ್ರಂಥದಲ್ಲಿ ತುಳು ನಾಡೆಂದರೆ ಯಾವುದು ಎಂಬುದಾಗಿ ಸ್ಪಷ್ಟವಿದೆ:

"ಪರಶುರಾಮನು ತಾನು ಕರೆತರಿಸಿದ ಬ್ರಾಹ್ಮಣರು 64 ಗ್ರಾಮಗಳಲ್ಲಿ ನೆಲಸುವಂತೆ ಮಾಡಿದನು. ಮೊದಲ ಹತ್ತು ಗ್ರಾಮಗಳು ಗೋಕರ್ಣ, ಗೋಮಕೂಟ, ಕಾರವಳ್ಳಿ, ಪಲ್ಲೂರು, ಎಪ್ಪನೂರು, ಚೆಪ್ಪನೂರು, ಕಾಟಲೂರು, ಕಲ್ಲಿನ್ನೂರು, ಕಾರ್ಯಚ್ಚಿರ ಮತ್ತು ಪೈಯಚ್ಚಿರ, ಇವು ಹೊಸತಾಗಿ ನಿರ್ಮಿಸಿದ ಪ್ರದೇಶದ ತುತ್ತತುದಿಯಲ್ಲಿರುವುವು. ಅನಂತರದ ಹತ್ತು ಗ್ರಾಮಗಳು ಉತ್ತರ ಕನ್ನಡದಲ್ಲಿವೆ. ಅನಂತರದ ಗ್ರಾಮಗಳು ದಕ್ಷಿಣ ಕನ್ನಡದಲ್ಲಿವೆ. ಇವೆರಡೂ ಸೇರಿ ತುಳುನಾಡು ಈ ಗ್ರಾಮಗಳಾವುವೆಂದರೆ: ತ್ರಿಕ್ಕಣಿ, ತ್ರಿಕ್ಕಟ, ತ್ರಿಕ್ಕನ್ನಾಲ, ತ್ರಿಚ್ಚೋಳ, ಕೊಲ್ಲೂರು, ಕೋಮಲಂ, ವೆಲ್ಲಾರ, ವೆಂಗೊಟ್ಟ, ವೆಂಕಟಂ, ಚೆಂಗೋಟು, ಕೋಟೀಶ್ವರಂ. ಪಾಂಡೇಶ್ವರಂ, ಉಟುಪ್ಪು (ಉಡುಪಿ) ಶಂಕರ ನಾರಾಯಣ, ಕೋಟಂ, ಶಿವಳಿ, ಮೊರಪಂಚ, ವಿಠಲ, ಕುಮಾರ ಮಂಗಲ, ಅನಂತಪುರ, ಕನ್ನಪುರಂ (Malabar by Willium Logan Page 223) ಅದೇ ಗ್ರಂಥದ ಪುಟ 224ರಲ್ಲಿ ಮಲೆನಾಡಿನ್ನು ನಾಲ್ಕು ವಿಭಾಗಗಳಾಗಿ ಮಾಡಿದೆ ಎಂದೂ ಅವುಗಳು ತುಳು, ಕೂಪ, ಕೇರಳ, ಮೂಶಿಕ ರಾಜ್ಯಗಳೆಂದೂ ನಮೂದಿಸಿದೆ. ತುಳುರಾಜ್ಯವು ಗೋಕರ್ಣದಿಂದ ಪೆರುಂಪುಳ (ದೊಡ್ಡ ನದಿ)ದ ವರೆಗೆ ಉತ್ತರ ಮತ್ತು ದಕ್ಷಿಣ ಕನ್ನಡಗಳನ್ನು ಸೇರಿಕೊಂಡಿದೆ ಎಂದೂ ಅದರಲ್ಲಿ ಉಲ್ಲೇಖಿತವಾಗಿದೆ.

'ದಕ್ಷಿಣ ಕನ್ನಡದಲ್ಲಿ ಜೈನ ಧರ್ಮದ ಕುರುಹುಗಳು' ಎಂಬ ಶ್ರೀ ಶ್ರೀಪಾದ ರಾಮ ಶರ್ಮ ಎಂ.ಎ. ಪ್ರೊಫೆಸರ್, ಫರ್ಗೂಸನ್ ಕೋಲೇಜ್, ಪೂನಾ—ಇವರ ಲೇಖನದಲ್ಲಿ ತುಳುವವೆಂದರೆ ಯಾವುದು ಎಂಬುದರ ಗಣನೀಯ ಉಲ್ಲೇಖವಿದೆ. "ದಕ್ಷಿಣ ಕನ್ನಡವು ಆಡಳಿತಕ್ಕಾಗಿ ಇತ್ತೀಚೆಗೆ ಏರ್ಪಟ್ಟ ವಿಭಾಗ ಎಂಬುದನ್ನು ಎತ್ತಿ ಹೇಳಬೇಕಾಗಿಲ್ಲ. ಬ್ರಿಟಿಷರ ಆಡಳಿತೆಗೆ ಮುಂಚೆ ಈ ಜಿಲ್ಲೆಯು ದಕ್ಷಿಣ ಮತ್ತು ಉತ್ತರ ಕನ್ನಡವನ್ನೊಳಗೊಂಡ ಹೈವ ಕೊಂಕಣದ ಒಂದು ಭಾಗವಾಗಿದ್ದಿತು. ಹೈವ ಕೊಂಕಣವು ಪ್ರಾಚೀನ ತುಳುವ ರಾಜ್ಯದ ಅವಶಿಷ್ಟ. ತುಳುವ ರಾಜ್ಯದ ಎಲ್ಲೆಗಳು ನಾವು ಈಗ ಗ್ರಹಿಸುವುದಕ್ಕಿಂತಲೂ ವಿಶಾಲವಾಗಿದ್ದುವು. ಘಟ್ಟದ ಮೇಲೆ ಮೈಸೂರು,

ಸಂಸ್ಥಾನದಲ್ಲಿರುವ ನಗರಿ ಅಥವಾ ನಗರವು, ತುಳುವ ರಾಜ್ಯವನ್ನೊಳಗೊಂಡಿಲ್ಲವಾದರೂ, ನಗರ ಪಟ್ಟಣಕ್ಕೂ ನಮ್ಮ ಜಿಲ್ಲೆಗೂ, ಖಂಡಿತವಾಗಿಸವಿಾಪಸಂಬಂಧವಿತ್ತು. ಗೆರಸೊಪ್ಪೆ, ಭಟ್ಕಳ, ಕಾರ್ಕಳ, ಇವು ಮೂರು ಈಪ್ರದೇಶದ ರಾಜಕೀಯ ಅಧಿಕಾರದ ಮುಖ್ಯ ಕೇಂದ್ರಗಳಾಗಿದ್ದುವು. ಭಲ್ಲಾತರೀಪುರ ಮತ್ತು ಸುವರ್ಣಪುರಿ ಇವುಗಳ ಉಲ್ಲೇಖವು ಶಾಸನಗಳಲ್ಲಿದೆ. ಇವು ಪ್ರಾಯಶಃ ಗೆರಸೊಪ್ಪೆ ಮತ್ತು ಹೊನ್ನಾವರಗಳಾಗಿರಬಹುದು. ಮೂಡಬಿದರೆಯ ಹೊಸ ಬಸದಿಯ ಒಂದು ಶಾಸನದಲ್ಲಿ ಶ್ರೀಮಾನ್ ಮಹಾಮಂಡಲೇಶ್ವರ ಜಿನದಾಸ ಸಾಳ್ವ ಮಲ್ಲ ಮಹೀವಲ್ಲಭನ ಕುರಿತು ಹೀಗಿದೆ: "ತುಳುವದೇಶತಿಲಕಾಯಮಾನ ನಗರಿ ನಗರಸಿದ್ಧ ಸಿಂಹಾಸನಾಧಿಪತಿಯಾಗಿಸುವರ್ಣಪುರಿಯಿಂದ ಅಲಂಕೃತವಾದ ಹೈವಕೊಂಕಣ ರಾಜ್ಯಮಂ ಪ್ರತಿಪಾಲಿಸುತಿರ್ದಂ"

ಗೆರಸೊಪ್ಪೆಯನ್ನು ಒಂದು ಶಾಸನವು "ತೌಳವ ನಾಡಿನ ಹಣೆಯ ಕುಂಕುಮದ ಬೊಟ್ಟು"ಎಂದು ಕರೆದಿದೆ. ಮಾತ್ರವಲ್ಲದೆ ಮುಂದೆ ಕವಿಯ ಈ ಪ್ರಶ್ನೆಯನ್ನು ಮಂಡಿಸಿದ್ದಾನೆ.

.........................................................................

ಚೆಲುವ ತಾಳ್ದಿದ ಗೆರೆಸೊಪ್ಪೆ ನಗರಂ ಕೊಂಡಾಡಲಾರ್ಬಲ್ಲರೈ!

ಹಾಗಾದರೆ ಪ್ರಾಚೀನ ತುಳುನಾಡ ಉತ್ತರದಲ್ಲಿ ಗೋಕರ್ಣದಿಂದ, ದಕ್ಷಿಣದಲ್ಲಿ ಚಂದ್ರಗಿರಿ ಹೊಳೆ(ಪೆರುಂಪುಳ) ವರೆಗೂ, ಪೂರ್ವದಲ್ಲಿ ಪಶ್ಚಿಮ ಘಟ್ಟಗಳಿಂದ (ಸಹ್ಯಾದ್ರಿ) ಪಶ್ಚಿಮದಲ್ಲಿ ಅರಬಿ ಸಮುದ್ರದ ವರೆಗೂ ವಿಸ್ತರಿಸಿತ್ತು ಎಂಬುದರಲ್ಲಿ ಸಂದೇಹವಿಲ್ಲ. ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡಗಳು ಪ್ರತ್ಯೇಕವಾದುದು ಕ್ರಿ.ಶ.1862 ರಲ್ಲಿ (ತುಳುವದ ಪ್ರಧಾನ ಕೇಂದ್ರಗಳು: ಬನವಾಸಿ, ಬಟ್ಕಳ, ಗೆರಸೊಪ್ಪೆ, ಕಾರ್ಕಳ, ಬಾರಕೂರು ಮಂಗಳೂರು)

— ೮ —

ತುಳುವದ ಹೆಸರು ರಾಮಾಯಣ ಮಹಾಭಾರತ, ಮನುಧರ್ಮ ಶಾಸ್ತ್ರ, ವಿಷ್ಣುಪುರಾಣ ಮತ್ತು ಮಾರ್ಕಂಡೇಯ ಪುರಾಣ (The most secular of the Puranas)ಗಳಲ್ಲಿ ಕಂಡು ಬರುವುದಿಲ್ಲ.

1) ರಾಮಾಯಣದಲ್ಲಿ ಬರುವ ದಕ್ಷಿಣದ ರಾಷ್ಟ್ರಗಳು:--

ಮೇಖಲರು, ಉತ್ಕಲರು (ಒರಿಸ್ಸಾ), ದಶಾರ್ಣರು, ವಿದರ್ಭರು, ಋಷಿಕರು, ಮಾಹಿಷಕರು, ಮತ್ಸ್ಯರು, ಕಳಿಂಗರು, ಕೌಶಿಕರು, ಆಂಧ್ರರು, ಪುಂಡರು, ಚೋಳರು ಪಾಂಡ್ಯರು ಮತ್ತು ಕೇರಳರು.

2. ಮಹಾ ಭಾರತದಲ್ಲಿ ಉಲ್ಲೇಖವಿರುವ ಅನಾರ್ಯರಾಷ್ಟ್ರಗಳು:—

ಶಾಕರು, ಯವನರು, ಕಾಂಭೋಜರು, ದ್ರಾವಿಡರು, ಕಳಿಂಗರು ಪುಳಿಂದರು, ಊಷೀನರು, ಕೊಲಿಸರ್ಪರು, ಮೇಖಲರು, ಟಾಟರು,ಕೋನ್ವ ಶಿರಾರರು, ಶೌಂಡಿತರು, ದರ್ವರು, ಚೋಡರು, ಶವರರು, ಬರ್ಬರರು ಮತ್ತು ಕಿರಾತರು. ಮಹಾಭಾರತದ ಕೊನೆ ಭಾಗವಾದ ಹರಿವಂಶದಲ್ಲಿ ಚೋಳರ ಮತ್ತು ಕೇರಳರ ಉಲ್ಲೇಖವಿದೆ. ಆದರೆ ಈ ಹರಿವಂಶವು ಮಹಾಭಾರತದ ಉಳಿದ ಭಾಗಗಳಷ್ಟು ಪುರಾತನವಲ್ಲ.

3) ಮನುವಿನ ಗ್ರಂಥದಲ್ಲಿ ಬರುವ ಅನಾರ್ಯ ರಾಷ್ಟ್ರಗಳು.

ಪೌಂಡ್ರಕರು, ಓಡ್ರರು, ದ್ರಾವಿಡರು, ಕಾಂಭೋಜರು, ಯವನರು, ಶಾಕರು ಪಾರದರ, ಪಲ್ಲವರು,ಚೀನರು,ಕಿರಾತರು, ಹದರು, ಕಪರು ಇವುಗಳು ದಕ್ಷಿಣ ಹಿಂದೂದೇಶ ಜನಾಂಗಗಳನ್ನೂ ಹಿಂದೂದೇಶದ ಹೊರಗಣಿಂದ ಬಂದ ಪರಕೀಯರನ್ನೂ ತಿಳಿಸುತ್ತದೆ.

4] ವರಹಮಿಹಿರನ ದಕ್ಷಿಣಾತ್ಯರ ಹೆಸರುಗಳು:-

ಪಾಂಡ್ಯ, ಚೋಳ, ಕೇರಳ, ಕರ್ನಾಟಕ, ಕಳಿಂಗ ಮತ್ತು ಆಂಧ್ರ. ಅವನು ಕಂಚೀ (ಕಂಜೀವರಂ) ಮತ್ತು ಕಲಗೇರಿ (ಕ್ವಿಲನ್) ಎಂಬ ಎರಡು ಪಟ್ಟಣಗಳ ಹೆಸರುಗಳನ್ನೂ, ಲಂಕೆಯ (ಸಿಲೋನ್) ಹೆಸರನ್ನೂ ನಮೂದಿಸುತ್ತಾನೆ.

5] ಮಾರ್ಕಂಡೇಯ ಪುರಾಣದಲ್ಲಿ ದಕ್ಷಿಣ ಹಿಂದೂ ದೇಶಕ್ಕೆ ಸಂಬಂಧಿಸಿ ಬರುವ ಹೆಸರುಗಳ ಇಲ್ಲಿ ಸಂಪೂರ್ಣಯಾದಿಯನ್ನು ಕೊಟ್ಟಿದ್ದೇನೆ. ಕಾರಣ ಮಾರ್ಕಂಡೇಯ ಪುರಾಣದಷ್ಟು ಭೌಗೋಳಿಕ ಸ್ಥಿತಿಯನ್ನು ತಿಳಿಯುವರೆ ಸಹಾಯವಾಗುವ ಬೇರೆ ಪುರಾಣವಿಲ್ಲ. (ದಕ್ಷಿಣದಲ್ಲಿ) ಲಂಕಾ, ಕರಜೀನ, ಕೆಲಿಕ, ನಿಕಟ, ಮಲಯ, ದದುರ್ರ, ಕಾಕೋಟಕ, ಭೃಗೂಕಚ್ಛ, ಕೊಂಗಗ (ಕೊಂಕಣ),ಶವರ. ವೆನ್ನ, ಅವಂತೀ (ಉಜ್ಜೈನಿ), ದಶಾಪುರ, ಮಹೇಕಟ, ಕರ್ಣಾಟಕ, ಗೋಣಂದ, ಚಿತ್ರಕೂಟ (ಬಂದ), ಚೋಳ, ಕಲ್ಲಗೇರಿ, ಕ್ರಾಂಚ, ಜಠಾಧರ, ನಾಸಿಕ, ಯೋಜನ, ವೈಡೂರ್ಯ, ಕೊಲಿ (ಕೋಲರದೇಶ) ಚರ್ಮಪಟ್ಟಿ, ಗಣರಾಜ್ಯ, ಕೃಷ್ಣ, ಗೌಡ, ಋಷಭ, ಸಿಂಗಲ, ಕಂಚೀ, ತ್ರಿಲಿಂಗ (ತೆಲಿಂಗಾನ), ಕೂಂಜಿರ ಮತ್ತು ಕೂಂಜಿ, (ನೈಋತ್ಯದಲ್ಲಿ) ಕಾಂಭೋಜ, ಪನ್ಹವ, ವರವಮೂಖ, ಸಿಂಧೂ, ಸೆವೀರ, ಅನರ್ಥ, ವಣಿಕಮೂಖ, ಯವನ, ಸೇಗರ, ಶೂದ್ರ,ಕರ್ಣಪ್ರೋದ, ಬರ್ಬರ, ಕಿರಾತ, ಶಾರಥ, ಶಂಥ, ಪಾರ್ಶ್ವೇಶ್ವರ, ಕೇಲ, ಚೂಚೂಕ ಹೇಮಗಿರಿತ, ಸಿಂಧೂಕೇಲ, ರೈವತ, ಸೌರಾಷ್ಟ್ರ, ದರದ, ಮಹಾರ್ಣವ, (ಪಶ್ಚಿಮದಲ್ಲಿ) ಮಣಿಮೇಘ, ಶೂರಾದ್ರಿ, ಕಂಜೋನ, ಅಪರಾಂತ, ಹೈಹಯ (ನರ್ಮದೆಯ ಮೇಲಣ ಕಣಿವೆ), ಶಾಂತಿಕ,

ಅಹಿಚ್ಛತ್ರ, ಕೊಂಕಣ, ಪಂಚನದ, ವರಣ, ಪೌರದ, ತರಶೂ, ವ್ಯಾಂಗತ, ಸರ್ವರ ಪಶ್ಚಮೇಷ್ಟಕ, ಏಕೆಶ್ಯಾನ, ಶಾಪರೂಪ, ದೀರ್ಘಗ್ರೀವ ಮತ್ತು ಕೂಲಿಕ.

ಮೇಲಿನ ದೃಷ್ಟಾಂತಗಳಿಂದ ಈ ರಾಷ್ಟ್ರಗಳ ಹೆಸರುಗಳ ಯಾದಿಯಲ್ಲಿ 'ತುಳುವ' ವಾಗಲೀ, 'ತೌಳವ' ವಾಗಲೀ ಕಂಡು ಬರುವುದಿಲ್ಲ. ಇಲ್ಲಿ "ಶಾಂತಿಕ' ವೆಂದಿರುವ ಪ್ರದೇಶವನ್ನು ಶ್ರೀ ಗೋವಿಂದಪೈಗಳು ತುಳುನಾಡಿಗೆ ಅನ್ವಯಿಸುತ್ತಾರಾದರೂ, ಶಾಂತಿಕವು ತುಳುನಾಡಿಗೆ ಮೊದಲಿದ್ದ ಹೆಸರು ಎಂಬುದು ಸಂದೇಹಾಸ್ಪದವಾಗಿದೆ. ಕಾರಣ ಶ್ರೀ ಗೋವಿಂದ ಪೈಗಳ 'ಅನುಮಾನಿತ ಸತ್ಯ' (Hypoth—esis) ವು 'ಹೈಹಯ'ವನ್ನು ಉತ್ತರ ಕನ್ನಡಕ್ಕೆ ಹೋಲಿಸಿರುವುದರ ಮೇಲೆ ಆಧರಿಸಿಕೊಂಡಿದೆ.

ಅಪರಾಂತಿಕಾ ಹೈಹಯಾಶ್ಚ ಶಾಂತಿಕಾಃ ವಿಪ್ರಶಸ್ತಕಾಃ ।
ಕೊಂಕಣಾಃ ಪಂಚನದಕಾ ವಾಮನಾ ಹ್ಯವಹಾರಸ್ತಥಾಃ ।

ಇಲ್ಲಿ ಅಪರಾಂತಿಕವನ್ನು ಉತ್ತರ ದಕ್ಷಿಣ ಕೊಂಕಣಕ್ಕೂ, ಹೈಹಯವನ್ನು ಉತ್ತರ ಕನ್ನಡಕ್ಕೂ, ಶಾಂತಿಕವನ್ನು ದಕ್ಷಿಣ ಕನ್ನಡ (ಎಂದರೆ ತುಳುವ)ಕ್ಕೂ ಶ್ರೀ ಗೋವಿಂದ ಪೈಗಳು ಅನ್ವಯಿಸುತ್ತಾರೆ (ತೆಂಕನಾಡು— ಗೋವಿಂದ ಪೈಗಳ ತುಳುನಾಡು— ಪೂರ್ವಸ್ಮೃತಿ ಎಂಬ ಲೇಖನನ— ಪುಟ ೮-೯)

ಚುಟುಕಾಗಿ ವಿಮರ್ಶೆ ಮಾಡುವುದಾದರೆ: (1) ಮಾರ್ಕಂಡೇಯ ಪುರಾಣದಲ್ಲಿ ಉಲ್ಲೇಖಿತವಾಗಿರುವ ದೇಶಗಳ ಹೆಸರುಗಳು ಕ್ರಮಾಗತವಾಗಿ, ಒಂದರ ನಂತರ ಒಂದು ಒತ್ತೊತ್ತಾಗಿರುವಂತೆ ನಮೂದಿಸಲ್ಪಡಲಿಲ್ಲ. ಆದುದರಿಂದ ಹೈಹಯದೊಡನೆ ಶಾಂತಿಕವಿರಬೇಕೆಂದಿಲ್ಲ (2) ಹೈಹಯವು ಉತ್ತರ ಕನ್ನಡಕ್ಕೆ ಹಿಂದಿನ ಹೆಸರೆಂಬುದು ಅನುಮಾನಾಸ್ಪದವಾದುದು. ಕಾರಣ ಕಾರ್ತವೀರ್ಯಾರ್ಜುನನು ಹೈಹಯ ವಂಶದವನೆಂದ ತಿಳಿಯಲಾಗಿದೆ. ಮಾಹಿಷ್ಮತಿಯು ಕಾರ್ತವೀರ್ಯಾರ್ಜುನನ ರಾಜಧಾನಿ ಈ ಮಾಹಿಷ್ಮತಿಯು ಉತ್ತರಕನ್ನಡದಲ್ಲಿಲ್ಲ. ತ್ರಿಪುರಿಯ ಚೇದಿವಂಶದರಾಜರು ಹೈಹಯರೆಂಗು ವಾಡಿಕೆ ಇದೆ. ಬಾದಾಮಿಯ ಮಂಗಲೇಶನು ಹೈಹಯ ವಂಶದ ಬುದ್ಧರಾಜನನ್ನು ಗೆದ್ದು ತಂದ ಸಂಪತ್ತಿನಿಂದ ಮಹಾಕೂಟದ ಹತ್ತಿರ ವಿಜಯ ಸ್ತಂಭವನ್ನು ನಿಲ್ಲಿಸಿದನು. (ಕ್ರಿ. ಶ. ೫೯೭) ಚೇದಿಯ ಮನೆತನದ ಕನ್ಯೆಯರನ್ನು ಮಳಖೇಡಿನ ರಾಷ್ಟ್ರಕೂಟರು ಮದುವೆಯಾಗುತ್ತಿದ್ದರು. ಕಂನಾಡಿನಲ್ಲಿ ಹೈಹಯರು ಬಂದು ಕಂನಾಡವರೇ ಆಗಿಬಿಟ್ಟುದೂ ಉಂಟು. ಇಲ್ಲಿ ಆಳಿದ ಬಿಜ್ಜಳಾದಿ ಕಲಚೂರ್ಯರು ಹೈಹಯರು. ಕಾರ್ತವೀರ್ಯಾರ್ಜುನನ ವಂಶದವರೆಂದುಕೊಳ್ಳುವ ಕೆಲವು ಕ್ಷತ್ರಿಯರು ಈಗ ಈ ನಾಡಿನಲ್ಲಿದ್ದಾರೆ. (ಕನ್ನಡ ಕತೆ — ಪುಟಗಳು ೧೦೯–೧೧೦)

(3) ಕ್ರಿಸ್ತಾಬ್ದಿಯ ಮೊದಲಲ್ಲಿ ತುಳುನಾಡೆಂದರೆ ಉತ್ತರ ಮತ್ತು ದಕ್ಷಿಣ ಕನ್ನಡ ಗಳೆರಡೂ ಸೇರಿ ಭೂಗೋಳಿಕ (ಪ್ರಾದೇಶಿಕ) ಘಟಕ. ತುಳುನಾಡಲ್ಲಿ ಎಂದೂ ಹೈಹ ಯರಿರಲಿಲ್ಲ. ಆದುದರಿಂದ 'ಶಾಂತಿಕ'ವನ್ನು ತುಳುನಾಡಿಗಿದ್ದ ಮೊದಲ ಹೆಸರು ಎಂದು ಹೇಳುವುದು ಅಷ್ಟೊಂದು ಸರಿಯೆನಿಸುವುದಿಲ್ಲ.

ಸಹ್ಯಾದ್ರಿ ಖಂಡದಲ್ಲಿ ಬರುವ 'ಶೂರ್ಪಾರಕ'ವು ಪರಶುರಾಮ ಭೂಮಿಯೆಂದೂ, ಅದರ ಮೇರೆಗಳು ಉತ್ತರದಲ್ಲಿ ವೈತರಣೀ ನದಿಯಿಂದ (Thana District) ದಕ್ಷಿಣದಲ್ಲಿ ಕನ್ಯಾಕುಮಾರಿ ಭೂಶಿರದ ವರೆಗೂ, ಪಶ್ಚಿಮ ಘಟ್ಟಗಳಿಂದ ಪಡು ಕಡಲವರೆಗೂ ಚಾಚಿವೆ ಎಂದೂ ಸೂಚಿತವಾಗಿದೆ. ಈ ಶೂರ್ಪಾರಕದ ಕೇಂದ್ರ ಸ್ಥಳವು 'ಗೆರಸೊಪ್ಪೆ' ಯಾಗಿತ್ತೊ ಏನೋ? ಈ ಅನುಮಾನಿತ ಸತ್ಯವನ್ನು ಹೀಗೆ ವಿವರಿಸಬಹುದು. ಕೇರು—ಶೂರ್ಪಕರಣೆ ಎಂದರೆ ಮೊರ, ಗೆರಸಿ, ತಡ್ಪೆ (ತುಳು), ಶೂರ್ಪಕರಣ ಸಾಧನವಾದ ಮೊರಕ್ಕೆ ಕೇರು ಎಂದುಹೆಸರು. ಶೂರ್ಪ ಎಂದರೆ ಕೇರು, ಸೊಪ್ಪೆ ಶೂರ್ಪದ ತದ್ಭವವಾಗಿದೆ. ಈಗ ಕೇರು ಎಂಬ ಅಚ್ಚ ಕನ್ನಡವೂ ಸೊಪ್ಪೆ ಎಂಬ ಶಬ್ದವೂ ಒಂದೇ ಅರ್ಥದಲ್ಲಿ ಒಟ್ಟುಸೇರಿ'ಶೂರ್ಪಾರಕ'ಎಂಬ ಪ್ರಾಚೀನವಾದ ಸ್ಥಳದ ಹೆಸರಾಯಿತೆಂದು ಹೇಳ ಬಹುದು.

The Lost Lumuria ಎಂಬ W. Scott-Elliot ಇವರ ಗ್ರಂಥ ದಿಂದ ಗೋಕರ್ಣ ಮಂಡಲ ವಗ್ಯೆರೆ ಸಮುದ್ರದಲ್ಲಿ 9554 ಕ್ರಿ.ಪೂ. ಕಾಲದಲ್ಲಿ ಮುಳುಗಿತ್ತೆಂದೂ ಪಶ್ಚಿಮ ಕರಾವಳಿಯ ಸಹ್ಯ ಪರ್ವತದಲ್ಲಿ ಜ್ವಾಲಾಮುಖಿಗಳಿಂ ದಾಗಿ ಈ ಭೂಭಾಗ ನೀರಿನಲ್ಲಿ ಮುಳುಗಿತ್ತೆಂದೂ ಈ ಪ್ರದೇಶಕ್ಕೆ ಉಮೊರಿಕೆ ಎಂಬ ಹೆಸರಿತ್ತೆಂದೂ ತಿಳಿದು ಬರುತ್ತದೆ. ಅದರಲ್ಲಿ ಈ ಪ್ರದೇಶವನ್ನು 'Paradise The cradle of the humau race' ಎಂದು ಕರೆದಿದೆ. ವಿಲ್ಸ್ಸನರೆ ಚರಿತ್ರೆ ಪ್ರಥಮ ಭಾಗದ ಪುಟ 51 ರಲ್ಲಿ ತುಳುವವನ್ನು (ಎಂದರೆ ಗೋಕರ್ಣದಿಂದ ಮಲೆ ಯಾಳದ ವರೆಗೆ) 'ಲೂಮಾರಿಯು' ಎಂಬುದಾಗಿ ಪಾಶ್ಚಿಮಾತ್ಯ ಭೌಗೊಳಿಕ ಶಾಸ್ತ್ರ ಜ್ಞರು ಕರೆದಿದ್ದಾರೆಂದು ಕೊಟ್ಟಿದೆ.

ಹಾಗಾದರೆ ರಾಮಾಯಣ ಕಾಲದಲ್ಲಿ ತುಳುನಾಡು ಪ್ರತ್ಯೇಕ ಸ್ವತಂತ್ರ ರಾಜ್ಯ ವಾಗಿತ್ತೆಂದೂ ತುಳುನಾಡೆಂದರೆ ತ್ರಿಗರ್ತವೆಂದೂ, 'ಬಸರೂರಿನಿಂದ ಭಟ್ಕಳ' ವರೆಗಿನ ಕರಾವಳಿಯು ಮತ್ಸ್ಯ ನಗರವೆಂದೂ 'ಪ್ರಾಚೀನ ತುಳುನಾಡು' ಎಂಬ ಪುಸ್ತಕದಲ್ಲಿ ಬರೆದುದಕ್ಕೆ ಯಾವ ಆಧಾರಗಳೂ ಇಲ್ಲ. ಮಾತ್ರವಲ್ಲ ಈ ವಿಷಯಗಳು ವಸ್ತು ಸ್ಥಿತಿಗೆ ವಿರುದ್ಧವಾಗಿವೆ. [ಅದೇ ರೀತಿಯಲ್ಲಿ ಆ ಪುಸ್ತಕದಲ್ಲಿ ಕೊಟ್ಟಿರುವ ಪಾಂಡ ವರ ಚರಿತ್ರೆಯನ್ನು ನಮ್ಮ ತುಳುನಾಡಿಗೆ ಹೊಂದಿಸಿರುವುದು ಅನಧಿಕೃತವೆಂದು ತಿಳಿ ಯಬೇಕು.]

## — ಇ —

'ತುಳುವದ ಹುಟ್ಟು' ಎಂಬ ದ್ವಿತೀಯ ಲೇಖನದಲ್ಲಿ ರ,ಳ ಗಳ ಅಭೇದತ್ವೇನ 'ತುರು' ಎಂದಿದ್ದುದು ಕಾಲಕ್ರಮೇಣ 'ತುಳು'ವಾಯಿತೆಂದು ನಿರ್ಧರಿಸಿದ್ದೇನೆ. ತುಳು ಕನ್ನಡಭಾಷೆಗಳೆರಡರಲ್ಲೂ ಇದಕ್ಕೆ ಕೆಲವು ದೃಷ್ಟಾಂತಗಳನ್ನು ಈ ಕೆಳಗೆ ಕಾಣುವಿರಿ

**ತುಳುವಿನಲ್ಲಿ:** ಬರಿ – ಬಳಿ; ತಾರಾಯಿ — ತಾಳಾಯಿ, (ತಾಲಾಯಿ), ತುರುವೆ – ತುಳುವೆ; ಬಾರೆ – ಬಾಳೆ; ಪರಬೆ—ಪಳಬೆ; ಬೋರು—ಬೋಳು; ಕೊಪ್ಪುರ್—ಕೊಳ್ಪು; ಕೋರಿ– ಕೋಳಿ; ಪುರಲ — ಪುಳಲ; ತಾರಿ—ತಾಳಿ; ತೊರ್ಪು—ತೊಳ್ಪು.

**ಕನ್ನಡದಲ್ಲಿ:** ಮರಳು — ಮಳಲು; ಮಂಗಳೂರು — ಮಂಗರೂಳ; ಕದಳಿ—ಕದರಿ; ಅರ್ತಿ— ಅಲ್ತಿ; ಎರ್ದುಂಕು–ಎಲ್ದುಂಕು; ಝುಲುರಿ–ಝುಲ್ಲಲು ಕ್ರೂರಂ – ಕೂಲ್ರ್; ಕೂರಲ್—ಕೊಳಲ್

ಈ ದೃಷ್ಟಾಂತಗಳಿಂದ ತುರುವ ಎಂಬುದು ತುಳುವವಾಯಿತೆಂದು ನಿಸ್ಸಂದೇಹವಾಗಿ ನಿರ್ಣಯಿಸಬಹುದು; ಇಲ್ಲಿ ಈ ಪರಿವರ್ತನೆಗೆ ಬ್ರಾಹ್ಮಣರ ತುಳು ಭಾಷೆಯೂ ಒಂದು ಕಾರಣವಾಗ ಬಹುದೆಂದು ನನಗನಿಸುತ್ತದೆ.

## — ಈ —

ಮೊದಲನೆಯ ಲೇಖನದಲ್ಲಿ ಜನಾಂಗದಿಂದ ದೇಶಕ್ಕೆ ಹೆಚ್ಚಾಗಿ ಹೆಸರುಂಟಾಗುವುದು ಹಿಂದಿನ ಕಾಲದ ಪದ್ಧತಿ ಎಂಬುದಾಗಿ ಉಲ್ಲೇಖಿಸಿದ್ದೇನೆ. ಇದರ ಕುರಿತು ಕೆಲವು ಮಾತುಗಳನ್ನು ಬರೆಯಲು ಇಚ್ಛಿಸುತ್ತೇನೆ. 'ಹಾಲು—ಮತ' ದರ್ಶನವೆಂಬ ಶಂ. ಭಾ. ಜೋಶಿಯವರ ಗ್ರಂಥಕ್ಕೆ ಸಂಪಾದಕರಾದ ನೆಗಳೂರು ರಂಗನಾಥರು ಅವರ ಹಿನ್ನುಡಿಯಲ್ಲಿ 'ಜನ-ಪ್ರದೇಶ' ವೆಂಬ ಶಿರೋನಾಮೆಯಡಿಯಲ್ಲಿ ಈ ಕೆಳಗಿನಂತೆ ಬರೆದಿದ್ದಾರೆ (ಪು. ೩೦೧) "ಪ್ರಭುತ್ವ ಪಡೆದ ದೇಶದಲ್ಲಿಯೇ ಬೇರೆ ಬೇರೆ ಪ್ರಾದೇಶಿಕ ವಿಭಾಗಗಳಿವೆ. ಅವು ಕಾಲಾಂತರದಲ್ಲಿ ಬೇರೆ ಬೇರೆ ಜನಾಂಗಗಳ ಜೀವನವನ್ನು ಸ್ಥಾಯಿಯಾಗಿ ಮಾಡಿಕೊಂಡು ಆ ಸ್ಥಳಪ್ರದೇಶಗಳು ತಮ್ಮವೆಂದು ಹೇಳಿಕೊಂಡು ಪ್ರದೇಶ ಸಂಬಂಧವನ್ನು ಶಾಶ್ವತವಾಗಿ ಕಲ್ಪಿಸಿಕೊಂಡಿವೆ. ಆ ಪ್ರದೇಶಗಳು ಆ ಜನಾಂಗವಾಚಿ ಶಬ್ದದ ಹೆಸರು ಪಡೆದಿವೆ. ಅಂದಿನಿಂದ ಆ ಪ್ರದೇಶವು ಆ ಜನಾಂಗದ ಶಾಶ್ವತ ಜೀವನ ಕೇಂದ್ರವಾಗಿದೆ."

ಈ ತತ್ವದ ಮೇಲೆ ಹೊಂದಿಕೊಂಡು ಈ ಕೆಳಗಿನ ನಿರ್ಧಾರವನ್ನು ಚಾರಿತ್ರಿಕ ಜ್ಞಾನಕ್ಕೆ ಸರಿಯೊಪ್ಪುವಂತೆ ಮಾಡಬಹುದು :

1) ತುಳುನಾಡು (ತುಳುವನಾಡು)—ತುರನಾಡು, ತುರುವ (ತುರುಕಾರರ) ರ ನಾಡು, ಗೋವಳರನಾಡು, ಗೋರಾಷ್ಟ್ರ, ಅದೇ ಪಶುಕ.

2) ಚೇರ: ಚೇರುಮೂರರ ನಾಡು (ಕುಳ್ಳಗಾಗಿದ್ದು, ಕೆಲಸಮಾಡುವ ಕೆಳ ವರ್ಗದ ಜನರಿರುವ ನಾಡು) ಕೇರಳವೆಂಬುದು ಹಳಗಾರದ 'ಚೇರ' ವೆಂಬ ಹೆಸರಿನ ಕನ್ನಡ ರೂಪವೆಂದು ವಿದ್ವಾಂಸರ ಅಭಿಮತ. (Malabar by W. Logon ಪುಟ 224)

3) ದ್ರಾವಿಡದೇಶ : (ತಮಿಳುನಾಡು) ದ್ರಾವಿಡರ ನಾಡು (ಉತ್ತರ ದಿಂದ ದಕ್ಷಿಣಕ್ಕೆ ದ್ರವಿಸಿ ಬಂದವರ ನಾಡು)

4) ಕಂನಾಡು (ಕರ್ನಾಟಕ) : ಕನ್ನ (ಕರಣ) ರೆಂಬ ಜನರು ವ್ಯಾಪಿಸಿದ್ದ ನಾಡು. (ಕನ್ನಡದ ನೆಲೆ)

5) ಕಳಿಂಗ : ಕವಳರು, ಕಳ್ಳಾರರು, ಕಳ್ ಜನರು-ಇದ್ದನಾಡು. (ನಾಡೋಜ ಪಂಪ—ಪುಟ೧೧೫)

6) ಮೈಸೂರು : ಮಹಿಷರ ನಾಡು (ಈ ಮಹಿಷರೆಂದರೆ ಎಮ್ಮೆಗರು (ಕಂನಾಡ ಕತೆ—ಪುಟ೯೭)

7) ಕೊಡಗು : ಕು ಡಿ ಗ ಳು ಪ್ರಧಾನವಾಗಿರುವ ನಾಡು (ಕುಡಿಗಳೆಂದರೆ ಬೇಸಾಯುಗಾರರಲ್ಲಿ ಮೊದಲ ಹಂತದವರು)

8) ಕೊಂಕಣ (ಕೋಕಣ)— ಗೋಪಾಲಕರಿಗೆ (ಗೋವಳರಿಗೆ) ಪ್ರಸಿದ್ಧಿ ಪಡೆದ, ಅವರ ಜೀವನದ ಹೊಡೆದಾಟದ ಪ್ರದೇಶ.

(9) ಮಹಾರಾಷ್ಟ್ರ: ಆವಿರ್ಕಾರಣ ಹೊಂದಿದ ರಾಷ್ಟ್ರಿಕ (ನಾಡವ ಜನ ಪ್ರಭಾವಶಾಲಿಯಾದ ಹಾಗೆ ಇದು ಒಂದು ಮಹಾರಾಷ್ಟ್ರಕದೇಶವಾಯಿತು.

(10) ಲಾಟ: ರಾಷ್ಟ್ರಕೂಟರದೇಶ (ಅವರ ರಾಜ್ಯದೊಂದಂಗ)

(11) ಪಾಂಡ್ಯದೇಶ: ಪಂಡು=ಪೂರ್ವಕಾಲ; ಪಂಡಿಯ=ಕುಂತಳದಿಂದಿಳಿದು ಬೆಳ್ಳರು ಮೊತ್ತಮೊದಲು ನೆಲೆಗೊಂಡ ನಾಡಾಗಿರಬಹುದು; ಇದೇ ಪಾಂಡ್ಯದೇಶ (ನಾಡೋಜ ಪಂಪ—ಪು.೧೧೫)

(12) ವೆಂಗಿ ಮಂಡಲ: ಬೆಳ್ಳರ ನಾಡು (ನಾಡೋಜಪಂಪ-ಪು. ೯೨)

—೮—

ಭೂತಾಳ ಪಾಂಡ್ಯರಾಯನ ಕಾಲದ ಜಾತಿಗಳ ವಿವರ:—

(1) ಬ್ರಾಹ್ಮಣರು (2) ಕ್ಷತ್ರಿಯರು, (3) ಜೈನರು, (4) ಜೈನ ಬಳ್ಳಾಲರು (5) ಮಾಸಾದಿಕ ಜೈನರು (6) ಮಾಸಾದಿಕ ಹೆಗ್ಗಡೆರು (7) ತುಳುವರು, (8) ಹರಿ

ಶೆಟ್ಟರು (9) ಮಲವರು (10) ನಾಯಿಮಾರರು (11) ನಾಯರರು (12) ಪರಿವಾರ ದವರ (13) ನಾಡುಗೌಡರು (14) ಮಲೆಯಾಳರು (15) ವಾಲಗದವರು (16) ಬೋವಿಯರು (15&16) ಕತ್ರಿವೀಳ್ಯ, (17) ದೇವಡಿಗರು (18) ಸಪಲ್ಯರು (17&18 ಕತ್ರಿವೀಳ್ಯ) (19) ಪದಾರ್ತಿ (ಮಾರಾಠ) (20) ಪುಡುವಾಳ (ಮಾರ ಮ್ಮಾಕ) (21) ಪಾತ್ರಿಮೋಳ (22) ಕುಂಬಾರ (23) ಕನ್ನಡರು (24) ಕಮ್ಮಾರ, (ಬಡಗಿ) (25) ಕಂಚುಗಾರ (26) ಸಾಲಿಯ (ಜಾಡರು) (27) ಮಲೆಕುದಿಯ (28) ಅಗಸ (29) ಕ್ಷೌರಿಕ (30) ಹಳೇಪೈಕ(ಬಿಲ್ಲವ) (31) ಹಳೇಪೈಕರಹಜಾಮ (32) ಕರವೂರ (ಕವಿರಾಮುಗರ) (33) ಫಲಮುಗರ (34) ಮುಗರ (35) ಪಂಬದ (36) ಪರವ (37) ಕುಣ್ಕೆಯುವ (ನಲ್ಕೆದವ) (38) ಮುಂಡಾಲ (39) ಮಾರಿ ಹೊಲೆಯ (40) ಅಂಡೆಕೊರಗ, (41) ತೊಂಡೆಕೊರಗ (42) ಕಾಡಿಕೊರಗ.

ಈ ತಖ್ತೆಯಲ್ಲಿ ಕಂಡುಬರುವ 'ತುಳುವರು' ಒಂದು ವಿಶಿಷ್ಟಜಾತಿಯಾಗಿದೆ (ಜನಪ್ರಭೇದ) ಎಂಬುದು ನಿಸ್ಸಂದೇಹ. ಈ ತುಳುವರೆಂದರೆ ತುರುವರು (ತುರು ಕಾರರು) ತುರುಕಾರರು ಕುರುಬರ ಒಂದು ಪ್ರಭೇದವೆಂಬುದಾಗಿಯೂ, ಚೋರರ ವರ್ಗಕ್ಕೆ ಸೇರಿವ ಒಂದು ಪಂಗಡವು 'ತುರಕ'ವೆಂದು ತಿಳಿಯಲ್ಪಟ್ಟಿದೆಯಾಗಿಯೂ ಥರ್ಸ್ಟನರು ಅವರ ಗ್ರಂಥದಲ್ಲಿ ತಿಳಿಸುತ್ತಾರೆ. (Vol VII Page 205) ಈ ತುರುಕಾರರ ಹೆಚ್ಚಿನ ವಿವರ ಅವರಿಗೆ ಸಿಗಲಿಲ್ಲವೆಂದು ಭಾಸವಾಗುತ್ತದೆ. ಅದನ್ನು ಪಡೆಯಲು ಪ್ರಯತ್ನಮಾಡಿದಂತೆಯೂ ಕಂಡು ಬರುವುದಿಲ್ಲ.

—೮೨—

ವಿಷಯ ಸಮರ್ಥನೆಯ ಬಗ್ಗೆ ಕುರುಬ ಜಾತಿಯ ವಿಷಯ ಸ್ವಲ್ಪ ಹೆಚ್ಚು ಸತ್ಯ ಸಂಗತಿಗಳನ್ನು ಬರೆಯಬೇಕಾಗಿದೆ. ಸರ್ ಈಲಿಯಟ್ ಎಂಬ ಚರಿತ್ರೆಕಾರರು(1869 Jour Eth.. Soc Lend I 104, 110) ಕುರುಬರು ದಕ್ಷಿಣ ಹಿಂದೂದೇಶದ ಮೊದಲ ಜನಸಮುದಾಯದಲ್ಲಿ ಬಹಳ ಪ್ರಾಮುಖ್ಯರೆಂಬುದಾಗಿ ತಿಳಿಸಿದ್ದಾರೆ. ಇವರಲ್ಲಿ ತುಂಬಾ ಸತ್ಯಾಂಶವಿದೆ. ಇವರು ತಮಿಳು ಮತ್ತು ಮಳೆಯಾಳ ದೇಶಗಳಲ್ಲಿ ಕುರುಂಬ ರೆಂದೂ, ಕನ್ನಡದಲ್ಲಿ ಕುರುಬರೆಂದೂ (ಕುರಿ ಎಂಬ ಶಬ್ದದಿಂದ ಬಂದುದು,) ಮಹಾ ರಾಷ್ಟ್ರ ಮತ್ತು ಉತ್ತರ ಹಿಂದೂದೇಶದಲ್ಲಿ ಧಂಗಾರರೆಂದೂ(ದನಗಾರರು)ಕರೆಯಲ್ಪಡು ತ್ತಾರೆ. ಮಲಬಾರಿನಲ್ಲಿ ಕೆಲವರು ಸೇವಕ ವೃತ್ತಿಯನ್ನು ಮಾಡುತ್ತಿದ್ದಾರೆ. ಮದ್ರಾ ಸಿನ ಕರ್ಣಾಟಕ ಪ್ರದೇಶದಲ್ಲಿ ಅವರು ಕುದುರೆಗಳನ್ನು ಸಾಕಿಕೊಂಡು, ಮರಾಟರ ಸೈನ್ಯದಲ್ಲಿ ಯೋಧರಾಗಿದ್ದರು. ಹಿಂದಕ್ಕೆ ಪೂರ್ವಕರ್ಣಾಟಕದಲ್ಲಿ ಈ ಕುರು ಬರು 24 ರಾಷ್ಟ್ರಗಳಲ್ಲಿಯ ಒಂದು ಸಂಸ್ಥಿತಿ ಜನಾಂಗವನ್ನು ಮಾಡಿಕೊಂಡಿದ್ದರೆಂದೂ

ಬೌದ್ಧ ಧರ್ಮಕ್ಕೆ ಮತಾಂತರಗೊಂಡರೆಂದೂ, ಕಲಾದೃಷ್ಟಿಯಲ್ಲಿ ನಿಪುಣರಾಗಿದ್ದ ರೆಂದೂ, ಕ್ರಿ. ಶ. 5 ಯಾ 6ನೆಯ ಶತಮಾನದಲ್ಲಿ ತಂಜಾವೂರಿನ ಚೋಳ ಅರಸ ನಿಂದ ಸೋಲಿಸಲ್ಪಟ್ಟು ಅಧಿಕಾರವನ್ನು ಕಳಕೊಂಡರೆಂದೂ, ಹೇಳಲ್ಪಟ್ಟಿದೆ. ಈ ಕುರುಬರ ನಿಷ್ಠೆ ಮತ್ತು ಸತ್ಯ ಪರಿಪಾಲನೆಯು ಶ್ಲಾಘನೀಯವೆಂದು ಸರ್, ಯಿಾಲಿ ಯಟರು ಅಭಿಪ್ರಾಯ ಪಡುತ್ತಾರೆ. ಈ ಕಾರಣದಿಂದಲೂ, ಇತರ ಕಾರಣಗಳಿಂದಲೂ ಅವರು ಈ ಕುರುಬರಿಗೂ, ಬಂಗಾಳದ ಸಂತಾಲರಿಗೂ, ಸಂತಾಲರ ಮೂಲಕ ಅಭೀ ರರಿಗೂ ಸಂಬಂಧವನ್ನು ಕಲ್ಪಿಸುತ್ತಾರೆ.

W. W. Obhert in his 'Orginal Inhabitants of India' writes "however seperated from each other and scattrered among the Dravidian clans with whom they have dwelt and however distant from one another they still live, there is hardly a Province in the whole of Bharathavarsha, which cannot produce, if not some living remnants of this race at least some remains of past times which prove their presence. Indeed, the Kurumbas must have been regarded as very old inhabitants of this land, who can counts with their Dravidian kinsmen the priority of occupation of the Indian soil; The terms Kuruba and Kurumba are originally identical, though the one form is, in different places, employed for the other and has thus assembled a special local meaning"

ಟ್ಯಲರ್ ಚರಿತ್ರೆಕಾರರು, ದಕ್ಷಿಣ ಹಿಂದೂದೇಶಲ್ಲಿ ಯಾದವರೆಂದು ಹೇಳಿಕೊ ಳ್ಳುವ ಕೆಲವು ರಾಜಕುಟುಂಬಗಳು ಬ್ರಾಹಣತ್ವವನ್ನು ಹೊಂದಿದ ಕುರುಬರಿರಬಹುದು (Brahminised Kurubas) ಎಂದು ಸೂಚಿಸುತ್ತಾರೆ. (Mad.Jour. lil and Scies VIII 261) ಕುರುಬರಿಗೆ ಕನ್ನಡ ಜಿಲ್ಲೆಯಲ್ಲಿ(Kanara)ಹೆಚ್ಚಿನ ಆಸಕ್ತಿ ಇದ್ದಂತೆ ಕಂಡು ಬರುತ್ತದೆ. 'ಕದಂಬ' ಎಂಬ ಬನವಾಸಿಯ ಎರಡು ರಾಜ ಮನೆತನಗಳು ಹೆಸರು 'ಕುರುಬ' ಎಂಬುದರ ಸಂಸ್ಕೃತಿಸಲ್ಪಟ್ಟ ರೂಪವೆಂಬುದಾಗಿ ನಿರ್ಧರಿಸಿದರೆ (ಈ ನಿರ್ಧಾರಕ್ಕೆ ಸಾಧ್ಯತೆಯೂ ಇದೆ,) ಕುರುಬರಿಗೆ ಕನ್ನಡ ಜಿಲ್ಲೆಯಲ್ಲಿ ಈ ರೀತಿಯ ವಿಶೇಷ ಆಸಕ್ತಿ ಇರುವುದು ಸಹಜ.

ರೈಸ್ ಚರಿತ್ರೆಕಾರರು ಈ ಕುರುಬರು (Mysore I 333) ಮೈಸೂರು ಪ್ರಾಂತ್ಯವಿಡೀ ವ್ಯಾಪಿಸಿಕೊಂಡಿರುವ ಪ್ರಾಮುಖ್ಯ ಜನ ಪ್ರಭೇದವೆಂದಿರುವರು. ಅವರು ಎರಡು ಶಾಖೆಗಳಿಗೆ ಸೇರಿರುವರು. ಕುರುಬರೂ, ಹಂಡೆ ಕುರುಬರೂ, ಅವ ರಲ್ಲಿರುವ ಒಳವರ್ಗಗಳಲ್ಲಿ – ಹೆಗ್ಗಡೆ, ಐದು ವರಹದ ಸಾಲ, ನಗೆರಕುಲ, ಸಾವಂತಿ

ಕುಲ, ಸಂಗಮಕುಲ, ಪೆದ್ದಲಕುಲ, ಅತ್ತಿಕಂಕಣ, ಹಾಲುಕುರುಬ, ಹಂದಿಕುರುಬ, ಥಂಗ, ಕಂಬಳಿಕುರುಬ, ಕಂಕಯನ ಜಾತಿ, ಬಂದನುಲರು ಮುಖ್ಯವಾಗಿವೆ. ಈ ಕುರುಬರು ದಕ್ಷಿಣದಲ್ಲಿ ನೀಲಗಿರಿಯ ವರೆಗೆ ಹರಡಿರುವರೆಂಬೂ ಅವರುತಿಳಿಸುತ್ತಾರೆ. ಕೊಡಗಿನಲ್ಲಿ ಐದು ವರ್ಗದವರನ್ನು ಟ್ರೈಲರರು ನಮೂದಿಸುತ್ತಾರೆ ಕಂಬಳಿ, ಹಾಲು, ಬೆಟ್ಟ, ಜೇನು ಮತ್ತು ಕಾಡುಕುರುಬರು. ಬುಕಾನನರು II 108 Mysoreಮೈಸೂರಿನ ಕಾಡುಕುರುಬರನ್ನು ಈರೀತಿ ವರ್ಣಿಸಿದ್ದಾರೆ."ಇವರು ಕಪ್ಪಾಗಿಯೂ,ಕ್ಷೀಣವಾಗಿಯೂ ಕಾಣುತ್ತಾರೆ. ಕೆಲವು ಚಿಂದಿಬಟ್ಟೆಗಳನ್ನು ಧರಿಸುತ್ತಾರೆ. ಅವರುವಿಶ್ವಾಸ ಪಾತ್ರರಾಗಿದ್ದು,ಧೈರ್ಯ ಸಾಹಸಗಳಿಗೆ ಹೆಸರಾಂತರಾಗಿದ್ದಾರೆ. ಆನೆಗಳನ್ನು ದೀವಟಿಗೆ ಹಿಡಿದು, ಎದುರೆದುರಾಗಿ ರಭಸದಿಂದ ಬಂದು ಓಡಿಸುವುದರಲ್ಲಿ ಪ್ರವೀಣರು.ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕ್ರಿ.ಶ. 1800ರಲ್ಲಿ ಬರೇ 183 ಕುರುಬರೂ,ದನಗಾರರೂ ಇದ್ದುದು ಕಂಡು ಬರುತ್ತದೆ. ಗೋವೆಯಲ್ಲಿ ಅವರ ಸಂಖ್ಯೆಯು ಹೆಚ್ಚಿದ್ದಂತೆ ತಿಳಿದುಬರುತ್ತದೆ. ಕಾರಣ ಗೋವೆಯ ಬೇಸಾಯಗಾರರನ್ನು 'ಕುರುಂಬಿ' ಎಂದು ಹಿಂದಿನ ಬರಹಗಾರರು ನಮೂದಿಸಿದ್ದಾರೆ. ಇದರಿಂದ ಅವರು ಕುರುಬರ ವರ್ಗಕ್ಕೆ ಸೇರಿದ್ದನ್ನೇ ಸೂಚಿಸುತ್ತದಲ್ಲದೆ ಕುಡುಬಿ ಜಾತಿಯನ್ನಲ್ಲವೆಂದು ತಿಳಿಯಬೇಕು.

ಈ ಕುರುಬರಲ್ಲಿ ಕೌಟುಂಬಿಕ ಹೆಸರುಗಳು (Surnames) ಹೀಗಿವೆ: ಆನೆ, ಹಾಲ್, ಕೊಲ್ಲಿ, ನೆಲ್ಲಿ, ಸಾವಂತ, ಕೋಟೆ, ಅಸಿಲ್, ಮುರ್ಹಿಂದ. ಕನ್ನಡ ಜಿಲ್ಲೆಗಳಿಗೆ ಮೈಸೂರಿನಿಂದ ಕುರುಬರು ಬಂದಿರುವರು. ಉತ್ತರಕನ್ನಡದಲ್ಲವರು ಹಂದೆ ಉಣ್ಣೆ ಮತ್ತು ಹಟ್ಟಿ ಕುರುಬರೆಂದು ಮೂರು ವಿಧದವರಿರುವರು. ಅವರು ದೃಢಕಾಯರಾಗಿದ್ದು, ಕುಳ್ಳಗಾಗಿದ್ದು, ಕನ್ನಡ ಮಾತನಾಡುತ್ತಾರೆ. ಬುಕಾನನರ ಅಭಿಪ್ರಾಯದಂತೆ ಇವರು ಆದಿಯಲ್ಲಿ ಜಾನುವಾರುಗಳನ್ನು ಮೇಯಿಸುವವರಾಗಿಯೂ, ಗಿರಿಯ ಸೈನಿಕರಾಗಿಯೂ, ಅಲ್ಲಿವಣರಾಗಿಯೂ, ಅಂಚೆಯವರಾಗಿಯೂ ಇದ್ದರು.ಕನ್ನಡ ಜಿಲ್ಲೆಯ ಹವಾಗುಣವು ಕುರಿಗಳಿಗೆ ತುಂಬಾ ಅವಗುಣಕಾರಿಯಾದುದರಿಂದಲೂ, ಅವರ ಸೈನಿಕ ಸೇವೆ ಅಗತ್ಯವಿಲ್ಲದುದರಿಂದಲೂ ಅವರು ಕಂಬಳಿ ತಯಾರಿಸುವುದರಲ್ಲಿಯೂ, ಗಾಡಿನಡೆಸುವವರಾಗಿಯೂ, ವ್ಯವಸಾಯವೃತ್ತಿಯಲ್ಲೂ ನಿರತರಾಗಬೇಕಾಯಿತು.

ಇವರಲ್ಲಿಯ ಹೆಗ್ಗಡೆ ಎಂಬ ವರ್ಗವು ತುಳುವದಲ್ಲಿ ನೆಲೆನಿಂತ ಬಹಳ ಹಳೆ ಜನಾಂಗದಂತೆ ಕಂಡುಬರುತ್ತದೆ. ಸಮಾಜದಲ್ಲಿ ಅವರ ಸ್ಥಾನ ಮಾನಗಳು ಬಂಟರಿಗಿಂತ ಸ್ವಲ್ಪ ಕೆಳಗಿನದಾಗಿವೆ. ಅವರ ಸಮಾರಂಭಗಳಲ್ಲಿ ಧನಿಕರು ಬ್ರಾಹ್ಮಣ ಕ್ರಮಗಳನ್ನೇ ಅವಲಂಬಿಸುತ್ತಾರೆ.

ಮೇಲಿನ ವಿವರಗಳಿಂದ ಈ ಕೆಳಗಿನ ನಿರ್ಧಾರಗಳನ್ನು ಓದುಗರ ಮುಂದಿಡಲು ಬಯಸುತ್ತೇನೆ.

(1) ಕುರುಬರೂ, ಕುರುಂಬರೂ, ಧೆಂಗಾರರೂ (ದನಗಾರರೂ) ಹಟ್ಟಿಕಾರರೂ ಒಂದೇ ಬಡ ಕಟ್ಟಿಗೆ ಸೇರಿದವರು. ಈ ಮೂಲಕ್ಕೆ ಸೇರಿದವರು ತುರುಕಾರರು. ಇವರೇ ನಮ್ಮ ನಾಡಿನಲ್ಲಿ ತುಳುವರೆಂದೆನಿಸಿ ತುಳುನಾಡಿಗೆ ಆ ಹೆಸರನ್ನಿತ್ತರು. ಭೂತಾಳ ಪಾಂಡ್ಯನ ಕಾಲದ ಜಾತಿಗಳ ವಿವರದಲ್ಲಿ ಸೇರಿರುವ 'ತುಳುವರು' ಎಂದರೆ ಈ ತುರುಕಾರರೇ.

(2) ತುರುಕಾರರಾದ ತುಳುವರು ಕ್ರಿ. ಪೂ. ದಲ್ಲಂತೂ ನಮ್ಮ ನಾಡಿನಲ್ಲಿ ಪ್ರಬಲರಿದ್ದಿರಬೇಕು. ಹವಾಮಾನದ ವೈಪರೀತ್ಯದಿಂದ, ಹಾಗೂ ನಾಡವರ ಪ್ರಾಬಲ್ಯ ಹೆಚ್ಚಾದಂದಿನಿಂದ ಇವರ ಮೂಲದ ಕಸುಬನ್ನು ತೊರೆದು ವ್ಯವಸಾಯವೃತ್ತಿಯನ್ನು ಮಾಡಬೇಕಾಗಿಬಂತು. ಮಾತ್ರವಲ್ಲದೆ ಮುಂದಿನ ಬಲಾಢ್ಯ ಜನವರ್ಗಗಳೊಡನೆ ಬೆರಕೆಯಾದರೆಂದು ತಿಳಿಯುಲವಕಾಶವಿದೆ. ಇವರ ಮೇಲ್ ಹೆಸರುಗಳಲ್ಲಿ ಹಲವನ್ನು ಇವರ ನಂತರ ಬಂದು ನೆಲಸಿದ, ಅಧಿಕಾರ ಸ್ಥಾಪಿಸಿದ ಜನ ಪ್ರಭೇಧಗಳು ಅಂತು ಕೊಂಡವು. ಇವುಗಳಲ್ಲಿ ಮುಖ್ಯವಾದುವುಗಳು ಹೆಗ್ಗಡೆ, ಕಂಬಳಿ, ಸಾವಂತ, ಹಂದೆ ಆನೆ, ನೆಲ್ಲಿ ಎಂಬ ಕುಲನಾಮಗಳೂ ಇವರಿಂದಲೇ ಬಂದಿರಬೇಕು. ಇವರಲ್ಲಿ ಸಾಮಾನ್ಯವಾಗಿರುವ ಹೆಸರುಗಳು–ಮಲ್ಲಪ್ಪ, ಲಿಂಗಪ್ಪ, ಬೋಡ, ಎಲ್ಲಪ್ಪ, ಕಾಡು, ಹಾಗೂ ಹೆಂಗಸರಲ್ಲಿರುವ ಗಂಗವ್ವ, ಈರವ್ವ, ಪುಟ್ಟವ್ವ, ಮಲ್ಲವ್ವ, ಗೌರವ್ವ, ನಾಗವ್ವ, ಹೆಸರುಗಳು ತುಳುವದಲ್ಲಿ ಕೆಳವರ್ಗದವರಲ್ಲಿ ಕಂಡುಬರುತ್ತದೆ. (ಅಬ್ರಾಹ್ಮಣರಲ್ಲಿ) ಮಲ್ಲಣ್ಣ, ಲಿಂಗಣ್ಣ, ಬೋರ, ಎಲ್ಲಪ್ಪಣ್ಣ, ಕಾಡು, ಗಂಗ, ಈರು, ಪುಟ್ಟಕ್ಕೆ, ಮಲ್ಲಕ್ಕೆ, ಗೌರಕ್ಕೆ, ನಾಗಕ್ಕೆ, (ನಾಗು) ಬ್ರಾಹ್ಮಣ ಹೆಂಗಸರಲ್ಲೂ ಕಂಡು ಬರುತ್ತದೆ.

ಊರ ಹೆಸರುಗಳಲ್ಲಿ ಈ ತುರುಕಾರರಿಗೆ ಯಾ ಕುರುಬರಿಗೆ ನೆಲೆವೀಡಾದುವುಗಳನ್ನು ಎರಡನೇ ಮತ್ತು ಮೂರನೇ ಲೇಖನದಲ್ಲಿ ಕೊಟ್ಟಿದ್ದೇನೆ. ಇವುಗಳೊಡನೆ ಬಂದಾರ, ಬಂಡಡ್ಕ ಸಂಗಬೆಟ್ಟು, ತೊರವಳ್ಳಿ, ತುರುತಿ, ಸತ್ಯಡ್ಕ (ಹಟ್ಟಿಯಡ್ಕ) ಹಂದಟ್ಟು, ಹಂದಾಡಿ–ಸ್ಥಳನಾಮಗಳೂ ಸೇರುವುದುಚಿತ.

— ೩೨ —

ಡಾಕ್ಟರ್ ಸಲಿತ್ತೂರರು ಅವರ 'The Social and Political Life of the Vijaya Nagara Empire' ಎಂಬ ಗ್ರಂಥದಲ್ಲಿ ವಿಜಯನಗರದ ಅರಸರ ಮೂಲದ ಕುರಿತಾಗಿ ಈ ಕೆಳಗಿನ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ.

"ವಿಜಯ ನಗರದ ಪ್ರಥಮ ಅರಸರು (ಸ್ಥಾಪಕರು) ಯಾರು ಎಂಬುದರ ಕುರಿತಾಗಿರುವ ವಾದಗಳಲ್ಲಿ, ಅವರು 'ತುಳುವರು' ಎಂದು ನಿರ್ಧರಿಸುವ ವಾದವೂ ಇದೆ. ಇದು ಅಭಿಪ್ರಾಯಗಳಲ್ಲಿರುವ ಎರಡನೆಯ ಅಭಿಪ್ರಾಯ. ಮಾಧವ ವಿದ್ಯಾರಣ್ಯರು ಪೋಷಕರಾಗಿ ನಿಂತ ಹರಿಹರ ಮತ್ತು ಬುಕ್ಕ ಎಂಬವರು ಹೊಯ್ಸಳ ಬಲ್ಲಾಳ ರಾಜ್ಯದ ಮಾಂಡಲಿಕರಾಗಿ ತುಳುವದಲ್ಲಿದ್ದ ಸಂಗಮ ಎಂಬವನ ಈರ್ವರು ಮಕ್ಕಳು ಎಂದು ಟೈಲರರ ಗ್ರಂಥದಿಂದ ತಿಳಿದು ಬರುತ್ತದೆ. ಈ ಹರಿಹರ ಮತ್ತು ಬುಕ್ಕರು ತಮ್ಮ ಅದೃಷ್ಟ ಪರೀಕ್ಷೆ ಮಾಡಿಕೊಳ್ಳುವ ಯೋಧರೆಂದೂ, ಅವರು ವಾರಂಗಲ್ಲಿನ ಅರಸರ ಸೇವೆಯಲ್ಲಿದ್ದರೆಂದೂ ತಿಳಿದು ಬರುತ್ತದೆ. ಇಲ್ಲಿ ಭಿನ್ನಾಭಿಪ್ರಾಯಬರುವುದು, ವಿಜಯ ನಗರದ ಮೊದಲ ಮತ್ತು ಉಳಿದೆರಡು (ಎಂದರೆ ಸಾಳ್ವ ಮತ್ತು ತುಳುವ) ರಾಜ ಕುಟುಂಬಗಳ ಮೂಲದ ಕುರಿತಾಗಿಯಾಗಿದೆ. ಎಲ್ಲಾ ಶಾಸನಾದಿಗಳು ವಿಜಯ ನಗರದ ಮೂರನೆಯ ರಾಜ ಕುಟುಂಬವು ತುಳುವಕ್ಕೆ ಸೇರಿದ್ದೆಂದು ಸ್ಪಷ್ಟ ಪಡಿಸುತ್ತವೆ. ನರಸಿಂಹನ ಕಾಲದ ಒಂದು ನಾಣ್ಯವೂ ಈ ವಾದವನ್ನು ಪುಷ್ಟೀಕರಿಸುತ್ತದೆ.... ಮಾತ್ರವಲ್ಲದೆ ತುಳುವಕ್ಕೂ ವಿಜಯನಗರದ ಅರಸರಿಗೂ ಇದ್ದ ನಿಕಟ ಸಂಬಂಧವು ಇನ್ನೂ ಬೇರೆ ಉದಾಹರಣೆಗಳಿಂದ ವಿದಿತವಾಗುತ್ತದೆ. ದೇವರಾಯನ ಹಿರಿಯ ಮಗಳನ್ನು (ಹರಿಮ) ಚಂದ್ರವಂಶದ ಸಳುವ ತಿಮ್ಮರಾಯ ಎಂಬವನು ವಿವಾಹವಾದನು. ಈ ತಿಮ್ಮರಾಯನು ತುಳುದ ಸಂಗೀತಪುರದಲ್ಲಿ ಆಳುತ್ತಿದ್ದ, ಸಾಳ್ವ ಕುಟುಂಬಕ್ಕಲ್ಲದೆ, ಬೇರಾವ ಸಾಳ್ವ ಕುಟುಂಬಕ್ಕೂ ಸೇರಿರಲಾರನು. ಪ್ರಕೃತಕ್ಕೆ ಇಷ್ಟು ನಿರ್ಧಾರವನ್ನು ಮಾಡಬಹುದು. ಸರ್ ವಾಲ್ಟೇರ್ ಇಲಿಯಟ್ ತಿಳಿಸುವಂತೆ ಈ ವಿಜಯನಗರದ ಮೊದಲ ಕುಟುಂಬವು ಕುರುಬರ ಶಾಖೆಗೆ ಸೇರಿದ್ದೆಂಬುದರಲ್ಲಿ ಸಂದೇಹವಿಲ್ಲ."

ನಾನು ಈ ಮೊದಲೇ ತಿಳಿಸಿದಂತೆ ಈ ಕುರುಬರೂ, ದನಗಾರರೂ ಹಟ್ಟಿಕಾರರೂ, ತುಳುವರೂ (ತುರುಕಾರರು) ಒಂದೇ ಬಳಗಕ್ಕೆ ಸೇರಿದವರೆಂಬುದಕ್ಕೂ ಅನುಮಾನವಿಲ್ಲ. ವಿಜಯ ನಗರದ ಸಂಸ್ಥಾಪಕರೇ ತುಳುವರಾಗಿರಬೇಕೆಂಬ ಈ ಒಂದು ಅಭಿಪ್ರಾಯವು ವಿಚಾರಣೀಯವಾಗಿದೆ.

— ೬ —

ಸ್ಥಳನಾಮಗಳನ್ನು ಕುರಿತಾಗಿ ಸಂಶೋಧನ ಕಾರ್ಯವನ್ನು ಏಕೆ ನಡೆಸಬೇಕೆಂದು ಈ ಮೊದಲೇ ತೃತೀಯ ಲೇಖನದಲ್ಲಿ ತಿಳಿಸಿದ್ದಾಯಿತು. ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಪ್ರದಾಯಿಕ ವಿಷಯಗಳನ್ನು ತಿಳಿಯಲು ಈ ಸ್ಥಳ ನಾಮಗಳು ಎಷ್ಟು ಉಪಯುಕ್ತವಾಗಿವೆ ಎಂಬುದಕ್ಕೆ ಇನ್ನೂ ಕೆಲವು ದೃಷ್ಟಾಂತಗಳನ್ನೀಯಲು ಬಯಸುತ್ತೇನೆ.

ಮಂಗಳೂರು ಈ ಹೆಸರು ಹೇಗೆ ಬಂತು? ಮಂಗಳಾದೇವಿಯ ದೇವಸ್ಥಾನ ವಿದ್ದುದರಿಂದ ಮಂಗಳೂರಾಯಿತೆಂಬುದು ಒಂದು ಹಳೆಯ ಹಳವಿ. ಹೆಸರಿಗೆ ಒಂದು ಕಾರಣವನ್ನು ಕೊಟ್ಟಂತಾಯಿತು. ಆದರೆ ಮೊದಲಿದ್ದುದು ಜಾಗ ಮತ್ತೆ ಇದ್ದುದು ದೇಗುಲ; ದೇಗುಲದಲ್ಲಿ ದೇವಿಯನ್ನು ಪ್ರತಿಷ್ಠೆ ಮಾಡುವ ಮುಂಚೆ ಜಾಗವು ಮಂಗ ಳೂರಾಗಿತ್ತೇ? ಅದು ಹೋಗಲಿ ಮಂಗಳೂರೆಂಬ ಹೆಸರು ಬಂದದ್ದು ಆ ದೇವಸ್ಥಾನ ದಲ್ಲಿ ಪ್ರತಿಷ್ಠಿತಳಾದ ಮಂಗಳಾದೇವಿಯಿಂದಲ್ಲ; ಬದಲು ಅದನ್ನು ಕಟ್ಟಿಸಿದ ಮಂಗ ಳಾದೇವಿಯೆಂಬ ಒಬ್ಬ ವಿರಾಗಿಣಿಯಿಂದ ಎಂಬ ಕಥೆಯೂ ಇದೆ. ಈ ವಿರಾಗಿಣಿಯು ನಾಥ ಪಂಥಕ್ಕೆ ಸೇರಿದವಳು. ಮಂಗಳೂರಿನಲ್ಲಿ ನಾಥ ಪಂಥವು ಮೊದಲ ಬಾರಿ ಪ್ರಚಾರವಾದದ್ದು ಕ್ರಿ. ಶ. ಒಂಭತ್ತನೆಯ ಶತಮಾನದಲ್ಲಿ. ಹಾಗಾದರೆ ಈ ಮಂಗಳೂ ರೆಂಬುದು ಕ್ರಿ. ಶ. ಒಂಭತ್ತನೆಯ ಶತಮಾನದ ಅನಂತರ ಬಂದ ಹೆಸರೆ? ಇದನ್ನೊ ಪ್ಪುವುದು ಸ್ವಲ್ಪ ಕಷ್ಟವಾಗುತ್ತದೆ. ಕಾರಣ ಕ್ರಿ. ಶ. ನೂರ ಐವತ್ತರ ಟೋಲಮಿಯ ಗ್ರಂಥದಲ್ಲಿ ಮಂಗನೂರು ಎಂಬುದರ ಉಲ್ಲೇಖವಿದ್ದು ಅದು ಮಂಗಳೂರೆಂಬುದಾಗಿ ಶ್ರೀ ಗೋವಿಂದ ಪೈಗಳು ವಿವೇಚಿಸಿದ್ದಾರೆ. ಮಾತ್ರವಲ್ಲದೆ ಇತರರೂ ಇದನ್ನು ಅನು ಮೋದಿಸಿದ್ದಾರೆ.

ಮಂಗಳಾ ದೇವಿಯ ದೆಸೆಯಿಂದ ಮಂಗಳೂರು ಬಂತೆಂದು ಸಾಧಿಸಿದರೆ, ನಮ್ಮ ನಾಡಿನಲ್ಲಿ ಮಂಗಳಪಾಡಿ, ಮಂಗಳ ಪೇಟೆ, ಈಶ್ವರ ಮಂಗಳ, ಕಾಂತು ಮಂಗಳ, ಕುಂಞ ಮಂಗಳ, ಕುಮಾರ ಮಂಗಳ–ಮೊದಲಾದ ಊರುಗಳಿಗೆ ಅದೇ ರೀತಿ ನಾಮಕರಣವಾ ಗುವುದಕ್ಕೆ ಸಾಧ್ಯವಿಲ್ಲ. ಕಾರಣ ಆ ಸ್ಥಳಗಳಲ್ಲಿ ದೇವಿಯುದ್ಭವದ ಕುರುಹೇ ಇಲ್ಲವೆಂದ ಮೇಲೆ ಆ ಹೆಸರುಗಳಲ್ಲಿ ಮಂಗಳವೆಂಬ ನುಡಿಯು ಹೇಗೆ ಸೇರಿಕೊಂಡಿತು? ಇದಕ್ಕೆ ಉತ್ತರವೇನು? ಸರ್ವ ಮಂಗಳೆಯು ಸರ್ವ ವ್ಯಾಪಿನಿಯಾದದರಿಂದ ಎಲ್ಲಾ ಸ್ಥಳಗಳ ಲ್ಲಿಯೂ ಇದ್ದಾಳೆಂದು ವಾದಿಸಿದರೆ, ಆ ವಿಚಾರವು ವೇದಾಂತಕ್ಕೆ ಏರಿ ಹೋಯಿತೆ ವಿನಾ ನಮಗೆ ಆದರಣೀಯವಾಗಲಾರದು.

ಮಂಗಳ, ಕಲ್ಯಾಣ, ಶುಭ ಎಂಬೀ ಶಬ್ದಗಳು ಸಮಾನಾರ್ಥವುಳ್ಳವುಗಳು; ಮಂಗಳಪುರ, ಮಂಗಳ ಪೇಟೆ, ಕಲ್ಯಾಣಪುರ, ಕಲ್ಯಾಣದುರ್ಗ ಮುಂತಾದ ಹೆಸರು ಗಳಲ್ಲಿ ಈ ಅರ್ಥವು ಸರಿಹೋಗುತ್ತವೆ. ಆದರೆ ಕಾಂತ ಮಂಗಳ, ಬೀರ ಮಂಗಳ, ಕುಮಾರ ಮಂಗಳಗಳಲ್ಲಿ ಪರಪದವಾಗಿ ಬರುವ ಈ "ಮಂಗಳ"ಕ್ಕೆ ಆ ಅರ್ಥವು ಸರಿಯಾಗಿ ಹೊಂದುವುದಿಲ್ಲ.

ಶ್ರೀ ಗೋವಿಂದ ಪೈಗಳು "ತೆಂಕನಾಡಿ"ನ ಪುಟ ಇಪ್ಪತ್ತರಲ್ಲಿ ಮಂಗಳೂರಿನ ವ್ಯುತ್ಪತ್ತಿಯನ್ನು ಹೀಗೆ ಹೇಳುತ್ತಿದ್ದಾರೆ–"ಮಂಗಳೂರು" ಎಂಬ ಹೆಸರಿನ ನೇರವಾದ ಪರಸದ

ವಾದರೋ "ಪುರ" ವೇ ವಿನಾ "ಊರು" ಅಲ್ಲ. ಬಾಗಲಕೋಟೆ ತಾಲೂಕಿನಲ್ಲೂ, ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಇರುವ "ಸಿರೂರು" ಎಂಬ ಊರಿನ ಮೂಲನಾಮವಾದ ಶ್ರೀಪುರ= ಸಿರಿವುರ= ಸಿರಿಉರ= ಸಿರೂರ (= ಸಿರೂರು) ಆದಂತೆ ಮಂಗಲ (ಅಥವಾ ಮಂಗಲಾ) ಪುರ= ಮಂಗಲಪುರ= ಮಂಗಲಉರ= ಮಂಗಳೂರ ಎಂದಾದುದರ ಪರಪದವೆನಿಸುವ ಊರವನ್ನು ಕನ್ನಡ ಊರು ಎಂದು ಭ್ರಮಿಸಿ, ಕೊನೆಗೆ (ಸಿರೂರ ಹಾಗೆಯೇ) ಮಂಗಳೂರು ಎಂದಾಯಿತಷ್ಟೆ." ಶ್ರೀ ಗೋವಿಂದ ಪೈಗಳ ಈ ವ್ಯುತ್ಪತ್ತಿಕ್ರಮವನ್ನು ಅನುಸರಿಸಿದರೂ, ಪ್ರಶ್ನೆಗೆ ಉತ್ತರಸಿಕ್ಕಿದಂತಾಗಲಿಲ್ಲ. 'ಮಂಗಲ' ವೆಂದರೇನು?

ರೋಮಿಯಾ ರಾಜ್ಯದ ಅರ್‍ರಿಯನ್ (ಕ್ರಿ. ಶ. ಸುಮಾರು ನೂರರಿಂದ ನೂರು ಎಪ್ಪತ್ತೆರಡು) ಎಂಬವನ 'ಇಂಡಿಕಾ' ಎಂಬ ಗ್ರಂಥದಲ್ಲಿ ಮಂಗಳೂರಿಗೆ 'ಮಂಡೆಗೊರ' (Mandegora) ಎಂದೂ, ಕ್ರಿ. ಶ. ಆರನೇ ಶತಮಾನದಲ್ಲಿದ್ದ Kosmos Indiko Pleustes ಎಂಬವನ Christian Topography ಎಂಬ ಗ್ರಂಥದಲ್ಲಿ 'ಮಂಗರಾತ್' (Mangarouth) ಎಂದೂ ಉಲ್ಲೇಖವಿದೆ. ಅಂತೆಯೇ ಕ್ರಿ. ಶ. ಏಳನೂರ ಹದಿನೈದರಲ್ಲಿ ಜಟ್ಯಯನ್ ಎಂಬ ಪಾಂಡ್ಯರಾಜನು 'ಮಂಗಳಪುರವೆನ್ನುಂ ಮಹಾನಗರುಣ್ ಮಹಾರಥರ್‍ಕ್ಕೆ' ಅಂದರೆ ಮಹಾರಥರೆಂಬ ಬಾದಾಮಿಯ ಚಾಲುಕ್ಯರನ್ನು ಮಂಗಳಪುರವೆಂಬ ಮಹಾನಗರದಲ್ಲಿ ಸೋಲಿಸಿದನೆಂದಿದೆ. ಈ ಮಂಗಲಪುರ ಎಂದರೆ ಮಂಗಳೂರೆಂದು ಗೊತ್ತು ಹಚ್ಚಲಾಗಿದೆ. ಹಾಗಾದರೆ ಮಂಗಳೂರು ಕ್ರಿ.ಶ. ಎಂಟನೇ ಶತಕದಲ್ಲಿ ದೊಡ್ಡ ಪಟ್ಟಣವಾಗಿದ್ದಿರಬೇಕು. ಕ್ರಿ. ಶ. ಏಳನೆಯ ಶತಕದ ಅರಬೀಗ್ರಂಥಗಳಲ್ಲಿ ಮಂಗಳೂರಿನ ಹೆಸರಿದೆ. ಅನಂತರದ ಗ್ರಂಥಗಳಲ್ಲಿ ಅದನ್ನು 'ಮಂಜರೂರ್' ಎಂದು ಹೆಸರಿಸಲಾಗಿದೆ (ಅರಬೀ ಭಾಷೆಯಲ್ಲಿ ಗ—ಕಾರವಿಲ್ಲ.)

ವಾಸ್ತುಶಾಸ್ತ್ರದಪ್ರಕಾರ ಮಂಗಲ ಎಂದರೆ ದುರ್ಗರಕ್ಷಣಕ್ಕಾಗಿ ನಗರದಸೈನ್ಯವು ನೆಲೆಗೊಂಡಿರುವ ಸ್ಥಳವೆಂದರ್ಥ; ದಂಡಿನವರಿರುವ ಕೋಟೆಕೇರಿ ಎಂದೂ ಹೇಳಬಹುದು, ಈ ಮಂಗಲವು ನೆಲದಡಿಯಲ್ಲಿದ್ದರೆ ನೆಲಮಂಗಲವಾಯಿತು; ನಗರದ ಎಡಕ್ಕಿದ್ದರೆ ಎಡಮಂಗಲವಾಯಿತು; ದುರ್ಗದ ಆಕಾರವನ್ನೋ ಸೈನ್ಯದ ಮಿತಿಯನ್ನೋ ಅನುಸರಿಸಿಕೊಂಡಿದ್ದರೆ ನಾಗಮಂಗಲವಾಗುತ್ತದೆ; ಇಲ್ಲವೇ ಈಶ್ವರ ಮಂಗಲವಾಗುತ್ತದೆ; ಕೋಟೆಯನ್ನು ಕುಂಬಾರನು ನಿರ್ಮಿಸಿದರೆ ಕುಂಬಾರಮಂಗಲವಾಯಿತು; ಕಾಂತನಕಾಲದ್ದಾದರೆ ಕಾಂತಮಂಗಳವಾಯಿತು; ಬೀರನ ವಶದಲ್ಲಿದ್ದರೆ ಬೀರಮಂಗಲವೆಂದು ಪ್ರಸಿದ್ಧವಾಗುತ್ತದೆ. ಮಂಗಲದ ಒತ್ತಿನಲ್ಲಿದ್ದ ಪೇಟೆ ಮಂಗಲ ಪೇಟೆ; ಪಾಡಿ ಮಂಗಲಪಾಡಿ; ಪುರ ಮಂಗಲಪುರ! ಹೀಗೆ ದುರ್ಗನಿರ್ಮಾಣಕಾಲದ ಮಂಗಲವೆಂಬಹೆಸರು ಕ್ರಮೇಣ ಪಕ್ಕದಲ್ಲಿದ್ದ ಇತರಹಳ್ಳಿಗಳ ಮೇಲೆಬಿದ್ದು, ತುಳು

ನಾಡಿನ ಬಹು ಭಾಗವನ್ನಾಕ್ರಮಿಸಿ, ವಿಜಯನಗರದಕಾಲದಲ್ಲಿ ರಾಜ್ಯವೆನ್ನಿಸಿಕೊಂಡಿತು. ಈ ಕೋಟೆಯಲ್ಲಿನ ಫೌಜ, ವಿಜಯ ದಶಮಿಯದಿನ ದಂಡಯಾತ್ರೆಗೆ ಹೊರಡುವ ಸಂಪ್ರದಾಯವಿತ್ತೆಂಬುದಕ್ಕೆ ಮಂಗಲ ದೇವಸ್ಥಾನದ ರಥೋತ್ಸವವನ್ನು ಬೋಳಾರ ಫೌಜು ಎಂದು ಈಗಲೂ ಕರೆಯುವುದೂ ಸಾಕ್ಷ್ಯವಾಗಿದೆ.

೦೦೦ ೦೦೦ ೦೦೦ ೦೦೦

ಉಡುಪಿ ಎಂಬುದು ನಮ್ಮನಾಡಿನ ಪ್ರಸಿದ್ಧಸ್ಥಳ. ಈ ಹೆಸರು ಹೇಗೆ ಬಂತೆಂಬುದರ ಕುರಿತು ಆಳವಾದ ವಿಚಾರದಿಂದಲೇ ನಿರ್ಣಯಕ್ಕೆ ಬರುವುದುಸಾಧ್ಯ.

ರಾಮಭೋಜ ರಾಜನು ತುಲಾಭಾರ ದಾನಮಾಡಿದ ಪ್ರಾಂತ್ಯವಿದಾದುದರಿಂದ ತೌಲವ ದೇಶವೆಂದೂ, ಇಲ್ಲಿಯ ಆಗಿನ ನಿವಾಸಿಗಳು ತೌಳವರೆಂದು ಹೆಸರುಗೊಂಡರೆಂದೂ ಸಂಪ್ರದಾಯವಾದಿಗಳು ಹೇಳುತ್ತಾರೆ. ಕಾಲ ಕಳೆದಂತೆ ದಕ್ಷ ಶಾಪದಿಂದ ಕಲಾಕ್ಷೀಣನಾದ ಚಂದ್ರನು ತನ್ನ ಕಲಾಪೂರ್ಣತೆಗಾಗಿ ರಜತ ಪೀಠಪುರದ ಸಮೀಪವಿರುವ ಅಬ್ಜಾರಣ್ಯದಲ್ಲಿ (ಅಜ್ಜರಕಾಡು) ತಪಸ್ಸು ಮಾಡತೊಡಗಿದನು. ತಪಸ್ಸಿನಿಂದ ಒಲಿದ ರುದ್ರದೇವನು ಚಂದ್ರನಿಗೆ ವರವೀಯಲು ತುಸು ಯೋಚಿಸಿದನು. ಬಾಲ್ಯದಲ್ಲಿ ಪರಶುರಾಮನು ತನ್ನಲ್ಲಿ ಲೋಕ ಸಂಗ್ರಹಕ್ಕಾಗಿ ವಿದ್ಯಾಭ್ಯಾಸಕ್ಕೆ ಬಂದಾಗ ತನ್ನ ವರದೇವತೆಗೆ ತಾನು ಗುರುವಾದುದರಿಂದ ಅಪರಾಧಿಯಾಗುವೆನು. ತನಗೆ ಪರಿಹಾರ ಹೇಗೆಂದು ಕೇಳಿದಾಗ ಪರಶುರಾಮನು "ನನ್ನ ಆಜ್ಞೆಯಂತೆ ನಿನಗೆ ತಿಳಿದ ಧನುರ್ವಿದ್ಯೆಯನ್ನು ನನ್ನಲ್ಲಿ ಪರೀಕ್ಷೆ ಕೊಡುವುದರಿಂದ ನಿನಗೆ ಯಾವ ದೋಷವೂ ಬರುವುದಿಲ್ಲ. ಒಂದು ವೇಳೆ ಲೋಕದ ಜನರ ಅಪವಾದಕ್ಕೆ ಹೆದರುವೆಯಾದರೆ ಕಲಿಯುಗದಲ್ಲಿ ನಾಲ್ಕು ಸಾವಿರದ ಮುನ್ನೂರು ವರ್ಷ ಕಳೆಯುತ್ತಾ ಬರುವಾಗ ನಾನು ರಜತ ಪೀಠಸ್ಥನಾಗಿ ಲಿಂಗಾಕೃತಿಯಲ್ಲಿ ಸನ್ನಿಹಿತನಾಗುವೆನು. ಆಗ ನನ್ನಿದಿರು ನೀನಿದ್ದು ನಿರಂತರ ನನ್ನನ್ನು ಆರಾಧಿಸು" ಎಂದು ವಿದ್ಯಾಭ್ಯಾಸಾರಂಭದಲ್ಲಿ ಪರಶುರಾಮನು ಅಂದ ಮಾತು ನೆನಪಾಯಿತು. ಆಜ್ಞೆಯನ್ನು ಜ್ಞಾಪಿಸಿ ರಜತ ಪೀಠಪುರದಲ್ಲಿ ಅವತರಿಸುವುದರಿಂದ ಚಂದ್ರನಿಗೂ ಅನುಗ್ರಹಿಸಬಹುದು; ತನ್ನ ಕಾರ್ಯವೂ ನೆರವೇರುವುದೆಂದು ಭಾವಿಸಿ ಕೊಂಡ ಮಹಾರುದ್ರನು ಅನಂತಾಸದ ಮುಂದುಗಡೆ ಪುಷ್ಕರಿಣಿಯಲ್ಲಿ ಉದ್ಭವಿಸಿ ಅಬ್ಜಾರಣ್ಯದಲ್ಲಿ ತಪಸ್ಸು ಮಾಡುತ್ತಿದ್ದ ಚಂದ್ರನಿಗೂ ಅನುಗ್ರಹಿಸಿದನು. ಚಂದ್ರನಿಗೆ ಉಡುಪನೆಂದು ಹೆಸರು. ಅವನು ನಕ್ಷತ್ರ ಪತಿಯಾದುದರಿಂದ ಈ ಹೆಸರುಂಟಾಗಿರುತ್ತದೆ. ಅವನಿದ್ದು ತಪಸ್ಸು ಮಾಡಿದ ಸ್ಥಳವೇ ಉಡುಪಿ ಎಂದು ಕರೆಯಲ್ಪಡುತ್ತಿದೆ. ಇದು ಸ್ಥಳ ಪುರಾಣವುಕೊಡುವ ವಿವರ.

ಶ್ರೀ ಗೋವಿಂದ ಪೈಗಳ ಅಭಿಪ್ರಾಯವು ಈ ಕೆಳಗಿನಂತಿದೆ:

"ಈಗ ಉಡುಪಿಯೆಂದು ಕರೆಯಲ್ಪಡುವ ಊರಿನ ಸರಿಯಾದ ಹೆಸರು ಹಾಗಲ್ಲ. ಅಲ್ಲಿಯ ಶಾಸನಗಳಲ್ಲೂ (ಕ್ರಿ. ಶ. 1763ರಿಂದ 1804ರೊಳಗೆ ಹುಟ್ಟಿದ), ಕೆಳದಿ ನೃಪ ವಿಜಯವೆಂಬ ಲಿಂಗಣ್ಣನ ಕನ್ನಡ ಚಂಪೂ ಕಾವ್ಯದಲ್ಲೂ ಅದರ ಷಷ್ಠೀ ವಿಭಕ್ತಿಯ ಏಕ ವಚನದ ರೂಪವು 'ಉಡುಪಿನ' ಎಂದಿರುವುದರಿಂದ.

ಉಡುಪಿನ ಬಳಿಯೊಳ ಮಲಪಿನ
ಪೊಡವಿಯೊಳಂ ಪಶ್ಚಿಮಾಂಬುಧಿಯ ತೀರದೊಳು ।
ಗ್ಗಡಮೆನೆ ದರಿಯಾ ಬಾದಿನ
ಗಡಮಂ ನಿರ್ಮಾಣ ಗೈಸಿದಂ ಬಸವನೃಪಂ ।

ಅದರ ನೇರಾದ ರೂಪವು 'ಉಡುಪು' ಎಂದೇ ಆಗಿರಬೇಕು. ತುಳು ಭಾಷೆಯಲ್ಲಿ ಈಗಲೂ ಅದನ್ನು 'ಉಡ್ಪು' 'ಒಡ್ಪು' ಎನ್ನುತ್ತಾರೆ. ಚಂದ್ರನಿಗೆ ಉಡುಪ (ಉಡು=ನಕ್ಷತ್ರ; ಪ=ಪತಿ, ಒಡೆಯ) ಎಂದೂ ಹೆಸರು ಉಂಟಷ್ಟೆ. ಆತನಿಗೊಮ್ಮೆ ಅಸಾಧ್ಯವಾದೊಂದು ರೋಗವುಂಟಾಗಿ, ಅದರ ನಿವಾರಣೆಯ ಬಗ್ಗೆ ಆತನು ಅಲ್ಲಿ ತಪಸ್ಸು ಮಾಡಿದನೆಂಬ ಕಾರಣ, ಆ ಸ್ಥಳಕ್ಕೆ ಉಡುಪಿಯೆಂದು ಹೆಸರಾಯಿತೆಂದು ಒಂದು ಪೌರಾಣಿಕ ಕಥೆ ಇದೆ." ಶ್ರೀ ಗೋವಿಂದ ಪೈಗಳ ಅಭಿಪ್ರಾಯ ಪ್ರಕಾರ ಉಡುಪು ಎಂಬ ಬಹಳ ಪ್ರಾಚೀನವಲ್ಲ.

ಆದರೆ ಪುರಂದರ ದಾಸರ ವಚನದಲ್ಲಿ 'ಉಡುಪಿಯ ಕೃಷ್ಣನ' ಎಂದಿರುವುದರಿಂದ ಉಡುಪಿ ಯೆಂಬ ರೂಪವೂ ಇತ್ತೆಂದು ತಿಳಿಯಬಹುದು.

ಭಾಷಾ ಶಾಸ್ತ್ರದ ಮೇಲೆ ಆಧರಿಸಿಕೊಂಡು ಈ ಕೆಳಗಿನಂತೆ ವಿವೇಚನೆ ಮಾಡಬಹುದೋ ಏನೋ? ಕನ್ನಡದಲ್ಲಿ ಊಡು ಎಂದರೆ ಭೋಜನ ಕ್ರಿಯೆ (to take a meal; to eat, on account of ಊಟ & ಊಡಿಸು; to give to eat, to make eat) 'ತರುವೇ ಪಣ್ಗಳ ಮೆಲ್ಲಿ ಮಾತೆ ವಿಷಮಂ ಪೆತ್ತಾ ಅರ್ಭಕರಿಗೆ ಊಡಲ್' ಇದೇ ರೀತಿಯಲ್ಲಿ 'ಉಣ್' ಎಂಬ ಭೋಜನಾರ್ಥದ ಧಾತುವೂ ಇದೆ (to eat what forms a person's or certain animals real meal) ತುಳು ಭಾಷೆಯಲ್ಲಿ 'ಉಣ್' ಎಂದರೆ ಇದೇ ಅರ್ಥವನ್ನು ಕೊಡುತ್ತದೆ. (ಉಣಸು=ಊಟ; ಉಣ್ಪು=ಆಹಾರ, ಅನ್ನ) ಕನ್ನಡದಲ್ಲಿ ಭಾವಾರ್ಥದಲ್ಲಿ ಊಟವೆಂಬ ಶಬ್ದವು ಊಡು ಧಾತುವಿನಿಂದ ಬಂತೆಂದು ಹೇಳಬಹುದು. ಊಠ ಎಂದೂ ಹೇಳುವರು. ಈ ಮಹಾಪ್ರಾಣಕ್ಕೆ ಸಂಸ್ಕೃತ ಜನ್ಯವೇ ಕಾರಣವಾಗಿದೆ. ಸಂಸ್ಕೃತದಲ್ಲಿ ಊಧಸ್, ಊಧ್ ಎಂಬ ಶಬ್ದವಿದೆ. ಇದಕ್ಕೆ ದನದ ಕೆಚ್ಚಲು ಎಂಬ ಅರ್ಥವಿದೆ. ಕರುವಿನ ಆಹಾರದ ಬುತ್ತಿ ಎಂಬ ತಾತ್ಪರ್ಯ (ಆಹಾರ ಸಂಗ್ರಹ.)

ಭೋಜನವಸ್ತು ಎಂಬ ತಾತ್ಪರ್ಯದಿಂದ ಸಾದೃಶ್ಯ ವ್ಯಪದೇಶ ನ್ಯಾಯದಿಂದ ಆಹಾರ ಸಂಗ್ರಹ ವಸ್ತುವಿಗೂ ಊಥ್ ಎಂಬ ಹೆಸರಾಯಿತು. ಇದು ಲಾಕ್ಷಣಿಕಾರ್ಥ. ಈ ಗೌಣಾರ್ಥವು ಆಹಾರ ಸ್ಥಾನದ ವರೆಗೂ ವ್ಯಾಪಿಸಿ ಊಥ ಶಬ್ದವೇ ಊಠವೆಂದೂ ಊಟಾವೆಂದೂ ಆಯಿತು. ದನದ ಕರುವಿಗೆ ಊಥವು ಆಹಾರಸ್ಥಾನವಾಗಿರುವಂತೆ ಮನುಷ್ಯನ ಆಹಾರ ಸ್ಥಾನವು 'ಊಡುಪಿ'ಯಾಗಿ, ಉಡುಪಿ ಎಂಬ ರೂಪವನ್ನು ತಾಳಿರಲೂ ಬಹುದು. 'ಉಣ್ಪು' ಎಂಬುದು 'ಉಡುಪು' ಎಂದು ರೂಪಾಂತರವಾಗಿದ್ದಿರಲೂ ಬಹುದು. ಈ ಭೋಜನ ಶಾಲೆಯು ಅಷ್ಟ ಮಠಾಧಿಪತಿಗಳ ಔದಾರ್ಯದಿಂದ ವ್ಯವಸ್ಥಿತವಾಗಿ ನಡೆದು ಬರುತ್ತಿದೆಯಾದರೂ, ಇದು ರಾಜಕೀಯ ಭೋಜನ ವ್ಯವಸ್ಥೆ ಎಂಬುದನ್ನು ಸೂಚಿಸುವುದಕ್ಕೋ ಎಂಬಂತೆ ಮೈಸೂರು ರಾಜರಿಂದ ದಿನಕ್ಕೆ ರೂಪಾಯಿ ನಾಲ್ಕರಂತೆ ತಸ್ತೀಕು ಹಿಂದಿನ ಕಾಲದಿಂದಲೂ ದೊರಕುತ್ತದೆಂದು ಹೇಳಲ್ಪಟ್ಟಿದೆ.

ಸುಮಧ್ವ ವಿಜಯದ ಎರಡನೇ ಸರ್ಗದಲ್ಲಿ, ಆರನೆಯ ಶ್ಲೋಕದಲ್ಲಿ ಬರುವ 'ರಜತ ಪೀಠ' ಎಂಬ ಸ್ಥಳ ನಾಮಕ್ಕೆ ಭಾವಪ್ರಕಾಶಿಕಾ ಟೀಕಾಕಾರರು 'ಒಡಿಪು' ಎಂಬ ಅಪಭ್ರಷ್ಟ ಸಂಜ್ಞೆ ಇದೆಯೆಂದು ಹೇಳಿದ್ದಾರೆ (ರಜತಪೀಠಪುರಸ್ಯ ಒಡಿಪು ಇತ್ಯಪಭ್ರಷ್ಟ ಸಂಜ್ಞಾ) ಟೀಕಾಕಾರರು 'ಉಡುಪಿ' ಎಂಬ ಪದವನ್ನೇ ಉಪಯೋಗಿಸದಿರುವುದರಿಂದ 'ಒಡಿಪು' ಎಂಬುದೇ ಮೂಲ ಪದವಾಗಿರಬೇಕೆಂದು ಊಹಿಸಬಹುದು. ಟೀಕಾಕಾರರಾದ ನಾರಾಯಣ ಪಂಡಿತಾಚಾರ್ಯರ ಕಾಲವು ಹದಿಮೂರನೇ ಶತಮಾನದ ಅಂತ್ಯ.

ಈ ಸಂದರ್ಭದಲ್ಲಿ ಇನ್ನೊಂದು ಸಂದೇಹವು ಮೂಡುತ್ತದೆ. ನಮ್ಮಲ್ಲಿ ಓಡಾರಿ ಎಂಬ ತೆಲುಗು ಕುಂಬಾರ ಜಾತಿ ಇದೆ. ಓಡಾರಿ ಎಂಬುದು ವಿಕೃತವಾದೊಂದು ತೆಲುಗು ಭಾಷೆಯ ಹೆಸರಾಗಿದ್ದು (Castes and Tribes of Southern India Vol. I, Page 60), ಅನಂತರ ಜಾತಿಯ ಹೆಸರಾಯಿತು. ಈ ಶಬ್ದವು 'ಒಡ್ಡ'ಯಿಂದ ಜನ್ಯವಾಗಿರಬೇಕು. ಈಗಿನ ಒರಿಸ್ಸಾ ದೇಶಕ್ಕೆ 'ಓಡ್ರ'ವೆಂಬ ಹೆಸರಿದ್ದುದು ತಿಳಿದು ಬರುತ್ತದೆ. ಮದ್ರಾಸ್ ಪ್ರಾಂತ್ಯದಲ್ಲಿ 'ಒಡ್ಡ'ಯರಿದ್ದುದು ದಾಖಲೆಯಲ್ಲಿ ಕಂಡು ಬರುತ್ತದೆ. ಈ ಒಡ್ಡೆಯರಿಂದ ಯಾ ಓಡಾರಿಗಳಿಂದ ಬಂದ ಹೆಸರು 'ಒಡಿಪು' ಆಗಿರಲೂ ಬಹುದೆಂದು ನನಗೆ ಹೊಳೆಯುತ್ತದೆ. ಈ ಓಡಾರಿಗಳು (ಒಡ್ಡೆಯರು) ಉಡುಪಿಯೆಂದು ಈಗ ಕರೆಯಲ್ಪಡುವ ಸ್ಥಳದಲ್ಲಿ ಹಿಂದೆ ಬಹು ಸಂಖ್ಯೆಯಲ್ಲಿ ನೆಲೆಸಿದ್ದರು. ಅವರಿನ್ನು ಓಡಾರಿ ಭಾಷೆಯನ್ನೇ (ತೆಲುಗು) ಆಡುತ್ತಾರೆ. ಇದನ್ನೇ ಪುಷ್ಟೀಕರಿಸುವಂತೆ, ಒಡ್ಡಸೇ ಮತ್ತು ಒಡ್ಡಾಡಿ ಎಂಬ ಊರುಗಳೂ ಉಡುಪಿಯ ನೆರೆಹೊರೆಯಲ್ಲಿವೆ. ಈ ಓಡಾರಿಗಳಲ್ಲಿ ಭೋಜ, ಕಲ್ಲು

ಮತ್ತು ಮಣ್ಣು ಓಡಾರಿಗಳೆಂದು ಮೂರು ವಿಧ. ಇವರ ತಿಳಿವಳಿಕೆ ಬಹಳ ಕಡಿಮೆ ಇದ್ದುದರಿಂದ, 'ನೀನಾವ ಓಡಾರಿ' ಎಂಬ ನಾಣ್ಣುಡಿಯನ್ನೇ ಕಟ್ಟುವಂತಾಯಿತು. 'ಒಡ್ಡು' ಎಂದರೆ ಕಲ್ಲುಗಳನ್ನು ಒಂದಕ್ಕೊಂದು ಜೋಡಿಸುವುದೆಂದರ್ಥ [ಒಡ್— ಒಡವು, ಒಡಿಪು (ಉಡುಪು – ಓಡಾರಿ)]

ಹೀಗೆ ಯಾವ ಕಾರಣದಿಂದಲೂ ಬಂದ ಈ ಒಡಿಪು ಎಂಬ ಹೆಸರನ್ನು ಉಡುಪಿ ಎಂದಾಗಿ ಪರಿವರ್ತಿಸಿರಲೂ ಬಹುದು. ಅದರ ಸಮರ್ಥನೆಗಾಗಿ ಪುರಾಣ ಕಥೆಯು ಹುಟ್ಟಿರಲೂ ಬಹುದು. ಅಥವಾ ಇಲ್ಲಿ ಮೊದಲಿದ್ದ ಚಂದ್ರನಾಥ ಬಸದಿಯನ್ನು ಚಂದ್ರ ಮೌಳೀಶ್ವರ ದೇವಾಲಯವಾಗಿ ಶ್ರೀ ಶಂಕರಾಚಾರ್ಯರು ಯಾ ಅವರ ಮತಾನು ಯಾಯಿಗಳು ರೂಪಾಂತರಗೊಳಿಸಿದ ಫಲವಾಗಿ ಈ ಪುರಾಣ ಕಥೆ ಹುಟ್ಟಿರಬಹುದು. ಅನಂತನಾಥ ಬಸದಿಯು ಅನಂತೇಶ್ವರವಾಗಿ ಶ್ರೀ ಶಂಕರಾಚಾರ್ಯರ ಅನಂತರ ರೂಪಾಂತರಗೊಂಡು ಮಾಧ್ವರಿಂದ ಅನಂತಾಸನವೆಂದು ಕರೆಯಲ್ಪಡುತ್ತದೆ.

ಇನ್ನೊಂದೆಡೆ ವಿಚಾರವನ್ನು ಹರಿಯಿಸೋಣ:

ಉಡುಪಿಯ ಮಧ್ವಸಿದ್ಧಾಂತ ಗ್ರಂಥಾಲಯದಿಂದ ಪ್ರಕಾಶಿತವಾಗಿ (1913) ಕೆ. ಪದ್ಮನಾಭ ಶಾಸ್ತ್ರಿ—ವೆ. ಸುಬ್ರಾಯಾಚಾರ್ಯರು ತಾವು ಪರಿಶೋಧಿಸಿದ ರಜತ ಪೀಠಪುರ ಮಹಾತ್ಮೆಯ ಪೀಠಿಕೆಯಲ್ಲಿ ಅವರಿಗೆ ಸಿಕ್ಕಿದ ಸ್ಕಂದಪುರಾಣಾಂತರ್ಗತ ಸಹ್ಯಾದ್ರಿ ಖಂಡದ ತಾಳಪತ್ರ ಸಂಪುಟದಲ್ಲಿ ಶಿಥಿಲವಾದ ಪತ್ರದಲ್ಲಿ ಉಡುಪಿ ಎಂಬ ಹೆಸರಿನ ಕುರಿತು ಈ ರೀತಿ ಶಂಕಿಸಿದ್ದಾರೆ.

ಉಡುಪಿ ಎಂಬ ಹೆಸರು ಚಂದ್ರನಿಂದಾಗಿ ಬಂದಂತೆಯೇ ನಾವೆಯಲ್ಲಿ ಬಂದ ಕೃಷ್ಣನಿಂದಾಗಿಯೂ ಬಂದಿರಬಹುದು. ಅಥವಾ ಸಂಸಾರ ಸಾಗರವನ್ನು ದಾಟಿಸುವ ನಾವೆಯಂತಿರುವ ಶ್ರೀ ಕೃಷ್ಣನಿಂದಾಗಿ ಬಂದಿರಬಹುದು ಅಥವಾ ಚಂದ್ರನನ್ನು ಧರಿಸಿದ ಈಶ್ವರ ಚಂದ್ರಶೇಖರನಿಂದಲೂ ಆಗಿರಬಹುದು. ಉಡುಪ ಎಂದರೆ ಸಂಸ್ಕೃತದಲ್ಲಿ ನಾವೆಗೆ ಹೆಸರು (ಉಡೂನಾಂ ಪತ್ಯುಃ ಚಂದ್ರಸ್ಯ ತಪಸ್ಥಾನಭೂತತ್ವಾತ್ ಉಡುಪಿನಾ ಚಂದ್ರಶೇಖರೇಣಾಧಿಷ್ಠಿತತ್ವಾತ್ ಸಂಸಾರಸಾಗರಸಂತರಣ ಪ್ಲವಾಯಿತ ಶ್ರೀಕೃಷ್ಣಾಧಿಷ್ಠಿತತ್ವಾದ್ವಾ)

ಈ ವಿವರಣೆಯಲ್ಲಿ ರೂಪಕವೇ ಪ್ರಧಾನವಾಗಿ ಕಂಡು ಬರುತ್ತದೆ ವಿನಾ, ನಿಜತ್ವ ಮೂಡಿ ಬಂದಂತೆ ಕಾಣುವುದಿಲ್ಲ.

oo oo oo oo

ಸುಬ್ರಹ್ಮಣ್ಯವು ನಮ್ಮ ತುಳುನಾಡಿನ ಅತಿಪ್ರಾಚೀನವಾದೊಂದು ಸ್ಥಳವಾಗಿದೆ. ಈ ಸ್ಥಳವು ಸ್ಕಂದೋಪಾಸನೆಗೆ ಪ್ರಸಿದ್ಧ. ಈ ಸ್ಕಂದನನ್ನು ಕುಕ್ಕೇ ಸುಬ್ರಹ್ಮಣ್ಯನೆಂದೂ ಕರೆಯುತ್ತಾರೆ. ಕಾರಣ ಈ ಸುಬ್ರಹ್ಮಣ್ಯ ಕ್ಷೇತ್ರವು ಪೂರ್ವದಲ್ಲಿ ಕುಕ್ಕೇ

ಪಟ್ಟಣವೆಂದು ಪ್ರಸಿದ್ಧವಾಗಿತ್ತೆಂದು ಶಾಸನಗಳಿಂದಲೂ, ಗ್ರಂಥಗಳಿಂದಲೂ ಜನರ ಹೇಳಿಕೆಯಿಂದಲೂ ತಿಳಿದು ಬರುತ್ತದೆ. ‘ಶ್ರೀ ಸುಬ್ರಹ್ಮಣ್ಯ ಕ್ಷೇತ್ರ ವರ್ಣನೆ’ ಎಂಬ ಪುಸ್ತಕದಲ್ಲಿ ಈ ಕೆಲವು ಅಭಿಪ್ರಾಯಗಳನ್ನು ವ್ಯಕ್ತ ಪಡಿಸಿದೆ. ಶ್ರೀ ಶಂಕರಾಚಾರ್ಯ ವಿರಚಿತ ಸುಬ್ರಹ್ಮಣ್ಯ ಭುಜಂಗ ಪ್ರಯಾತ ಸ್ತೋತ್ರದಲ್ಲಿ ‘ಭಜೇ ಕುಕ್ಕೆಲಿಂಗಂ’ ಎಂದು ಈ ಸ್ಥಳದ ಉಲ್ಲೇಖವಿದೆ. ಇಲ್ಲಿಯ ಸ್ಥಳ ಪುರಾಣ ಪ್ರಕಾರ ಅನೇಕ ದೇವ ಋಷಿಗಳು, ಅನೇಕ ಶಿವಲಿಂಗಗಳನ್ನು ಈ ಕ್ಷೇತ್ರದಲ್ಲಿ ಸ್ಥಾಪಿಸಿದರೆಂದೂ ವಾಸುಕಿಯೂ ಬಂದು ಶಿವಲಿಂಗವನ್ನು ತಾನು ವಾಸಿಸುವ ಗುಹಾದ್ವಾರದಲ್ಲಿ ಸ್ಥಾಪಿಸಿ ಸ್ಕಂದ ಸ್ವಾಮಿಯ ಕಲಾಂಶವನ್ನು ಒಳಗೊಂಡು ನಿರಂತರ ಗುಹೆಯಲ್ಲಿ ವಾಸಿಸುತ್ತಿರುವನೆಂದೂ ಹೇಳಲ್ಪಟ್ಟಿದೆ. ಇಂತಹ ಪ್ರಸಿದ್ಧ ಶಿವಲಿಂಗವನ್ನು ಉಲ್ಲೇಖಿಸುವುದೇ ಕುಕ್ಕೆ ಲಿಂಗವೆಂಬ ಶಬ್ದದ ಅರ್ಥವಾಗಿರುವುದೆಂದು ತಿಳಿಯ ಬೇಕು. ಸಂಸ್ಕೃತದಲ್ಲಿ ಕುಕ್ಷಿಯೆಂದರೆ ಗುಹೆ ಎಂದರ್ಥವೂ ಇದೆ. (ತ್ರಾಸಾರ್ಥ ಮಸ್ಮಿನ್ನಃ ಮದ್ರಿಕುಕ್ಷೌ—ರಘುವಂಶ ಸರ್ಗ 2, ಪದ್ಯ 38) ಕುಕ್ಷಿ ಎಂಬ ಶಬ್ದವು ತದ್ಭವವಾಗಿ ಕನ್ನಡದಲ್ಲಿ ಕುಕ್ಕೆ ಎಂದಾಗುವುದು. ಕುಕ್ಕೆಯಲ್ಲಿ ಸ್ಥಾಪಿಸಲ್ಪಟ್ಟ ಲಿಂಗ (ವಾಸುಕಿಯ ಗುಹಾದ್ವಾರದಲ್ಲಿ ಸ್ಥಾಪಿಸಿದ ಲಿಂಗ) ಪ್ರಸಿದ್ಧಿಯಿಂದ ಕುಕ್ಕೆಲಿಂಗವೆಂದು ಹೆಸರಾಗಿ ಆ ಮೂಲಕ ಸ್ಥಳಕ್ಕೂ ಕುಕ್ಕೆಪುರವೆಂಬ ಪ್ರಸಿದ್ಧಿ ಬಂದಿರಬಹುದು. (ನೂರ ಹದಿಮೂರು ದಿವ್ಯಶೈವ ಸ್ಥಳಗಳನ್ನು ವರ್ಣಿಸುವ ‘ಲಲಿತಾಗಮಜ್ಞಾನ ಪಾದ ಶಿವಲಿಂಗ ಪ್ರಾದುರ್ಭಾವ ಪಟಲ’ದಲ್ಲಿ ಸುಬ್ರಹ್ಮಣ್ಯೇ ಹಿತೇಶ್ವರ’ ಎಂದು ಹೇಳಿದೆಯಾಗಿ ಶೈವನಿಧಿಯಲ್ಲಿದೆ. ಸುಬ್ರಹ್ಮಣ್ಯ ಸ್ಥಳದಲ್ಲಿ (ಅಹಿಪ=ವಾಸುಕಿ,) ಸ್ಥಾಪಿಸಿದ ಈಶ್ವರ ಲಿಂಗವು ಇದೆ ಎಂದು ಅದರ ಅರ್ಥವು ಅಥವಾ ಕುಕ್ಕುಟ ಧ್ವಜನಾದ ಸ್ಕಂದ ಸ್ವಾಮಿಯು ನೆಲಸಿರುವ ಪಟ್ಟಣವಾಗಿರುವುದರಿಂದ ಕುಕ್ಕೇ ಪಟ್ಟಣವೆಂದೂ, ಕುಕ್ಕುಟ ಧ್ವಜನು ಸ್ಥಾಪಿಸಿದ ಲಿಂಗಗಳಾದುದರಿಂದ ಕುಕ್ಕೇ ಲಿಂಗಗಳೆಂದೂ ಅರ್ಥವಾಗಿ ಈ ಸ್ಥಳಕ್ಕೆ ಕುಕ್ಕೇ ಪಟ್ಣ ಕುಕ್ಕೇ ಲಿಂಗಳೆಂದೂ ಹೆಸರಾಗಿರಬಹುದು. ಕುಕ್ಕುಟ ಎಂದರೆ ಕೋಳಿ; ನವಿಲು ಧ್ವಜವಾಗಿ ಉಳ್ಳವ, ಪಟ್ಟಣವೆಂಬರ್ಥಕ್ಕೆ ಮಧ್ಯಪದ ಲೋಪವಾಗಿದೆ ಎಂದೂ, ಮರ್ಕ=ಮರ್ಕಟ ಎಂಬಂತೆ, ಕುಕ್ಕು=ಕುಕ್ಕುಟ ಶಬ್ದಗಳೂ ಸಮಾನಾರ್ಥಗಳೆಂದೂ, ತದ್ಭವವಾಗಿ ಕುಕ್ಕು ಶಬ್ದವು ‘ಕುಕ್ಕೆ’ ಆಗಿ ಮಾರ್ಪಟ್ಟಿದೆಯೆಂದೂ ತಿಳಿಯ ಬೇಕು. ಈ ಅರ್ಥವೂ ಪುರಾಣ ಸಮ್ಮತವಾದುದೇ. ಈ ಮೊದಲು ಕುಕ್ಕೇ ಲಿಂಗಗಳೆಂದರೆ ಕುಕ್ಕೆಗಳಲ್ಲಿ ಲಿಂಗವನ್ನೂ ಮುಚ್ಚಿಟ್ಟು ಪೂಜಿಸುತ್ತಿದ್ದರು ಎಂದು ಮುಂತಾದ ಕಟ್ಟು ಕಥೆಗಳೂ ಈ ಕುಕ್ಕೆ ಶಬ್ದದ ಮೂಲಾರ್ಥವು ಮರೆತು ಹೋದ ಕಾಲದಲ್ಲಿ ಗ್ರಾಮೀಣರು ಕರ್ಣ ರಂಜನೆಗಾಗಿ, ಮಕ್ಕಳಿಗೆ ಹೇಳುತ್ತಿದ್ದ ಕಥೆಗಳೆಂದೂ

ವಿಮರ್ಶಕರು ತಿಳಿಯುತ್ತಾರೆ. ಕೇವಲ ಮನೋರಂಜನೆಗಾಗಿ ಸ್ಥಳದ ಹೆಸರುಗಳಿಗೆ ಹೊಂದಿಕೆಯಾಗುವಂತೆ ಕಥೆ ಕಟ್ಟುವ ಸಂಪ್ರದಾಯ ಇಂದಿಗೂ ನಡೆಯುತ್ತದೆ.

ಮೇಲಿನ ವಿವರಣೆಯು ವಿಮರ್ಶೆಯ ಫಲವಾಗಿ ದೊರೆತುದಾಗಿದೆ. ಆದರೆ ಕೆಲವು ಸಂದೇಹಗಳು ನಿವಾರಣೆಯಾಗದೆ ಉಳಿದಿವೆ. ಕುಕ್ಷಿ ಎಂಬ ಸಂಸ್ಕೃತ ಶಬ್ದದ ತದ್ಭವವು ಕುಕ್ಕೆ ಎಂದಾಗಲಾರದು. ಕುಕ್ಕು ಮತ್ತು ಕುಕ್ಕುಟಗಳೆಂಬುವು ಸಮಾನಾರ್ಥ ಪದಗಳಲ್ಲ. ಕುಕ್ಕು ಎಂದರೆ ಕೊಕ್ಕರೆ, ಕುಕ್ಕುಟ ಎಂದರೆ ಕೋಳಿ. ಆದುದರಿಂದ ಕುಕ್ಕು ತದ್ಭವವಾಗಿ ಕುಕ್ಕೆ ಆಗಲು ಸಾಧ್ಯವಿಲ್ಲ ಎಂದು ನನಗನಿಸುತ್ತದೆ. ಸನತ್ಕುಮಾರ ಸಂಹಿತೆಯಲ್ಲಿರುವ ಸುಬ್ರಹ್ಮಣ್ಯವು ತುಳುನಾಡಿನ ಸುಬ್ರಹ್ಮಣ್ಯವೇ, ಮೈಸೂರಿನ ಸುಬ್ರಹ್ಮಣ್ಯವೇ ಎಂಬುದು ಸ್ಪಷ್ಟವಿಲ್ಲ.

ಹಾಗಾದರೆ ಈ ಕುಕ್ಕೆ ಎಂಬುದಕ್ಕೆ ಏನರ್ಥ? ಶ್ರೀ ಗೋವಿಂದ ಪೈಗಳ ನಿರ್ಧಾರ ಸಮಂಜಸವೆನಿಸುತ್ತದೆ. (ಪಂಚಕಜ್ಜಾಯ—ಇದರಲ್ಲಿ ಇತಿಹಾಸದ ಇರುಳಿನಲ್ಲಿ ತುಳುನಾಡು ಎಂಬ ಶ್ರೀ ಗೋವಿಂದ ಪೈಗಳ ಲೇಖನ ಪುಟ 101). 'ಅತ್ತಾವರ ದೈವಂಗುಳೆ ಪಾಡ್ದ'ನ ಎಂಬ ತುಳು ಭೂತ ಪ್ರಾರ್ಥನೆ (ಅಥವಾ ಭೂತದ ಹಾಡು)ಯಲ್ಲಿ 'ಕುಕ್ಕೆ ಸುಬ್ರಾಯ ದೇವೆರ್' ಎಂದಿದೆ. ಸ್ಕಂದ ಷಷ್ಠಿಯ ದಿನಕ್ಕೆ ತುಳುವಿನಲ್ಲಿಯೂ ಕನ್ನಡದಲ್ಲಿಯೂ ಈ ಜಿಲ್ಲೆಯಲ್ಲಿ ವಾಡಿಕೆಯಾಗಿಹೇಳುವುದು 'ಕುಕ್ಕೇ ಸಟ್ಟಿ' ಅಥವಾ 'ಕುಕ್ಕೇ ಷಷ್ಠಿ' ಎಂದೇ. ಕುಕ್ಕೆ ಎಂಬ ತುಳುಶಬ್ದಕ್ಕೆ ಮಗು, ಮಗ ಎಂದರ್ಥವು. ಮಗು ಎಂಬರ್ಥದ ಕುಕ್ಕೆ ಶಬ್ದವು ಇಂದಿನ ತುಳು ಭಾಷೆಯಲ್ಲಿ ಕಳೆದು ಹೋಗಿದೆ. ಆದರೂ ನಿಮ್ನ ವರ್ಗದ ಜನರು ಈ ಪದವನ್ನು ಇನ್ನೂ ಉಪಯೋಗಿಸುತ್ತಿದ್ದಾರೆ. ಆದ್ದರಿಂದ ಕುಕ್ಕೆ ಎಂಬುದು ಸ್ಕಂದನ 'ಕುಮಾರ' ಎಂಬ ಹೆಸರಿನ ಅಚ್ಚ ತುಳು ಭಾಷೆಯ ರೂಪ. ಹೀಗಾದುದರಿಂದ 'ಕುಕ್ಕೆ ಸುಬ್ರಾಯ ದೇವೇರ್' ಅಂದರೆ 'ಸರ್ಪ (ರೂಪ)ನಾದ ಕುಮಾರ ದೇವರು' ಎಂದಾಗುತ್ತದೆ. ಕಾಡುಕುಕ್ಕೆ, ಕುಕ್ಕೇ ಹಳ್ಳಿ ಎಂದು ಕರೆಯಲ್ಪಡುವ ಊರುಗಳಲ್ಲೂ ಸುಬ್ರಹ್ಮಣ್ಯನ ಸ್ಥಾಪನೆಯಾಗಿದ್ದಿತಾದ್ದರಿಂದ, ವಾಸುಕಿಯು ಕುಕ್ಷಿಯು ಸಮೀಪ ಲಿಂಗ ಸ್ಥಾಪನ ಮಾಡಿದನೆಂಬುದು ಸತ್ಯಕ್ಕಿಂತ ಅದು ಕಥೆಯಾಗಿರುವುದು ಹೆಚ್ಚು ಸಂಭವ.

ooo ooo ooo ooo

ಸ್ಥಳನಾಮಗಳ ಕುರಿತು ಕೊನೆಯ ನಿರ್ಣಯಕ್ಕೆ ಬರುವುದು ಕಷ್ಟವಾದರೂ ವಿಮರ್ಶೆಯಿಂದ ಅನೇಕ ಸತ್ಯ ಸಂಗತಿಗಳನ್ನು ತಿಳಿದು ಕೊಳ್ಳ ಬಹುದು. ಕುರ್ಕಾಲು ಎಂಬ ಊರಿನ ಹತ್ತಿರ ಸುಭಾಸ ನಗರವಿದೆ. ಇದು ನಾಲ್ಕೈದು ವರ್ಷಗಳಿಂದೀಚೆಗಿನ ಹೆಸರು. ಹಿಂದೆ ಅದಕ್ಕೆ ಬಗ್ಯೇರಕಲ್ಲು ಎಂಬ ಹೆಸರಿತ್ತು.

'ಬಗ್ಯೇರ' ಎಂಬುದು ನಿಮ್ನವರ್ಗದ ಒಂದು ಜಾತಿ. ಈ ಜಾತಿಯವರ ವಸತಿಯಿಂದ ಈ ಹೆಸರು ಬಂದಿರಲೇ ಬೇಕು. ಈ ಜಾತಿಯ ಕುರಿತು ಥರ್ಸ್ಟನ್‌ರವರು ಅವರ ಗ್ರಂಥದ ಮೊದಲಭಾಗದ ಅಂತ್ಯನಲ್ಲಿ ಒಂದು ಚಿಕ್ಕ ಒಕ್ಕಣೆಯನ್ನಿತ್ತಿದ್ದಾರೆ. ಉಡುಪಿಯ ಅತೀ ಸಮೀಪದಲ್ಲಿ 'ಸಗರಿ' ಇದೆ. ಈ ಹೆಸರು ಹೇಗೆ ಬಂದಿರಬಹುದು? ನಮ್ಮ ನಾಡಿನಲ್ಲಿ 'ಉಪ್ಪಾರ' ಎಂಬ ಉಪ್ಪು ತಯಾರಿಸುವ ತೆಲುಗು ಜಾತಿಯೊಂದು ಇದ್ದಂತೆ ಎಲ್ಲಾ ದಾಖಲೆಗಳೂ ತಿಳಿಸುತ್ತವೆ. ಅವರು ವಾಸಿಸಿದ ಊರುಗಳಲ್ಲವೇ ಉಪ್ಪರವಳ್ಳಿ, ಉಬ್ಬರ ವಂಗಳ, ಉಪ್ಪಳ, ಉಬರಡ್ಕ ಮಿತ್ತೂರ? ಈ ಉಪ್ಪಾರರಲ್ಲಿ 'ಸಗರ' ಎಂಬುದು ಒಳ ಪ್ರಭೇದ. ಈ ಸಗರರಿಂದಲೇ 'ಸಗರಿ' ಎನ್ನುವ ಹೆಸರು ಬಂದಿರಬೇಕು. (Mysore Gazetteer Vol. I ) ಅಂತೆಯೇ 'ಸದಾವಡಿ' ಇದು ಸದಾ ಎಂಬ ಧಾರವಾಡ, ಮೈಸೂರು ಪ್ರದೇಶಗಳಿಂದ ನಮ್ಮ ನಾಡಿನಲ್ಲಿ ನೆಲೆಸಿಪ ಜನರ ನಿವಾಸ

ಗುರುವಿದ್ದ ಪುರ ಗುರುಪುರ, ದೇವರಿಗೆ ಬಿಟ್ಟಕಾಡು ದೇವಂಗ್ಕಾಡು, ಭಟ್ಟರಿಗೆ ಸೇರಿದ ಬೆಟ್ಟು ಭಟ್ರಬೆಟ್ಟು, ಸೋಮವಾರ ಸಂತೆಯಿರುವ ಸ್ಥಳ ಸೋಮವಾರ ಪೇಟೆ, ಭಾವದವರ ಬೆಟ್ಟು ಭಾವಂತ ಬೆಟ್ಟು, ಸೇವಂತ ಇಲ್ಲವೇ ಸಾವಂತನ ಊರು ಸೇವಂತೂರು, ಓಡಾರಿಗೆ ಬಿಟ್ಟ ಬೆಟ್ಟು ಓಡ್ರಬೆಟ್ಟು, ಸುಂಕ ಎತ್ತುವ ಕಟ್ಟೆ ಸುಂಕದಕಟ್ಟೆ, ಕಟ್ಟೆಯಡಿ ಕಟ್ಪಾಡಿ, ಹಡಗು ಲಂಗರುಹಾಕಿ ನಿಲ್ಲುವ ಸ್ಥಳ ಹಂಗರ್ಕಟ್ಟೆ, ಕಡೆ ಶಿವಾಲಯವಿರುವ ಕ್ಷೇತ್ರ ಕಡೇ ಶ್ವಾಲ್ಯ, ಧರ್ಮಕ್ಕಾಗಿ ಪ್ರಸಿದ್ಧ ಪಟ್ಟ ಸ್ಥಳ ಧರ್ಮಸ್ಥಳ, ಎರಡು ಕೇರಿ ಇದ್ದ ಇಕ್ಕೇರಿ, ನಾಲ್ಕು ಕೇರಿ ಇದ್ದ ನಾಲ್ಕೇರಿ, ನಾಲ್ವತ್ತು ಒಕ್ಕಲು ಇದ್ದ ನಾಪೊಕ್ಲು, ಅರುವತ್ತು ಒಕ್ಕಲು ಇದ್ದ ಅರುವತ್ತೊಕ್ಲು, ಒಂಭತ್ತು ಕೆರೆ ಇದ್ದ ಒಂಭತ್ಕೆರೆ, ಹಿರಿಯಂಗಡಿ, ಹಳೇಬೀಡು, ಪಡುಕೋಣೆ, ನಡುಬೈಲು, ಬೈಲೂರು, ಇಸುಮೈಲು, ಹೊಸಮಠ ಇತ್ಯಾದಿಗಳ ಅರ್ಥ ಸುಲಭವಾಗಿ ಗೊತ್ತಾಗುತ್ತದೆ. ಹೀಗೆ ಸುಲಭವಾಗಿ ತೋರಿದರೂ ಒಂದೊಂದು ಕಡೆ ನಮ್ಮ ವಿಚಾರವು ಬರೇ ಶಬ್ದ ಸಾದೃಶ್ಯದಿಂದ ಮೋಸ ಹೋಗುವುದುಂಟು. ಜಂಗಮಯ್ಯನ ಮಠವಿದ್ದುದರಿಂದ ಹೊಸಮಠ, ಮಠಂತ ಬೆಟ್ಟು, ಕಾಡುಮಠ, ಮಠಹಿತ್ಲು ಎಂಬ ಹೆಸರುಗಳುಂಟಾದುವು. ಇದೇನೋ ನಿಜ. ಆದರೆ ಮಂಗಳೂರಿನ ಬೊಳ್ಮಠದಲ್ಲಿ ಹಿಂದೆ ಒಂದು ಕಾಲದಲ್ಲಿ ಜಂಗಮ ಮಠ ಇತ್ತೆಂಬ ಊಹೆ ಮಾತ್ರ ತಪ್ಪು. ಬೊಳ್ಮಠ ಪದದಲ್ಲಿ ಮಠಕ್ಕೂ ಜಂಗಮಯ್ಯನ ಮಠಕ್ಕೂ ಯಾವ ಸಂಬಂಧವೂ ಇಲ್ಲ. ಈಗ ಬೊಳ್ಮಠವೆಂಬ ಹೆಸರಿನಿಂದ ಕರೆಯಲಾಗುವ ಸ್ಥಳದಲ್ಲಿ ಸುಮಾರು 80 ವರ್ಷಗಳ ಹಿಂದೆ ಇದ್ದ ಯುರೋಪಿಯನೊಬ್ಬನು ತನ್ನ ಮನೆಗೆ 'Belmont' (ಬೆಲ್ಮೋಂಟು) ಎಂಬ ಹೆಸರನ್ನಿಟ್ಟಿದ್ದನು. ಈ ಬೆಲ್ಮೋಂಟ್ ಶಬ್ದದ ಅಪಭ್ರಂಶವೇ

ಬೊಳ್ಕ್ರತ ಎಂದು ಹೇಳುತ್ತಾರೆ. ಶಬ್ದಸಾದೃಶ್ಯ ದೊರೆಯುವುದೇ ತಡ; ಮನುಷ್ಯನು ಸ್ಥಳಗಳ ಹೆಸರುಗಳನ್ನು ಕುರಿತು ಬೇಕಾದ ಕಟ್ಟು ಕಥೆಗಳನ್ನು ಕಲ್ಪಿಸುತ್ತಾನೆ. ಬಲ್ಮಟದಲ್ಲಿ ಒಂದು ಕಾಲದಲ್ಲಿ ದೊಡ್ಡ ಶಿವಾಲಯವಿದ್ದು, ಅದನ್ನು ಕೆಡಿಸಿ ಅಲ್ಲಿ ಕಟ್ಟಿಸಿದ ಕ್ರೈಸ್ತಗುಡಿಯಿಂದ ಬೆಲ್ಮಠವೆಂಬುದಾಗಿಯೂ; ಭೂತಾಳಪಾಂಡ್ಯನು ತನ್ನ ಹನ್ನೆರಡು ಮಂದಿ ಕನ್ಯೆಯರಿಗಾಗಿ ಪಟ್ಟಣವನ್ನು ಕಟ್ಟಿಸಿ, ಅದನ್ನು ಬಾರಕನ್ಯಾಪುರವೆಂಬ ಹೆಸರಿನಿಂದ ಕರೆಯಬೇಕೆಂದು ಮಾಡಿದ ಆಜ್ಞೆಯಿಂದ ಬಾರಗನ್ಯಾಪುರ ಇಲ್ಲವೇ ಬಾರಕೂರು ಎಂಬ ಹೆಸರು ಬಂತೆಂಬುದಾಗಿಯೂ; ಮಹಿಷಾಸುರನನ್ನು ವಧಿಸಿದ ಪುರಾಣ ಕಥೆಯಿಂದ ಮೈಸೂರು ಆಯಿತೆಂಬುದಾಗಿಯೂ; ಕೊಂಕಣಾ ದೇವಿಯ ನಿಮಿತ್ತ ಪರಶುರಾಮನು ಪಶ್ಚಿಮ ಘಟ್ಟದ ಕೆಳಗಿನ ಬಯಲಿಗೆ ಕೊಂಕಣವೆಂದು ಹೆಸರಿಟ್ಟನೆಂಬುದಾಗಿಯೂ ಕಾಲಿಲ್ಲದ ಕಥೆಗಳು ಕಲ್ಪಿಸಲ್ಪಟ್ಟವೆ. ಮೂಲವನ್ನು ಹುಡುಕುವವರು ಇಂತಹ ಕಟ್ಟು ಕಥೆಗಳನ್ನು ಹಳೆಯ ಮಾತುಗಳೆಂದು ನಂಬಿದರೆ ಭಾದಕವಿಲ್ಲ. ಆದರೆ ಅವುಗಳನ್ನಾಧಾರವಾಗಿರಿಸಿ ಮುಂದುವರಿದರೆ ಅವರ ನಿರ್ಣಯಗಳು ಸಾಧುವಾಗಲು ಶಕ್ಯವಿಲ್ಲ.

ಅನೇಕ ಹೆಸರುಗಳು ಮೂಲದಲ್ಲಿ ದೇಶೀಯ ಭಾಷೆಯಲ್ಲಿದ್ದು ಅನಂತರ ಸಂಸ್ಕೃತೀಕರಿಸಲ್ಪಟ್ಟದ್ದು ಸ್ಪಷ್ಟ ಕಂಡುಬರುತ್ತದೆ. ಮಧ್ವವಿಜಯದಲ್ಲಿ ಬರುವ ಊರುಗಳು :—

ಶಿವಳ್ಳಿ — ಶಿವರೂಪ್ಯ; ಕುಡುಪೂರು — ಕಾನನ ದೇವತಾಸದನ; ಕೊಡಿಪಾಡಿ — ಪಾಗ್ರ್ಯವಾಟ; ಕಚಿನಾಡು — ವಿಷಯ; ಮೂಡೆಂಬಾಡಿ — ಪೂರ್ವವಾಟ; ಕೆವುಡದೆಲ — ಪಾರಂತೀಸುರ ಸದನ.

ತುಳುನಾಡು ಉತ್ತರ ದಕ್ಷಿಣ ಜಿಲ್ಲೆಗಳನ್ನು ಸೇರಿದ್ದರೂ, ನಾನು ಸ್ಥಳನಾಮಗಳ ವರ್ಗೀಕರಣಕ್ಕೆ ವಿವೇಚನೆಗೆ ದಕ್ಷಿಣ ಕನ್ನಡದ ಹೆಸರುಗಳನ್ನೇ ಹೆಚ್ಚಾಗಿ ಆಯ್ದುಕೊಂಡಿದ್ದೇನೆ. ಉತ್ತರ ಕನ್ನಡದ ಊರುಗಳ ಸರಿಯಾದ ಪರಿಚಯವಿಲ್ಲದುದೇ ಇದಕ್ಕೆ ಕಾರಣ. ಆದರೂ ನಾನು ಅವಲಂಬಿಸಿದ ಕ್ರಮವು ಅಲ್ಲಿಯ ಹೆಸರುಗಳಿಗೂ ಅನ್ವಯಿಸುವುದರಲ್ಲಿ ಸಂದೇಹವಿಲ್ಲ. ನಮ್ಮ ಜಿಲ್ಲೆಯ ಹಳ್ಳಿ ಪಳ್ಳಿಗಳ ಹೆಸರುಗಳನ್ನು ಕುರಿತು ನನ್ನ ಅಭ್ಯಾಸಕ್ಕೆ ಬಂದ ಕೆಲವು ಅಂಶಗಳನ್ನು ಹೇಳಿದ್ದಾಯಿತು. ಈ ಅಂಶಗಳು ಸಂಪೂರ್ಣ ಸತ್ಯವೆಂದು ನನ್ನ ಹೇಳಿಕೆಯಲ್ಲ. ನಾನು ಹೋದ ಸರಣಿಯಲ್ಲಿಯೇ ನನಗಿಂತ ಸಮರ್ಥರಾದ ವಾಚಕರು ತಮ್ಮ ತಮ್ಮ ಸೀಮೆಯ, ಹಳ್ಳಿಗಳ ಹೆಸರುಗಳನ್ನು ವಿಮರ್ಶಿಸುತ್ತಾ ಹೋದರೆ, ಇಲ್ಲಿ ನನ್ನಿಂದ ತಪ್ಪಾಗಿ ಗ್ರಹಿಸಲ್ಪಟ್ಟ ಇಲ್ಲವೆ, ನನಗೆ ಗೊತ್ತಾಗದ ಅನೇಕ ಅಮೂಲ್ಯಾಂಶಗಳನ್ನು ಅವರು ಕಂಡು ಹಿಡಿಯಬಹುದೆಂಬ ಭರವಸೆ ನನಗಿದೆ. ಅಂತೂ ನಿರ್ಧಾರಗಳನ್ನು

ಇಚ್ಛಾನುಸಾರ ಮಾಡುವುದರಲ್ಲಿ ಅರ್ಥವಿಲ್ಲ. ಆಧಾರ ಸಹಿತ ಚರ್ಚಿಸಬೇಕು. ಅಂತೂ ತುಳುನಾಡು ಅಖಿಲ ಕರ್ನಾಟಕವನ್ನು ಸ್ಥಳನಾಮಗಳಲ್ಲಿ ಹೋಲುತ್ತಿರುವುದು ಗಣನೀಯ ವಿಷಯವಾಗಿದೆ.

Manual of the Administration of the Madras Presidency (Vol II-Appendixs) ಇದರಲ್ಲಿ 'Analysis of commen Geographical Names in the Tamil Country, showing the extent to which they are indigenous, with other particulars arranged alphabetically'— ಎಂಬ ವಿಭಾಗದಲ್ಲಿ ನಾನು ಮೇಲೆ ಮಾಡಿದ ರೀತಿಯ ಸ್ಥಳನಾಮಗಳ ಚಿಕ್ಕದಾದ ಹಾಗೂ ಆಕರ್ಷಣೀಯ ವಿಮರ್ಶೆ ಇದೆ. ಅದೇ ರೀತಿಯಲ್ಲಿ 'ಎಡೆಗಳು ಹೇಳುವ ಕಂನಾಡಕತೆ' (ಶಂ. ಭಾ. ಜೋಶಿ) ಎಂಬ ಗ್ರಂಥವು ಈ ವಿಮರ್ಶೆಯನ್ನು ಮಾಡುವ ಗ್ರಂಥವಾಗಿದೆ. Dr. Hasmukh Sankalia ಅವರ "Studies in the History and Cultural Geography and Ethnology of Gujarat, B C. 300 to 1300 A D." ಎಂಬ ಗ್ರಂಥದಲ್ಲಿ ಈ ತೆರನಾದ ಗಣನೀಯ ಪ್ರಯತ್ನ ನಡೆದಿದೆ.

## ಏ

ಕೋಳಿಗಳೆಂದರೆ ಯಾರು? 1901ನೇ ಇಸವಿಯ ಮದ್ರಾಸು ಖಾನೇಶುಮಾರಿ ವರದಿಯಲ್ಲಿ ಕೋಳಿಗಳ ಕುರಿತಾಗಿ ಈ ರೀತಿ ಹೇಳಲಾಗಿದೆ. A Bombay caste of fishermen and boatmen in South Kanara and also a low class of Bengal weavers found in Ganjam" ಈ ಕೋಳಿಗಳು ಮಲಬಾರಿನಿಂದ ಮುಂಬೈ ವರೆಗೆ ಕರಾವಳಿಯಲ್ಲಿದ್ದು ಹಲಕೆಲವು ಊರುಗಳಿಗೆ ತಮ್ಮ ಹೆಸರನ್ನಿತ್ತುದರಲ್ಲಿ ಸಂದೇಹವಿರಲಾರದು. ಕಲ್ಲಿಕೋಟೆಗೆ 'ಕೋಳಿಕೋಡು' ಎಂಬುದು ಮೊದಲಿನ ಹೆಸರು. ಅಂತೆಯೇ ನಮ್ಮ ನಾಡಿನಲ್ಲಿ ಕೋಳಿಯೂರು, ಕೂಳೂರುಗಳಿವೆ. ಉತ್ತರ ಕನ್ನಡದಲ್ಲೂ ಕೋಳೂರು, ಕೋಳಿವಾಡುಗಳಿವೆ. ಅಲ್ಲದೆ ಕೋಳೂರ ನಾಡು, ಕೋಳೂರ ಗ್ರಾಮ, ಕೋಳೋರ ಪನ್ನೆರಡು ಇವುಗಳ ಹೆಸರು ಮೈಸೂರ ಶಾಸನದಲ್ಲಿ ಬರುತ್ತದೆ.

### ಮುಂಡರ ವಿಷಯ:—

ಫರ್ಸ್ಟರನರು ತಮ್ಮ ಗ್ರಂಥದ ಮೊದಲ ಭಾಗದ ಪುಟ (ಐವತ್ತೇಳರಲ್ಲಿ) ಹೀಗೆ ಹೇಳುತ್ತಾರೆ. "ಮುಂಡ ಭಾಷೆಯ ಈಗಿನ ಪ್ರಧಾನ ತೌರೂರು ಛೋಟ ನಾಗ್ಪುರದ ಪೀಠ ಭೂಮಿಯಾಗಿದೆ. ಮುಂಡರ ವಂಶವು ಅವರ ಭಾಷೆಗಳಿಗಿಂತ ವಿಶಾಲವಾಗಿ ಹರಡಿಕೊಂಡಿವೆ. ದಕ್ಷಿಣ ಹಿಂದೂ ದೇಶದ ಜನ ಸಮುದಾಯದ ಪ್ರಾಮುಖ್ಯ

ಘಟಕವಾದ ದ್ರಾವಿಡರಿಗೆ ಸೇರಿದ ಪಂಗಡವೇ ಈ ಮುಂಡರನು ಎಂದು ಈಗ ತಿಳಿಯಲ್ಪಟ್ಟಿದೆ. ನಮ್ಮ ನಾಡಿನಲ್ಲೂ ಮುಂಡರ ಹೆಸರಿನ ಸಂಬಂಧವುಳ್ಳ ಊರ ಹೆಸರುಗಳು (ಪುಟ14 ಮತ್ತು 58) ಈ ಜನಪ್ರಭೇದವು ನಮ್ಮ ನಾಡಿನಲ್ಲಿ ಹಿಂದಿನ ಕಾಲದಲ್ಲಿ ಇದ್ದಿತ್ತು, ಎಂದು ತಿಳಿಸುವಾಗ ಅದು ಬರೆ ಊಹನೆ ಎಂದು ತಿಳಿಯಲಾಗದು.

ಕುಡುವರು ಯಾ ಕುಡಿಯರು ನಮ್ಮ ನಾಡಿನವರೇ ಎಂದು ದಕ್ಷಿಣ ಕನ್ನಡದ ಮ್ಯಾನ್ಯುವಲ್ ತಿಳಿಸುತ್ತದೆ. ಹಿಂದಕ್ಕೆ ಅವರ ಕಸುಬು ವ್ಯವಸಾಯವಿದ್ದಿರಬೇಕು. ಈಗ ಅವರು ಮಲೆ ಕುಡಿಯರಾಗಿದ್ದಾರೆ. ಅವರ ಹೆಸರುಗಳಿಂದಬ ಂದಿರಬೇಕಾದ ಸ್ಥಳ ನಾಮಗಳನ್ನು ಪರಿಶೀಲಿಸಿದರೆ (ಪುಟ 60) ಆ ಊರುಗಳ ಭೌಗೋಳಿಕ ಸ್ಥಿತಿಯನ್ನು ಕಂಡುಕೊಂಡರೆ ಈ ಕುಡಿಯರು (ಕುಡುವರು) ವ್ಯವಸಾಯ ಕಸುಬನ್ನು ಯಾವ ರೀತಿಯಲ್ಲಿ ಆರಂಭಿಸಿರ ಬಹುದೆಂಬುದನ್ನು ತಿಳಿದುಕೊಳ್ಳಲು ಸಾಧ್ಯವಿದೆ. ಉಡುಪಿಯ ಹತ್ತಿರ ಕೊಡವೂರಿದೆ. ಇದಕ್ಕೆ ಭಾವಪ್ರಕಾಶಿಕಾ ಟೀಕಾಕಾರರು ಕಾನನ ದೇವತಾ ಸದನ ಎಂಬ ಹೆಸರಿದ್ದು, ಅಪಭ್ರಷ್ಟ ಭಾಷೆಯಲ್ಲಿ 'ಕುಡುವೂರು' ಎಂಬುದಾಗಿ ಕರೆಯುತ್ತಿದ್ದರೆಂದು ತಿಳಿಸುತ್ತಾರೆ. ಹಾಗಾದರೆ ಕೊಡವೂರೆಂಬ ಹೆಸರು ಆನಂತರ ಬಂದ ರೂಪಾಂತರವೆನ್ನುವುದರಲ್ಲಿ ಸಂದೇಹವಿಲ್ಲ. ಈ ಕೊಡವೂರಿಗೆ ದೀರ್ಘವಾದ ಪುರಾಣ ಕಥೆ ಇದೆ. ಅದಂತಿರಲಿ. ಈ ಕುಡುವೂರನ್ನಾದರಿಸಿ, ಕೊಡ್ಲಾಡಿ=ಕುಡ್ಲಾಡಿ; ಕೊಡಿಯಾಲ=ಕುಡಿಯಾಲ; ಕೊಡಮಣ್ಣು=ಕುಡುಮಣ್ಣು; ಕೊಡಕಾಟ=ಕುಡುಕಾಟವೆಂಬುದಾಗಿ ತೀರ್ಮಾನಿಸಲು ಆಸ್ಪದವಿದೆ. ಇವೆಲ್ಲಾ ಕುಡಿಯರ ನೆಲೆವೀಡಾಗಿರಬೇಕು.

ಪಣಿಗಳ ಕುರಿತು ಹೆಚ್ಚಿನ ವಿಚಾರ:—

ಕದೂ ಮಹೀರ ದೃಷ್ಟಾ ಅಸ್ಯತ ವಿಶೀಃ ಕದು ವೃತ್ರಘ್ನೋ ಅಸ್ತೃತಂ।

ಇಂದ್ರೋ ವಿಶ್ವಾನ್ ಬೇಕನಾಟ ಅಹದೃಶ ಉತಕ್ರತ್ವಾ ಪಣೀರಭಿ॥

ವೃತ್ರಘ್ನನಾದ ಇಂದ್ರನ ಸೈನ್ಯ ಶಾರೀರಿಕಗಳೆಂಬ ಮಹಾಬಲಗಳನ್ನು ತಡೆಯಲು ಯಾರಿಗೂ ಸಾಧ್ಯವಿಲ್ಲ. ಅಂತಹ ಇಂದ್ರನು, 'ಅಹದೃಶ'ರಾದ'ಬೇಕನಾಟ'ರೆಲ್ಲರನ್ನು ಗೆದ್ದನು. ಹೀಗೆಂದ ಮೇಲೆ 'ಕ್ರತು'ವಿನಿಂದ (ವೀರಕರ್ಮ) 'ಪಣಿ'ಗಳನ್ನು ಅಭಿಭವಿಸಿದನೆಂಬುದನ್ನು ಹೇಳಬೇಕೆ?

ಇಲ್ಲಿ ಪಣಿಗಳೆಂಬವರು ವಿಶಿಷ್ಟ ಜನಾಂಗ. ಅವರು ಆರ್ಯರಿಗಿಂತಲೂ ಹಿಂದಿನವರು. ದ್ರಾವಿಡ ಶಾಖೆಗೆ ಸೇರಿದವರೆಂದೇ ಹೇಳಬೇಕು. ಆರ್ಯರ ಘರ್ಷಣೆಯಿಂದಾಗಿ ಉತ್ತರದಿಂದ ದಕ್ಷಿಣಕ್ಕೆ ಅಟ್ಟಲ್ಪಟ್ಟವರು. ಈ ಪಣಿಗಳನ್ನು ಹಣಬರೆಂದೂ

ಕರೆಯುವರು. ಬೆಳಗಾಂ ಜಿಲ್ಲೆಯ ಬೈಲಹೊಂಗಳ ತಾಲೂಕಿನಲ್ಲಿ ಹಣಬರಿದ್ದಾರೆ. ಹಣಬರ ಹಟ್ಟಿ ಎಂಬ ಊರೂ ಇದೆ. ಇವರು ಅಡವಿಯಲ್ಲಿದ್ದು ದನಗಳನ್ನು ಕಾಯ್ದು ಹಾಲು ಬೆಣ್ಣೆ ಮಾರಿ ಜೀವನ ನಡೆಸಬೇಕೆಂದೂ, ಇದುವೇ ಇವರ ಜಾತಿಯ ಕಾಯಕವೆಂದೂ, ಇದು ಈ ಜನರ ಜಾತಿ ಧರ್ಮದ ಕಟ್ಟಳೆಯೆಂದೂ, ನಂಬುಗೆ ಇದೆ. (Tribes and Castes of Bombay Presideney Vol. II. Page 57) ಕೊಡಗಿನ ಗಜೆಟಿಯರಿನಲ್ಲಿ ಕಾಡಿನಲ್ಲಿ ವಾಸಿಸುವ ಜನ ಪ್ರಭೇದಗಳಲ್ಲಿ ಪಣಿಗಳ ಉಲ್ಲೇಖವಿದೆ. ಅವರ ಚಿಕ್ಕದಾದೊಂದು ವರ್ಣನೆಯನ್ನು ಈ ರೀತಿಕೊಟ್ಟಿದೆ, "ಈ ಪಣಿಗಳು ಮೈಲಾರರೂ, ಅಚಲರೂ ಎಂಬುದಾಗಿ ಹೆಸರು ಪಡೆದಿದ್ದಾರೆ. ತುಳು ದೇಶದಿಂದ ಬಂದ ಘಟ್ಟದ ಬದಿಗಳಲ್ಲಿ ಕೆಲಸಗಾರರಾಗಿ ದುಡಿಯುವವರು ಇವರಾಗಿರುತ್ತಾರೆ. ಅವರಿಗೆ ಹಿಂದುಗಳ ಲಕ್ಷಣವಿದೆ. ದೇಹದಲ್ಲಿ ಮಧ್ಯ ಪ್ರಮಾಣದವರಾಗಿದ್ದು, ಕರಿದಾದ ನಿಡುಚಾದ ಕೂದಲುಗಳುಳ್ಳವರಾಗಿದ್ದಾರೆ. ಹೆಂಗಸರಲ್ಲಿ ಇದು ಅಲೆಯಂತಿದೆ. ಕೆಲವರು ಕೊಡಗರಂತೆಯೂ, ಇನ್ನು ಕೆಲವರು ಕೆಳಗಿನ ದೇಶದವರಂತೆಯೂ ವಸ್ತ್ರಧಾರಣೆ ಮಾಡುತ್ತಾರೆ. ಅವರು ಮೂರ್ತಿಪೂಜಕರಲ್ಲ. ಆದರೆ ಭೋಜನ ಸಮಯದಲ್ಲಿ 'ಗುಳಿಗ', 'ಕೊರತಿ', 'ಕಲ್ಲುರ್ಟಿ'ಗಳನ್ನು ಪ್ರಾರ್ಥಿಸುವುದಿದೆ. ಅವರ ಆಹಾರವು ಕೊಡಿಗಿನವರಂತಿದೆ. ಅವರಲ್ಲಿ 'ಅಚಲ ಪಳೆಯರು' ತಮ್ಮ ಭೂತಗಳ ಪ್ರೀತಿಗಾಗಿ ಕೋಲ ಕಟ್ಟುವುದಿದೆ (Coorg Gazetteer age 215)

ಈ ಪಣಿಗಳು ತುಳುವರ ನಾಡಿಗೇ ಸಂಬಂಧಿಸಿದವರೆಂದೂ, ತುಳುನಾಡಿನವರಂತೆಯೇ ಹಲಕೆಲವು ನಡವಳಿಗಳನ್ನು ಹೊಂದಿದವರೆಂದೂ, ಮೇಲಿನ ವಿವರವರ್ಣನೆಯಿಂದ ಕಂಡುಬರುತ್ತದೆ. Madras District Manuals South Kanara by Stuart ಪುಟಗಳು 16ರಿಂದ 25) ಇಲ್ಲಿ ಕೊಟ್ಟ ಜಾತಿಗಳ ವಿವರದಲ್ಲಿ, ಹಿಂದಕ್ಕೆ ಪ್ರಬಲರಾಗಿದ್ದು ಯೋಧರೂ ಆಗಿದ್ದು ಈಗ ವ್ಯವಸಾಯವನ್ನು ಮಾಡುವವರು ಎಂಬ ವರ್ಗದಲ್ಲಿ ಈ ಹಣಬರನ್ನು ಸೇರಿಸಲಾಗಿದೆ. ಈ ದೃಷ್ಟಾಂತಗಳಿಂದ ಅತೀ ಪುರಾತನ ಕಾಲದಲ್ಲಿ ವಲಸೆಯ ರೂಪದಲ್ಲಿ ನಮ್ಮತ್ತ ಬಂದು ನೆಲಸಿದ ಈ ಪಣಿಗಳು ತಮ್ಮ ಹೆಸರನ್ನೇ ತಮ್ಮೂರಿಗೆ ಪಣಿಯಾಡಿ, ಪಣಿಯಾಲ, ಪಣಂಬೂರು, ಪನಿಯೂರು, ಪಣಿಯೂರು ಎಂಬುದಾಗಿ ಇತ್ತರೆನ್ನುವಾಗ ಸಂದೇಹಕ್ಕೆಡೆ ಇರಲಾರದು ಎಂದು ಭಾವಿಸುತ್ತೇನೆ.

ಪಣಿಗಳಾದ ಹಣಬರನ್ನು ಕುರಿತಾಗಿ ಉತ್ತರ ಕನ್ನಡದ ಮ್ಯಾನ್ಯುವಲ್ಲಿನಲ್ಲಿ ಈ ಕೆಳಗಿನ ವಿವರವಿದೆ. (page 238) "ಇವರು ನೈಜಾಮ ರಾಜ್ಯದ ಕಲ್ಯಾಣವೆಂಬಲ್ಲಿಂದ ಇಲ್ಲಿಗೆ ಬಂದಂತೆ ತಿಳಿದುಬರುತ್ತದೆ. ಆದರೆ ತಮ್ಮ ಮೂಲ ಸ್ಥಳದ

ಜಾತಿಯವರೊಡನೆ ಯಾವ ಸಂಬಂಧವನ್ನೂ ಅವರು ಇಟ್ಟುಕೊಂಡಿಲ್ಲ.........
ಅವರಲ್ಲಿ ಹಳೆ ಮತ್ತು ಹೊಸ ಪಣಬರೆಂಬ ಎರಡು ವಿಭಾಗಗಳಿವೆ. ಇವರೊಳಗೆ ಪರಸ್ಪರ ಊಟ ಉಪಚಾರಗಳಾಗಲೀ, ವಿವಾಹವಾಗಲೀ ನಡೆಯುವುದಿಲ್ಲ. ಇವರು ಮರಾಠಿ ಶಬ್ದಗಳಿಂದ ಬೆರೆತ ಒಂದು ರೀತಿಯ ಗ್ರಾಮ್ಯ ಕನ್ನಡವನ್ನು ಮಾತನಾಡುತ್ತಾರೆ."

ಮಲಬಾರ್ ಮ್ಯಾನುವಲ್ ಪಣಿಯರ ವಿವರವನ್ನು ಹೀಗೆ ಕೊಟ್ಟಿದೆ. "ಪಣಿಯರು ಕಾಡು ಜನಗಳ ಪೈಕಿ ಬಹು ಸಂಖ್ಯಾಕರು. ಅವರು ವೈನಾಡಿನಲ್ಲಿ ವಿಶೇಷವಾಗಿದ್ದು, ಅಲ್ಲಿ ವ್ಯವಸಾಯಕ್ಕೆ ಸಂಬಂಧಿಸಿದ ಕೆಲಸಗಳನ್ನು ಮಾಡುತ್ತಾರೆ. ಪಾಲ್ಘಾಟು ತಾಲೂಕು ಹೊರತು ಉಳಿದ ಎಲ್ಲಾ ಭಾಗಗಳ ಗುಡ್ಡಗಳ ಬದಿಗಳಲ್ಲಿ ವಾಸಿಸುತ್ತಾರೆ. ಇತರ ಗಿರಿ ಜನರಂತೆ ಇವರೂ ಕಾಡಿನ ಮಧ್ಯದಲ್ಲಿ ಹಲಕೆಲವು ಮೈದಾನು ಸ್ಥಳಗಳಲ್ಲಿ ಭತ್ತ ಬೆಳೆಸಿ, ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗುತ್ತಾರೆ. ಅವರನ್ನು ಮರಕಡಿಯುವ ಕೆಲಸಕ್ಕೂ, ಆನೆ ಮಾವುತರಾಗಿಯೂ, ಉತ್ತಮ ಶಿಖಾರಿಗಳಾಗಿಯೂ ಉಪಯೋಗಿಸುತ್ತಾರೆ. ದೇಹ ಲಕ್ಷಣದಲ್ಲಿ ಅವರನ್ನು ನೀಗ್ರೋ ಶಾಖೆಗೆ ಸೇರಿಸಬಹುದು. ಅಗಲ ಮೂಗುಳ್ಳವರಾಗಿ, ಗುಂಗುರು ತಲೆಕೂದಲಿದ್ದು ಕಪ್ಪು ಮೈಬಣ್ಣವನ್ನು ಹೊಂದಿದವರಾಗಿದ್ದಾರೆ........ಅವರ ವಾಸಸ್ಥಾನಕ್ಕೆ 'ಪಾಡಿ' ಎಂದು ಕರೆಯುತ್ತಾರೆ. ಇತರ ಗಿರಿ ಜನರಂತೆ ಇವರೂ ದೈವಗಳನ್ನು (Animistic Dieties) ಆರಾಧಿಸುತ್ತಾರೆ. ಅವರ ಮುಖ್ಯ ಆರಾಧ್ಯ ದೇವತೆಯು 'ಕೂರಿ' ಮತ್ತು ಅದರ ಸ್ಥಾನವು 'ಕೂಲಿತರ' ಎನ್ನಿಸಿಕೊಳ್ಳುವುದು. ಈ ದೈವಕ್ಕೆ ಅವರು ತೆಂಗಿನಕಾಯಿ ಒಡೆಸುವರು. ಆದರೆ ರಕ್ತಾಹಾರವಿಲ್ಲ. ಅವರ ಪುರೋಹಿತನು 'ಕೂಟನ್' ಎಂದು ಕರೆಯಲ್ಪಡುತ್ತಾನೆ. ಆತನಿಗೆ 'ಕೋಮರಂ' ಎಂಬ ಪಾತ್ರಿ ಸಹಾಯಕ್ಕಿದ್ದಾನೆ."

ಮೇಲಿನ ಎಲ್ಲಾ ವಿವರಗಳಿಂದ, ಈ ಪಣಿಗಳು (ಪಣಬರು) ಉತ್ತರದಿಂದ ದಕ್ಷಿಣಾಭಿಮುಖವಾಗಿ ಹೆಚ್ಚಾಗಿ ಕರಾವಳಿಯಲ್ಲೇ ಪ್ರಯಾಣ ಬೆಳೆಸಿ ಅಲ್ಲಲ್ಲಿ ನೆಲೆ ನಿಂತಂತೆ ಕಂಡುಬರುತ್ತದೆ.

**ಬೆಳ್ಳರ ಕುರಿತು ವಿಮರ್ಶೆ:—** ಮುಳಿಯ ತಿಮ್ಮಪ್ಪಯ್ಯನವರು, ಅವರ 'ನಾಡೋಜ ಪಂಪ'—ಎಂಬ ಗ್ರಂಥದಲ್ಲಿ ಈ ರೀತಿಯ ಅಭಿಪ್ರಾಯವನ್ನು ಕೊಟ್ಟಿದ್ದಾರೆ. "ನಮ್ಮ ಕರ್ಣಾಟಕದೊಳಗೆ ವೆಂಗಿ ಮಂಡಲ, ವೆಂಗಿಪರ್ರು, ವೆಂಗಡ (ವೆಂಕಟಗಿರಿ) ವೆಂಗುರ್ಲೆ ಮೊದಲಾಗಿ ವೆಂಗಿ ಪದ ಸಂಬಂಧಗಳಾದ ಪ್ರಾಂತ ನಾಮಗಳು ಬಹಳ ಮಟ್ಟಿಗೆ ದೊರಕುತ್ತಿವೆ. ಮೊದಲಿನ ಎರಡು ಹೆಸರುಗಳಾದಿಯಲ್ಲಿ ವೆಂಗಿ ಎಂಬುದು ಸ್ಪಷ್ಟವಾಗಿದ್ದರೆ, ಮತ್ತಿನವುಗಳಲ್ಲಿ ಅಸ್ಫುಟವಾಗಿ ಅದೇ ಬಿಂಬಿಸುತ್ತಿದೆ ಎಂದು ನಮ್ಮೆಣಿಕೆ.

ಹೇಗಿದ್ದರೂ ಆದಿಯ 'ವೆಂ' (ಬೆಂ) ಎಂಬುದು ಸರ್ವ ಸಮಾನವಾಗಿದೆಯಷ್ಟೆ. ಅದನ್ನುಳಿದು ಒಂದಿಷ್ಟು ಮಾರ್ಪಟ್ಟ ಇನ್ನೊಂದು ಬಗೆಯ ಪ್ರಾಂತನಾಮಗಳನ್ನು ನೋಡುವ. ಬೆಳ್ಗೊಳ (ಬೆಳ್+ಕೊಳ), ಬೆಳ್ಗಾವ್ (ಬೆಳ್+ಗಾವ್), ಬೆಳುವಲ (ಬೆಳು+ಪೊಲ, ಪೊಲ?), ಬೆಳ್ಮೊಗ (ಬೆಳ್+ಮೊಗ), ವೆಳ್ಳಾಳ ಪಟ್ಟು (ವೆಳ್+ಆಳ+ಅ(ಷಷ್ಠಿ) ಪಟ್ಟು—ಇವೇ ಆ ನಾಮಗಳು. ಬ (ಬೆ) ಳ್ಳಾರಿ, ಬೆಳ್ನಾಡು, ಬೆಳುಗರೆ, ಬೆಂಗಳೂರು ಮೊದಲಾದ ಇನ್ನೂ ಎಷ್ಟೋ ಹೆಸರುಗಳನ್ನು ಈ ಹಂತಿಯಲ್ಲಿ ಕೂಡಿಸಿಕೊಳ್ಳಬಹುದು. ಇದರೊಳಗಿನ ಹೆಸರುಗಳಲ್ಲಿ ಆದಿಯ ಬೆಳ್ (ವೆಳ್) ಎಂಬುದು ಸರ್ವ ಸಾಮಾನ್ಯವಾಗಿದೆ. ಕೆಲವು ಸಂದರ್ಭಗಳಲ್ಲಿ ವ್ಯಂಜನ ಳ (ಳ್) ಕಾರಕ್ಕೆ ಬದಲಾಗಿ, ಬಿಂದು ಬರುವುದೂ ಕನ್ನಡದಲ್ಲಿ ವ್ಯಾಕರಣ ರೂಢಿ ವಿಹಿತವಾಗಿದೆ. ಕೊಳ್ ಕೊಂಡನು, ಕುಳ್—ಕುಂಟನು; ತೂಳ್—ತೂಂಟು, ಸೀಳ್ ಸೀಂಟು-ಮೊದಲಾದ ದೃಷ್ಟಾಂತಗಳಿಂದ ಆ 'ಳ್' 'ಸೊನ್ನೆ'ಗಳ ಸಂಬಂಧವನ್ನವ ಗ್ರಹಿಸಿಕೊಳ್ಳಬಹುದು. ಅದರಿಂದ ಹಿಂದೆ ತೋರುವ 'ವೆಂಗಿ' ಮೊದಲಾದವುಗಳೊಳಗಿನ ಬಿಂದು ಳ್ (ಳ) ಕಾರಕ್ಕೆ ಆದಿಷ್ಟವಾಗಿ ನೆಲೆವಡೆದುದೆಂಬಲ್ಲಿ ಸಂದೇಹವಿಲ್ಲ.

ಈಗ ಬೆಳ್ ಎಂಬುದು ಒತ್ತಾಗಿ ಉಳಿಯಿತು. ಈ ಬೆಳ್ ಬಿತ್ತೇ ಮೊಳೆದು ವಿಧವಿಧ ಸಂಬಂಧಗೊಂಡು ಬೆಳೆದು, ಆಯಾ ಪ್ರಾಂತನಾಮಗಳನ್ನೊಂದಿತು ಎಂಬುದು ಮುಂದೆ ತಾನಾಗಿ ಸಿದ್ಧವಾಗುವುದು. ಆದರೆ ಈ ಬೆಳ್ ಎಂದರೇನೆಂಬುದು ಸ್ಫುಟವಾಗದಿದ್ದರೆ ಮೇರೆ ಇಲ್ಲದ ಮೂರ್ತಿಯಾದೀತು. ಅದರಿಂದ ಒಂದಿಷ್ಟು ಈ ಪದ ವಿಮರ್ಶೆಯನ್ನೇ ಮಾಡಬೇಕಾಗಿದೆ"

ಶ್ರೀಯುತ ತಿಮ್ಮಪ್ಪಯ್ಯನವರು ಈ ಕೆಳಗಿನ ನಿರ್ಧಾರಗಳನ್ನು ಅವರ ಗ್ರಂಥದಲ್ಲಿ ಕೊಟ್ಟಿರುತ್ತಾರೆ.

೧. ಕನ್ನಡ ವಾಙ್ಮಯದಲ್ಲಿ ಎತ್ತೆತ್ತಲೂ 'ಬೆಳ್' 'ಬೆಳ್ಳಂ' ಎಂಬ ಪದವು 'ಎಗ್ಗ' (ಮೂಢ) ಎಂಬರ್ಥದಲ್ಲಿ ರೂಢವಾಗಿದೆ.

೨. ಪಂಪನ ಕಾವ್ಯದಲ್ಲೇ ಈ ಅರ್ಥವು ನಿರ್ದಿಷ್ಟವಾಗಿ ಕಂಡು ಬರುತ್ತದೆ.

೩. ಈ ಬೆಳ್ಳರೆಂದರೆ ಪೌರಾಣಿಕ ದೃಷ್ಟಿಯಲ್ಲಿ ಭೂತ, ಪ್ರೇತ, ಪಿಶಾಚ, ರಾಕ್ಷಸ ವರ್ಗದೊಳಗೆ ಸೇರಿದವರು. ಚಾರಿತ್ರಿಕ ದೃಷ್ಟಿಯಲ್ಲಿ ಮನುಷ್ಯ ವರ್ಗದವರೇ ಆದ ಅದೊಂದು ಪಂಗಡ.

೪. ವೆಪ್ಪ (ವಪ್ಪ) ಬೆಪ್ಪ, ಬೆಳ್ಪ—ಎಂಬ ಪದಗಳು ರೂಪಾಂತರ ಪಡೆದ ಒಂದೇ ಪದವೆಂಬುದರಲ್ಲಿ ಸಂದೇಹವಿಲ್ಲ. 'ವಿ ಅಲ—ವೇಲು ಎಂದು ವಾಲ್ಮೀಕಿ ಸೂತ್ರದಲ್ಲಿ ಸೂಚಿತವಾದ ಪದಗಳು ಬೆಳ್ ಪಂಗಡವನ್ನೇ ನಿರ್ದೇಶಿಸುತ್ತವೆ. (ವ್ಯಾಳ ವ್ಯಾಡ,

ತರ್—ಬೇಡ) ಈ ಸಿದ್ಧಾಂತದಿಂದ ಪೂರ್ವಿಕರಾದ ಆರ್ಯರು ದಸ್ಯುಗಳನ್ನೇ ಚೋರರೆಂದೂ, ಭೂತಪಿಶಾಚಾದಿಗಳೆಂದೂ ಭಾವಿಸುತ್ತಿದ್ದುದು ವ್ಯಕ್ತವಾಗುತ್ತಿದೆ.

೫. ಬೆಳ್ಳರೆಂದರೆ ಅನಾಗರಿಕರಲ್ಲ, ಆಸ್ತಿಕರಾದ ವಿಶಿಷ್ಟ ದೇವತಾ ಭಕ್ತರು; ಅದೊಂದು ತರದ ವಾಙ್ಮಯ ಪ್ರವಣರು. ವೀರತ್ವ,ಶೂರತ್ವಗಳಿಂದೊಡಗೂಡಿದವರು. ಅಡಿಗಾಣದ ಮೊತ್ತ ಮೊದಲಿನ ಕಾಲದಲ್ಲಿ ಕನ್ಯಾ ಕುಮಾರಿಯಿಂದ ಹಿಮಾಚಲದ ವರೆಗಿನ ನಮ್ಮ ಈ ಹೇರೂರು ಬೆಳ್ಳ (ದಸ್ಯು) ರ ಮನೆಯಾಗಿತ್ತು ಎಂಬುದನ್ನು ಸಾಮಾನ್ಯವಾಗಿ ಎಲ್ಲರೂ ಒಪ್ಪುತ್ತಾರೆ. ಅದನ್ನೇ 'ಬೇಕನಾಟ' ವೆಂದು ವೈದಿಕ ಋಷಿಗಳು ಹಾಡತೊಡಗಿದರು. 'ಆಮಲಯಾಚಲ ಹಿಮಗಿರಿ ಸೀಮಾವನಿ...... ವೆಂಗಿ ಮಂಡಲ' ಎಂಬ ಪಂಪನ ಹೇಳಿಕೆ ಆ ಹಿಂದಿನ ಬೃಹತ್ ವೆಂಗಿಯನ್ನೇ ನಿರೂಪಿಸುವುದಾಗಿರಬೇಕು. ಆರ್ಯರ ಆಪಘಾತಕ್ಕಂಜಿದ ಬೆಳ್ಳರು ಮೆಲ್ಲನೆ ಅತ್ತಿತ್ತ ಚದರಿದರು. ಅಲ್ಲಲ್ಲಿ ನೆಲೆಗೊಳ್ಳಲಾರಂಭಿಸಿದರು. ಅವರು ಅಡಿದೆಗೆದಲ್ಲಿ ಆರ್ಯ ವರ್ಗದವರು ನೆಲೆಯಾಗತೊಡಗಿದರು. ಬೆಳ್ಳರು ಉತ್ತರಾ ಪಥದಿಂದ ಬಲು ಮಟ್ಟಿಗೆ ಕಾಲ್ದೆಗೆದು ದಕ್ಷಿಣಾ ಪಥದಲ್ಲಿ ನೆಲೆಯಾದರು. 'ವಿಶ್ವಬೇಕನಾಟರ' ಅಥವಾ ಬೆಳ್ಳರ (ಪಿಶಾಚ) ನೆಲೆ ಬೆಂಗಿಮಂಡಲದಲ್ಲಾಯಿತು. ಹೀಗೆ ವೈದಿಕ ಸಾಹಿತ್ಯದೊಳಗೆ 'ವೇಗಿನಾಡಿನ' (ವೆಂಗಿ ಮಂಡಲದ) ಹೊಲ ಬಿದ್ದಂತೆ ಸ್ಪಷ್ಟವಾಗುತ್ತಿದೆ. 'ಬೇಕನಾಟ' ಈ ಪದದ ಅರ್ಥವನ್ನು ವ್ಯಾಖ್ಯಾನ, ವಿಮರ್ಶೆಗಳೊಡನೆ ಆಲೋಚಿಸಿದರೆ 'ಬೇಕವೇ ನಾಟ (ನಾಡು) ವಾಗಿರುವವರು. (ಬೇಕಃ ನಾಟಃ ವಿಶಾಂ ತೇ ಎಂಬ ವ್ಯುತ್ಪತ್ತಿಯೊಡನೆ 'ಬೇಕನಾಟಾ' ಎಂಬುದಕ್ಕೆ 'ಬೆಂಗಿನಾಡವರು' ಎಂಬರ್ಥವು ಶಾಸ್ತ್ರೀಯ ಮಾರ್ಗದಲ್ಲೇ ಒದಗುವಲ್ಲಿ ಸಂದೇಹವಿಲ್ಲ. ಈ ಬೆಂಗಿ ನಾಡವರು 'ಬೆಳ್ಳರು'.

೬. ಅರ್ಥಾತ್, ಈ ಬೆಳ್ಳರು ಆರ್ಯರಿಂದ ದಸ್ಯುಗಳೂ, ಚೋರರೂ ಎಂಬುದಾಗಿ ನಿಂದಾತ್ಮಕವಾಗಿ ಕರೆಯಲ್ಪಟ್ಟರು, ಅವರು ನಾಗರಿಕ ದ್ರಾವಿಡ ಪಂಗಡಕ್ಕೆ ಸೇರಿದವರೆಂದು ನಿಸ್ಸಂದೇಹವಾಗಿ ಹೇಳಬಹುದು. 'ಬೆಳ್ಳಪ್ಪ' ಎಂಬ ಹೆಸರು (ಬೆಳ್ಳರ ಒಡೆಯ) ಈಗಲೂ ನಮ್ಮೊಳಗಿನ ಶಿವಪೂಜಕರ ಸಮಾಜದಲ್ಲಿ ಕಾಣಬಹುದು. ಅಂತೆಯೇ 'ಮರುಳಯ್ಯ' (ಮರುಳುಗಳ ಅಯ್ಯನಾದ ಶಿವನು)—'ಹುಚ್ಚಯ್ಯ' (ಹುಚ್ಚಗಳ ಅಯ್ಯ).

ಮೇಲಿನ ವಿಶಾಲ ದೃಷ್ಟಿಯನ್ನು ನಮ್ಮ ತುಳುನಾಡಿಗೆ ಹರಿಯಿಸುವ 'ಸ್ಥಳ ನಾಮಗಳು ಹೇಳುವ ನಮ್ಮ ತುಳುನಾಡಿನ ಕಥೆ' ಎಂಬ ಲೇಖನದಲ್ಲಿ ನಮ್ಮ ನಾಡಿನ ಬೆಳ್ಳರ ಉಲ್ಲೇಖವನ್ನು ಮಾಡಿದ್ದೆ. ಬೆಳ್ಳಾರೆ, ಬೆಳ್ಳರಪಾಡಿ, ಮುಂತಾದ ಸ್ಥಳಗಳ

ಈ ಬೆಳ್ಳರ ನೆಲೆವೀಡಾಗಿದ್ದಿರಬೇಕೆಂದು ಹೇಳಿದ್ದಾಯಿತು. ಈ ನಿರ್ಧಾರಕ್ಕೆ ಇನ್ನೇನಾದರೂ ಆಧಾರಗಳಿವೆಯೋ ನೋಡೋಣ. ದಕ್ಷಿಣ ಕನ್ನಡದ ಮ್ಯಾನ್ಯುವೆಲ್ಲಿನಲ್ಲಿ (ಪುಟ 179) ಈ ಬೆಳ್ಳಾರರ (Belleras) ವಿವರವನ್ನು ಹೀಗೆ ಕೊಟ್ಟಿದೆ "ಬೆಳ್ಳಾರರು ಬುಟ್ಟಿ ಮತ್ತು ಚಾಪೆ ಹೆಣೆಯುವ ಪಂಗಡದವರಲ್ಲಿ ಮೇಲ್ಮಟ್ಟದವರು. ಅವರು ಭೂತನೃತ್ಯ ಕಾರ್ಯದಲ್ಲಿ ಭಾಗವಹಿಸುವುದಿಲ್ಲ. ಅವರು ಕನ್ನಡದ ಒಂದು ತರದ ನುಡಿಯನ್ನಾಡುತ್ತಾರೆ. ಆದರೂ ಅಳಿಯ ಸಂತಾನ ಪದ್ಧತಿಯನ್ನು ಅವಲಂಬಿಸುತ್ತಾರೆ. ಇತ್ಯಾದಿ."ಈ ಬೆಳ್ಳಾರರೇ ನಮ್ಮ ಪುರಾತನ ಬೆಳ್ಳರು ಎಂಬುದರಲ್ಲಿ ಸಂದೇಹವೇಕೆ? ಅವರ ಸಂಖ್ಯೆಯು ಕಡಿಮೆಯಾಗುತ್ತಾ ಬಂದು ಇವರು ಶಕ್ತಿಹೀನತೆಯಿಂದ ಹಿಂದುಳಿದವರಾದರು ಎಂದು ದೃಢವಾಗಿ ಹೇಳಬಹುದು. ಇಂದಿಗೂ ನಮ್ಮ ನಾಡಿನಲ್ಲಿ 'ಬೆಳ್ಚಡ' ಎಂಬ ಜನವಿರುವುದು ವಿಚಾರಣೀಯವಾಗಿದೆ.

ಇನ್ನು ದಕ್ಷಿಣ ಕನ್ನಡ ಜಿಲ್ಲೆಯ 1871ರ ಖಾನೇಶುಮಾರಿಯ ದಾಖಲೆಯನ್ನು ಪರಿಶೀಲಿಸಿದರೆ ಹಳ್ಳಿ ಹಳ್ಳಿಗಳಲ್ಲೂ ವೆಲ್ಲಾಲರೆಂಬ ಜನರಿದ್ದುದು ಕಂಡು ಬರುತ್ತದೆ. ಇವರ ಸಂಖ್ಯೆಯು ನಮ್ಮ ಜಿಲ್ಲೆಯಲ್ಲಿ ಅಂದು ಮೂವತ್ತೆಂಟು ಸಾವಿರಕ್ಕೆ ಸಮೀಪಿಸಿತ್ತು ಎಂದು ತಿಳಿಸಿದರೆ ಆಶ್ಚರ್ಯವಾದೀತು ಅವರು ವ್ಯವಸಾಯವನ್ನು ಮಾಡುತ್ತಿದ್ದವರು ಎಂದುತಿಳಿಸಿದೆ. ಈ ಆಧಾರಗಳಿಂದ ಬೆಳ್ಳ ಜಾತಿಯು ನಮ್ಮ ಜಿಲ್ಲೆಯಲ್ಲಿ ಹಿಂದಿನ ಕಾಲದಲ್ಲಿ ನೆಲೆಸಿದ್ದು, ಅನೇಕ ಊರುಗಳು ಆ ಜಾತಿಯಿಂದ ನಾಮಾಂಕಿತವಾದುವು ಎಂಬುದರಲ್ಲಿ ಸಂದೇಹವಿಲ್ಲ.

ಈ ಊರ ಹೆಸರುಗಳನ್ನು ಇನ್ನೊಮ್ಮೆ ಮನವರಿಕೆ ಮಾಡಿಕೊಂಡರೆ ವಿಷಯವು ವಿದಿತವಾಗುವುದು. ಬೆಳ್ಳಾಲ್ (ಬೆಳ್ಳ+ಆಲ್); ಬೆಳ್ಳೂರ್ (ಬೆಳ್ಳ+ಊರು); ಬೊಳಿಯಾರ್ (ಬೋಳಿಯ+ಆರ್); ಬೆಳ್ಳಂಪಳ್ಳಿ (ಬೆಳ್ಳ+ಪಳ್ಳಿ); ಬೇಳೂರು (ಬೆಳ್+ಊರು); ಬೆಳ್ಳಾರ (ಬೆಳ್ಳ+ಆರ) ಬೆಳುವಾಯಿ (ಬೆಳ್+ಬಾಯಿ); ಬೊಳ್ಳೂರು (ಬೊಳ್ಳ+ಊರು; ಬೆಳ್ಳಾರೆ ಬೆಳ್ಳ+ಆರೆ); ಬೆಳ್ಳಿಪಾಡಿ(ಬೆಳ್+ಪಾಡಿ) ಬೆಳಿಯೂರು (ಬೆಳ್+ಊರು) ಅಂತೆಯೇ ಬೆಳ್ಳಾಪು, ಬೆಳ್ಳಾಯಿರು, ಬೆಂದೂರು, ಬೆಳ್ಳಿ, ಬೆಳ್ಮ, ಬೋಳ, ಬೆಳ್ಳ, ಬೇಳಂಜೆ ಊರುಗಳಿವೆ.

ದಕ್ಷಿಣ ಕನ್ನಡದ ಗಜೆಟಿಯರಿನಲ್ಲಿ ನಮೂದಿಸಲ್ಪಟ್ಟ ವೆಳಮ, ವೆಳ್ಳಕಾರ ಪಂಗಡಗಳೂ ಈ ಬೆಳ್ಳರ ಜಾತಿಗೇ ಸೇರಿದವರೇ ಆಗಿರುವರು. ಋಗ್ವೇದ ಮಂಡಲ ೧, ಅಧ್ಯಾಯ ೧೬; ಸೂತ್ರ ೧೦೯ರಲ್ಲಿ ಸೂಚಿತವಾದ ಈ 'ವೇಳು'ಗಳೆಂದರೆ ಯಜ್ಞ

ಕರ್ತೃಗಳಿಗೆ ಬಲವದ್ವಿರೋಧಿಗಳೆಂದು ಹೇಳ ಬೇಕಾಗುತ್ತದೆ. ನಮ್ಮ ಕನ್ನಡದ 'ಬೆಳ್ಳ'ರೊಡನೆ ಅಭಿನ್ನರಾದವರೇ ಈ 'ವೇಳು'ಗಳು (ನಾಡೋಜಪಂಪ, ಪುಟ ೫೭೭)

೦೦ ೦೦ ೦೦ ೦೦

ಮಲಬಾರ್ ಮೆನ್ಯುವೆಲ್ಲಿನಲ್ಲಿ 'ಪಾಡಿ' ವಿಚಾರ: (ಪುಟ ೧೪೩ ಮತ್ತು ೧೪೪)

"ಬೇರೆ ಬೇರೆ ವರ್ಗದ ಜನರ ನಿವಾಸಿ ಸ್ಥಾನಗಳಿಗೆ ಬೇರೆ ಬೇರೆ ಹೆಸರುಗಳನ್ನು ಉಪಯೋಗಿಸುತ್ತಾರೆ, ನಂಬೂದರಿ ಪಾಡರಿರುವ ಮನೆಯು 'ಮನ'ವೆಂದೂ ನಂಬೂದರಿಯವರ ವಸತಿ ಗೃಹ 'ಇಲ್ಲಮ್' ಎಂದೂ ರಾಜನದ್ದು ಕೋವಿಲಯಮ್ (ಕೊಟ್ಟಾರಂ ಯಾ ಎಡಂ) ಎಂದೂ, ಪಿಷರೊದಿಯ ನಿವಾಸವು ಪಿಷರಮ್ ಎಂದೂ, ವಾರಿಯತ್ ಇರುವ ಸ್ಥಳವು ವಾರಿಯಮ್ ಎಂದೂ, ನಾಯರಿರುವ ವಾಸಸ್ಥಳವು ಭವನಂ ಯಾ ಬೀಡು ಎಂದೂ, ಕೆಳವರ್ಗದವರು ವಾಸಿಸುವ ಸ್ಥಳವು 'ಪುರ'ವೆಂದೂ ಕರೆಯಲ್ಪಡುತ್ತವೆ. ಅತೀ ಕೆಳವರ್ಗದ ಜಾತಿಗಳಿಗೆ ಸೇರಿದವರು ಒಂದೇ ಕೋಣೆಯುಳ್ಳ, ಮಣ್ಣಿನ ಗೋಡೆಯ, ಕಿಟಕಿಗಳಿಲ್ಲದ ತಾಳೆಮರದ ಸೋಗೆಗಳಿಂದ ಮುಚ್ಚಲ್ಪಟ್ಟ ಗುಡಿಸಲುಗಳಲ್ಲಿ ವಾಸಿಸುತ್ತಾರೆ (ಅವನ್ನು 'ಚಾಲ' ವೆಂದು ಕರೆಯುತ್ತಾರೆ) ಗಿರಿ ಜನರು ಬಿದಿರಿನಿಂದ ಗುಡಿಸಲುಗಳನ್ನು ನಿರ್ಮಿಸಿ ಹುಲ್ಲಿನ ಮಾಡುಗಳನ್ನು ಕಟ್ಟಿ ಅವಲ್ಲಿ ವಾಸಿಸುತ್ತಾರೆ. ಇಂತಹ ಮನೆಗಳ ಗುಂಪಿಗೆ 'ಪಾಡಿ' ಎಂದು ಕರೆಯುತ್ತಾರೆ"

ಇಲ್ಲಿ 'ಪಾಡಿ' ಎಂಬ ಹೆಸರು ಕೊಟ್ಟುದುದರ ಔಚಿತ್ಯ, ದನಗಾರರ (Herdsmen) 'ಪಟ್ಟಿ' ಕೊಂಡಿರುವ ಎಡೆಗಳು ಯಾ ಗುಡಿಗಳು ಇಂತಹ ಪಾಡಿಗಳೇ ಎಂಬುದನ್ನು ಇಲ್ಲಿ ನಿರ್ದೇಶಿಸಿದಂತಿದೆ. ಈ 'ಪಾಡಿ'ಗಳ ಮುಖ್ಯತೆಯನ್ನೂ, ಚರಿತ್ರೆಯನ್ನೂ ನನ್ನ ತೃತೀಯ ಲೇಖನದಲ್ಲಿ (ಪುಟ ೫೦ ಮತ್ತು ೫೧) ವಿಶದೀಕರಿಸಿದ್ದೇನೆ.

'ಪಾಡಿ' ಎಂಬುದರ ಅರ್ಥವನ್ನು The Dravidian Etymological Dictionary ಯಲ್ಲಿ ಈ ರೀತಿ ಕೊಟ್ಟುದು ಗಮನೀಯವಾಗಿದೆ.

Ta. Pati, town, city, hamlet, pastoral, village; patam street, street of herdsmen, patakam street, section of a village.

Ma. Pati (in N. pr. of villages) patakam part of a village.

Ka. Padi settlement, hamlet, village.

Kon. Padi hut of a Kurumba

Te. Padu village (at the end of names of places.)

SKt. Patakam a kind of village half a village.

Mar. Pada hamlet or cluster of houses of agriculturists (also Guj, Bengal.)

— ೫ —

ಬಿಲ್ಲವರು ತುಳುವದ ಮೊದಲಿಗರೆಂಬುದನ್ನು ಹೆಚ್ಚು ದೃಢಗೊಳಿಸುವ ಅವಶ್ಯಕತೆಯಿಲ್ಲವಾದರೂ ಅವರು ಮಲಬಾರಿನ 'ತೀಯ' ರಲ್ಲವೆಂಬುದನ್ನು ಸ್ಪಷ್ಟ ಪಡಿಸುದವಶ್ಯ. ಬಿಲ್ಲವರು (ಹಳೆ ಪೈಕರು) ನಮ್ಮ ನಾಡಿನ ಮೂಲಿಗರು. ಅವರು ಈ ನಾಡಿನ ನಾಗರಿಕತೆಯ ಪ್ರಥಮ ಹಂತವನ್ನು ನಿರ್ದೇಶಿಸುವವರು. ಬೇಟೆಯೇ ಅವರ ಕಸುಬಾಗಿದ್ದಿರಬೇಕು. ಅಂಬಿಗರೂ, ಬೇಡರೂ ಪ್ರಾಯಶಃ ಇವರ ವರ್ಗಕ್ಕೇನೇ ಸೇರಿದವರಿರಬೇಕು. ಇವರನ್ನು ಘಟ್ಟದ ಮೇಲಿನ 'ಮಂಜರಾಬಾದಿ' ನಲ್ಲಿ 'ದೇವರ ಮಕ್ಕಳು' ಎಂದು ಕರೆಯುದರಿಂದ, ಬಹುಶಃ ಇದು 'ತೀವರ' ಮಕ್ಕಳಾಗಿದ್ದಿರಬೇಕೆಂದು ಭ್ರಮಿಸಿ, ಇವರು ಮಲಬಾರಿನ 'ತೀಯ'ರೆಂದೂ, ಉದ್ಯೋಗದಲ್ಲಿ ತೀಯರೂ, ಬಿಲ್ಲವರೂ ಹೆಂಡ ಇಳಿಸುವವರಾದುದರಿಂದ ಈ ಎರಡೂ ವರ್ಗಗಳು ಒಂದೇ ಎಂಬ ತಪ್ಪು ತಿಳುವಳಿಕೆ ಬಂದಿದೆ. ಕೆಳ ವರ್ಗದವರನ್ನು, ದಲಿತ ವರ್ಗದವರನ್ನು ದೇವರ ಮಕ್ಕಳು ಎಂದು ಕರೆಯುವ ವಾಡಿಕೆ ಇಂದಿಗೂ ಇದೆ. ನಿಮ್ನ ವರ್ಗದವರು ದೇವರ ಮಾನ್ಯರು ಎಂದು ತಮ್ಮನ್ನು ಕರೆದು ಕೊಳ್ಳುತ್ತಾರೆ. ಬಿಲ್ಲವರು ಕೆಳದಿಯನಾಯಕರ, ಟಿಪ್ಪುಸುಲ್ತಾನನ ಕಾಲದಲ್ಲಿ ಬಿಲ್ಲುಗಾರರಾಗಿ ಸೈನ್ಯಕ್ಕೆ ಸೇರುವುದರಿಂದ ಅವರು ಬಿಲ್ಲಿನವರಾಗಿ ಅನಂತರ ಬಿಲ್ಲವರೆನಿಸಿಕೊಂಡರು ಎಂಬುವದಕ್ಕೆ ಏನು ಆಧಾರಗಳೂ ಕಂಡು ಬರುವುದಿಲ್ಲ. ಥರ್ಸ್ಟನರು ತಮ್ಮ ಗ್ರಂಥದ ಪ್ರಥಮ ಭಾಗದಲ್ಲಿ (ಪುಟಗಳು 243,244 248, 249,250,251 & 252) ಉಲ್ಲೇಖಿಸಿದ ವಿಷಯಗಳ ಸಾರಾಂಶ ಹೀಗಿದೆ, "ಬಿಲ್ಲವ ಎಂಬ ಶಬ್ದದ ವ್ಯುತ್ಪತ್ತಿ, ಮೂಲ ಹೇಗೂ ಇರಲಿ, ಅವರು ಪ್ರಾಮುಖ್ಯವಾಗಿ ತುಳುವರ್ಗಕ್ಕೆ ಸೇರಿದ ಜನರಾಗಿದ್ದಾರೆ ಮತ್ತು ಅವರಲ್ಲಿ ಆಸ್ತಿ ಪಾಸ್ತಿಗಳು ಹೆಂಗಸರ ಮೂಲಕ ಅನುಭವಿಸಲ್ಪಡುತ್ತದೆ........ಬಿಲ್ಲವರು 'ತೀಯರ'ಗಿಂತ ದೈಹಿಕ ಲಕ್ಷಣ ಒಂದರಲ್ಲಿ ವಿಶಿಷ್ಟ ರೀತಿಯಲ್ಲಿ ವಿಭಿನ್ನರಾಗಿದ್ದಾರೆ. ಈ ಕೆಳಗಿನ Cephalic Index ತೋರಿಸುವಂತೆ 'ತೀಯ"ರು Dolichocephclic ವರ್ಗಕ್ಕೆಸೇರಿದವರಾಗಿದ್ದಾರೆ. ಆದರೆ ಬಿಲ್ಲವರು, ಇತರ ತುಳುವರಂತೆ Sub-Brachycephalic ವರ್ಗಕ್ಕೆ ಸೇರಿದವರಾಗಿದ್ದಾರೆ.

Cephalic Index

40 ತೀಯರು........ಸರಾಸರಿ 73 ಸೆ. ಮಿ.

50 ಬಿಲ್ಲವರು... ....ಸರಾಸರಿ 80 ಸೆ. ಮಿ.

ಬಿಲ್ಲವರೂ ಉತ್ತರ ಕನ್ನಡದ (ಹವಿಕ ದೇಶದ) ಹಳೇ ಪೈಕರೂ ಒಂದೇ ಬುಡಕಟ್ಟಿಗೆ ಸೇರಿದವರು. ಹಳೇ ಪೈಕರೆಂದರೆ 'ಪಶುಕ'ದ ಪ್ರಾಚೀನರು. ಇವರ ಉದ್ಯೋ

ಗವೂ ಬೇಟೆಗಾರಿಕೆಯೇ ಆಗಿತ್ತು. ಬಿಲ್ಲವರನ್ನು ಬೈದ್ಯ ಎಂದೂ ಕರೆಯುತ್ತಾರೆ. ಅವರ ಕುಟುಂಬಗಳ ಹೆಸರುಗಳಲ್ಲಿ ಬೈದ್ಯ (ಬೈದ) ಎಂದೂ ಇದೆ. ಇದನ್ನು 'ಬೈದಿನಾಕುಳು"(ಹೊರಗಣಿಂದ ಬಂದವರು) ಎಂದು ಮುಂತಾಗಿ ತುಳುವಿನಲ್ಲಿ ಪರಿವರ್ತಿಸಿ ಕೊಳ್ಳುವುದರಲ್ಲಿ ಏನೇನೂ ಅರ್ಥವಿಲ್ಲ. ಇವರು ಕಾಡಿನಲ್ಲಿದ್ದವರಾದುದರಿಂದಲೂ, ಬೇಟೆಗಾರರಾಗಿದ್ದುದರಿಂದಲೂ, ವನಸ್ಪತಿಗಳ ಪರಿಚಯ ಹೆಚ್ಚಿಗೆಯಿದ್ದು, ಗಿಡಮೂಲಿಕೆಯ ಔಷಧಿಗಳನ್ನು ಕೊಡುವ ಉದ್ಯೋಗವನ್ನು ಮಾಡುತ್ತಿದ್ದುದರಿಂದಲೂ, ಬೈದ್ಯ (ಬೈದೆ) ಎಂದು ಕರೆಯಲ್ಪಟ್ಟರು. ವೈದ್ಯವೆಂಬುದರ ರೂಪವೇ ಬೈದ್ಯ. ಈಗಲೂ ವೈದ್ಯಕೀಯ ವೃತ್ತಿಯನ್ನು ಕೆಲ್ಪವರ್ಗದವರು ಮಾಡುತ್ತಿದ್ದರೆ, ಅವರೂ ವೈದ್ಯರೆಂದು ಹೆಸರನ್ನು ಧರಿಸಿಕೊಳ್ಳುವ ಪದ್ಧತಿ ಇದೆ. "Castes in India" ಎಂಬ Dr.G H.Hutton ರ ಪುಸ್ತಕದಲ್ಲಿ ಬಂಗಾಳದಲ್ಲಿ ಇಂತಹ ಒಂದು ವರ್ಗವಿರುವುದೂ ಕಂಡು ಬರುತ್ತದೆ. "There is also in Bengala brachycephahic Mongolian element to be seen in the people of the Chittagong Hills on the Burma border and on the foot of the Himalayas. But the broadheadedness which is typical of the Bengal Brahman and found also in other castes of high Standing like Kayasta and Baidya is of a different Character and to be associated with that Western India" ಬೈದ್ಯರವೂರು ಬೈದೂರು (ಬೈಂದೂರ ಈ ಹೆಸರು ಕ್ರಿ.ಶ.1900 ರರ ಈಚಿನದು) ಆಗಿರಬೇಕೆಂದೆನಿಸುತ್ತದೆ. ಬಂಟರಲ್ಲಿದ್ದಂತೆ ಬಿಲ್ಲವರಲ್ಲೂ ಅನೇಕ ಬಳಿಗಳಿವೆ. ಇವು ಅವರಲ್ಲಿರುವ 'Exogamous Septs'ನ್ನೂ ಸೂಚಿಸುತ್ತವೆ. ಅಳಿಯ ಸಂತಾನ ವ್ಯವಸ್ಥೆಯ ಪ್ರಕಾರ ಇರಬೇಕಾದ 20 ಬಳಿಗಳಿವು ಎಂಬ ಐತಿಹ್ಯವಿದು. ಬಿಲ್ಲವರ ಮುಖ್ಯಸ್ಥನನ್ನು 'ಗುರಿಗಾರ" (Gurikar)ನೆಂದು ಕರೆಯುವರು. ಈ ಗುರಿಕಾರ ಎಂಬ ಶಬ್ದವು ಪ್ರಾಮಾಖ್ಯತೆಯುಳ್ಳದ್ದಾಗಿದೆ. ಕಾರಣ, ಇದರ ಮೂಲಾರ್ಥ ಗುರಿ ಇಟ್ಟು ಹೊಡೆಯುವವನೆಂದು. ಇದು ಮೊದಲು ಈ ವರ್ಗಕ್ಕೆನೇ ಇದ್ದ ಹೆಸರು [illegible] ಎಂದು. ಅನಂತರದಲ್ಲಿ ಮುಖ್ಯಸ್ಥನಿಗೆ ಬಂದುದಾಗಿರಬಹುದು. ಗುರಿಕಾರರೆಂ[illegible] ಬಿಲ್ಲವರೇ ಆಗಿರುವರು. Mysore Gazetteer [illegible]ಲ್ಲಿ [illegible]ಡರಿಗೆ 'ಗುರಿಕಾರ'ರೆಂದು (Marksmen) ಕರೆಯುವುದೂ ಇದೆ ಎಂದು ಬ[illegible]ದು[illegible] ವಿಚಾರಣೀಯವಾಗಿದೆ. (Vol, ಪುಟ 213) ಈ ಗುರಿಕಾರ ಎಂಬ ಪದವು ಬಹಳ ಹಳಗಾಲದಿಟ್ಟು ಅದನ್ನು ನಮ್ಮ ನಾಡಿನ ಇತರ ಪಂಗಡಗಳ ಮುಖ್ಯ[illegible]ರಿಗೂ ಗೌಣಾರ್ಥದಲ್ಲಿ ಉಪಯೋಗಿಸುವ ಪದ್ಧತಿ ಬಳಕೆಗೆ ಬಂತು.

"Vaidyan or Baidya, meaning physicians or medicine-man occurs as a title of Kshourakas, Billavas and Pulluvans at times of

census and has been return as an occupational Sub-division of Paraiyans" (Castes and Tribes of Southern India of by E. Thurston Page 227, Part A & B.)

ಬೊಂಬಾಯಿ ಪ್ರಾಂತ್ಯದ ಹಾಗೂ ಮಧ್ಯ ಭಾರತದಲ್ಲಿ ಕಂಡು ಬರುವ ಭಿಲ್ಲರೂ, ನಮ್ಮ ನಾಡಿನ ಬಿಲ್ಲವರೂ ಆದಿಯಲ್ಲಿ ಒಂದೇ ವರ್ಗಕ್ಕೆ ಸೇರಿದವರೆಂದು ನನಗನಿಸುತ್ತದೆ. ಈ ಭಿಲ್ಲರಲ್ಲಿ ಹಿಂದೂ ಸಂಸ್ಕೃತಿಯನ್ನವಲಂಬಿಸಿದ, ಹಾಗೂ ಪ್ರಗತಿ ಹೊಂದಿದವರು ಬಿಲ್ಲವರಾಗಿರ ಬೇಕೆಂದೂ ನನಗೆ ಭಾಸವಾಗುತ್ತದೆ. Dr. Hutton ರು ಅವರ 'Castes in India' ಎಂಬ ಗ್ರಂಥದಲ್ಲಿ ಈ ಕೆಳಗಿನ ವಿವರವನ್ನು ಭಿಲ್ಲರ ಕುರಿತು ಕೊಟ್ಟಿದ್ದಾರೆ.

"One famous tribe of Western India, however, is still numerous and vigorous, and that is the Bhil tribe, an important section of which is to be found, in the Bombay province, though i, extends widely into Rajputana to the north nd into Central Indiat eastwards. Bhili, the tribal language, is an Indo-Aryan tongue, but it probably replaces an older Dravidian tongue, and perhaps a Kolarian language before that. The tribesmen, partially Hinduised, now in most districts, but in some professing a rather unorthodox form of Muslim faith, still retain their tribal organisation and tribal consciousness. Most of them are now peaceful cultivators. but in the past, they have been renowned for brigandage and lawlessness. They are a smallish, swarthy race, very expert in the use of the bow. There are a number of different sections of the Bhil tribe each divided into many exogamous and totemistic clans. They venerate the horse above other animals, but their chief festivals are those in honour of the dead. They are the inveterate believers in witchcraft and their women, who have much freedom and influence, used in former times to accompany their menfolk into battle using slings with great effect." ಈ ವಿಷಯದ ಕುರಿತು ಕೊನೆಯ ನಿರ್ಧಾರ ಮಾಡುವ ಮೊದಲು ಇನ್ನೂ ಹೆಚ್ಚಿನ ಸಂಶೋಧನೆ ಅಗತ್ಯವಾಗಿದೆ.

## — ೭ —

ಮೊಗೆಯರು ಯಾ ಮೊಗೇರರೂ ತುಳುವದ ಮೂಲಿಗರು. ಅವರು ಮಳೆಯಾಳ ದೇಶದ 'ಮುಕ್ಕುವ'ರಿಗೆ ಸರಿಹೋಲುವವರು. ತುಳುವ ಮೊಗೇರರು

ಬೆಸ್ತರೂ ದೋಣಿನಡೆಯುವವರೂ, ಪಲ್ಲಕ್ಕಿ ಹೊರುವವರೂ ಆಗಿದ್ದಾರೆ. ಇವರು ತಾವು ಪರಿಶುದ್ಧ ಶೂದ್ರರೆಂದು ಹೇಳುತ್ತಾರೆ ಮತ್ತು ಹಳೆಪೈಕರಿಗಿಂತ ಶ್ರೇಷ್ಠರೂ ಎಂದು ಹೇಳುತ್ತಾರೆ. ಆದರೆ ಬಂಟರಿಗಿಂತ ಕೆಳವರ್ಗದವರೆಂದು ಒಪ್ಪುತ್ತಾರೆ. ಇತ್ತೀಚೆಗೆ ಈ ಮೊಗೇರರು ಎಣ್ಣೆ ತೆಗೆಯುವವೃತ್ತಿಯಿಂದಗಾಣಿಗರೆಂಬುದಾಗಿಯೂ, ಸಂಗೀತದ ಕಸುಬಿನಿಂದ ಸಪ್ಪಳಿಗರೆಂಬುದಾಗಿಯೂ, ಪಲ್ಲಕಿ ಹೊರುವ ಉದ್ಯೋಗ ದಿಂದ 'ಬೋವಿ' ಎಂಬುದಾಗಿಯೂ, ಕರೆಯಲ್ಪಡುತ್ತಾರೆ. ಇವು ಉದ್ಯೋಗದಿಂದ ಬಂದ ಹೆಸರುಗಳು. ಮೈಸೂರಿನತ್ತಣಿಂದ ಕೆಲವುಂದಿ ಬೆಸ್ತರು ಬಂದು ಪುತ್ತೂರು ತಾಲೂಕಿನಲ್ಲಿ ನಿಂತು ಬೋವಿಯರೆಂದು ಕರೆಯಲ್ಪಡುತ್ತಾರೆ. [ಬೋವಿ ಎಂಬ ಶಬ್ದವು ತೆಲುಗು ಶಬ್ದವಾದ 'ಬೋಯಿ' (ಹೊರುವವನು) ಎಂಬುದರ ಒಂದು ರೂಪಾಂತರ]

ಮೊಗೇರರ ವಾಸಸ್ಥಳವು 'ಪಟ್ಟಣ' ವೆಂದು ಕರೆಯಲ್ಪಡುತ್ತದೆ. (ಒಡೊರಿಒಟ್ಟು ಮತ್ತು ಮಾನಂಪಾಡಿ ಪಟ್ಟಣ) ಆದುದರಿಂದ ಮೊಗೇರರನ್ನು ಪಟ್ಟಣದವನೆಂದೂ (ಪಟ್ಟಣದಾಯು) ಕೆಲವೊಮ್ಮೆ ಕರೆಯಲಾಗುತ್ತದೆ. ಮದ್ರಾಸು ಶಹರಿನಲ್ಲಿಯ ತಮಿಳು ಬೆಸ್ತನು 'ಪಟ್ಟಣವನ್' ಎನ್ನಿಸಿಕೊಳ್ಳುತ್ತಾನೆ. ಕಾರಣ, ಈ ಬೆಸ್ತರು ಕರಾವಳಿಯಲ್ಲಿ ತಮ್ಮದೇ ಆದ ಗ್ರಾಮ, ಹಾಗೂ ಪಟ್ಟಣದಲ್ಲಿರುವವರು.

ಇತರ ತುಳುವರಂತೆ ಮೊಗೇರರಲ್ಲೂ ಬೇರೆ ಬೇರೆ 'ಬಳಿ'ಗಳಿವೆ. ಅವಲ್ಲಿ ಕೆಲವು ಈ ಕೆಳಗಿನಂತಿವೆ. "ಆನೆ, ಬಲಿ (ಒಂದು ತರದ ಮೀನು) ದೇವ, ದ್ಯಾವ (ಆಮೆ) ಹೊನ್ನೆ, ಸೆಟ್ಟಿ (ಮೀನು), ತೊಲನ (ತೋಳ) ಬಳಿಗಳು" ಮೊಗೇರರ ಜಾತಿಯ ಸಾಮಾನ್ಯ ಹೆಸರು "ಮರಕಲರು" ಎಂಬುದಾಗಿದೆ. ಅವರಲ್ಲಿ ಮುಖ್ಯಸ್ಥರ ಕುಟುಂಬಕ್ಕೆ ಸೇರಿದವರಿಗೆ 'ಗುರಿಗಾರ' ರೆನ್ನುವರು. ಕುಂದಾಪುರ ತಾಲೂಕಿನಲ್ಲಿ ಇವರನ್ನು ನಾಯಕ (Naiker) ಎಂದು ಕರೆಯುತ್ತಾರೆ. (Castes and Tribes of Southern India by Thurston—Vol. V, Pages 65 to 69) ಇಲ್ಲಿ ಒಂದು ವಿಷಯ ವಿಚಾರಣೀಯವಾಗಿದೆ.

'ಮರಕಲ' ಎಂಬ ಹೆಸರು ತೆಲುಗು ಪ್ರಭಾವದಿಂದ ಬಂದುದಾಗಿದೆ. ಮರಕಲ್ಲು ಯಾ ಮರಕಡು ಎಂಬುದು ತೆಲುಗು ದೇಶದ ಮೀನುಗಾರಿಕೆ ವೃತ್ತಿಯಲ್ಲಿರುವ 'ಪಲ್ಲಿ' ಎಂಬವರ ಒಂದು ಪ್ರಭೇದ. ಈ ತೆಲುಗು ಮರಕಲರು ನಮ್ಮ ತುಳುನಾಡಿಗೆ ವಲಸೆ ಬಂದಂತೆ ದಾಖಲೆ ಇದೆ. ಉದ್ಯೋಗ ಒಂದೇ ಆದುದರಿಂದ ನಮ್ಮ ನಾಡಿನ ಮೊಗೇರರು ಆ ಕುಲನಾಮವನ್ನು ಇಟ್ಟುಕೊಂಡಂತೆ ತಿಳಿಯುತ್ತದೆ. ಹಾಗಾದರೆ ತುಳುವ ಮೊಗೇರರೂ, ಮಳೆಯಾಳದ 'ಮುಕ್ಕುವ'ರೂ, ತೆಲುಗು ದೇಶದ ಮರಕಲ್ಲರೂ

ಒಂದೇ ವರ್ಗಕ್ಕೆ ಸೇರಿದವರೆಂದು ಹೇಳಬಹುದು. ಈ ಚಾರಿತ್ರ್ಯ ಸಂಗತಿ ಗೊತ್ತಿಲ್ಲದೆ "ಮರಕಲ=ಮರಕಡಿದು ಅವರಲ್ಲಿ ಹತ್ತಾರು ಜನರು ಕುಳಿತು ಕೆಲಸ ಮಾಡಲಿಕ್ಕೆ ತಲ ಎಂದರೆ ಸ್ಥಳ ಮಾಡುವವರು; ಮರಕಲರು=ದೋಣಿ ಕಟ್ಟುವವರು; ಇವರೇ ತುಳುವರು; ಮರಕಲ=ಬಡಗಿ" ಎಂದು ಮುಂತಾಗಿ ಬರೆಯುವುದು ವಿಷಯವನ್ನು ತಿಳಿಯದಿರುವ ಲಕ್ಷಣವಲ್ಲದೆ ಬೇರೆ ಏನೂ ಅಲ್ಲ. (Marakallu or Marakalu, meaning fishermen, has been recorded as a sub—division of Pallis, engaegd as fishermen in the Telugu Country. The equivalent of Mukku, Marakalaru is a title or synonyner of Moger and Marakkar of Mukkuvar. Thurston Vol. V Page 501)।

The Gazetteer of the Bombay Presidency Kanara ಪುಸ್ತಕದಲ್ಲಿ ಮೊಗೇರರು (Mogers) ಉತ್ತರ ಕನ್ನಡಕ್ಕೆ ಹೊರಗಣಿಂದ ಬಂದವರಿರಬೇಕೆಂದೂ, ಆ ಜಿಲ್ಲೆಯ ಇತರ ಮೀನುಗಾರರಿಗಿಂತ ಈ ಮೊಗೇರರು ಎತ್ತರವಾಗಿಯೂ, ಸುಂದರಕಾಯರಾಗಿಯೂ ಹಾಗೂ ಹೆಚ್ಚು ಧೈರ್ಯಶಾಲಿಗಳಾಗಿರುವುದು ಈ ಅನುಮಾನವನ್ನು ಪುಷ್ಟೀಕರಿಸುತ್ತದೆ. ಮಧ್ಯ ಹಿಂದೂ ದೇಶದಲ್ಲಿ ಇದೇ ಹೆಸರಿನ (Moger) ಒಂದು ಜಾತಿ ಇದೆ ಎಂಬುದು ಗಮನೀಯ ವಿಷಯವಾಗಿದೆ. ಪ್ರಾಚೀನ ಕಾಲದಲ್ಲಿ ನಮ್ಮ ತುಳುವದ ಮೊದಲಿಗರೆನಿಸುವ ಮೊಗೇರರು ಮಧ್ಯ ಭಾರತದಿಂದ ವಲಸೆ ಬಂದಿರಲೂ ಬಹುದು.

— ೬ —

ನಾಡವರ ಕುರಿತಾಗಿ 'ನಾಡವರ (ಬಂಟರ) ಮೂಲ' ಎಂಬ ನಾಲ್ಕನೆಯ ಲೇಖನದಲ್ಲಿ (ಪುಟ 65) ವಿಷಯ ನಿರೂಪಣೆಯನ್ನಿತ್ತಿದ್ದೇನೆ; ಅವರಿಗೆ ಸಂಬಂಧಿಸಿದ ಇನ್ನೂ ಕೆಲವು ಮಾತುಗಳನ್ನು ವ್ಯಕ್ತಪಡಿಸಲು ಇಚ್ಛಿಸುತ್ತೇನೆ. ಥರ್ಸ್ಟನ್ ಅವರ ಗ್ರಂಥದ ಐದನೆಯ ಭಾಗದ ಪುಟ 249ರಲ್ಲಿ ನಾಟ್ಟನ ಎಂಬ ಜಾತಿಯ ವಿವರ ಹೀಗಿದೆ "ಈ ನಾಟ್ಟರು ಕೆಲವರ ಅಭಿಪ್ರಾಯ ಪ್ರಕಾರ ವಿಶಿಷ್ಟ ಒಂದು ಜಾತಿಯಾಗಿದೆ. ಇನ್ನೂ ಕೆಲವರ ಅಭಿಪ್ರಾಯದಂತೆ ವೆಲ್ಲಾಲರ ಒಂದು ಪಂಗಡವಾಗಿದೆ. 'ನಾಟ್ಟನ್' ಎಂಬ ಶಿರೋನಾಮೆಯಡಿಯಲ್ಲಿ ಬಂದಿರುವವರೆಲ್ಲರೂ ಸೇಲಂ ಜಿಲ್ಲೆಯವರಿದ್ದು ವ್ಯವಸಾಯಗಾರರಾಗಿದ್ದರು....ತಮಿಳು ನಾಡಿನ ಕೆಲವು ಭಾಗಗಳನ್ನು ನಾಡುಗಳಾಗಿ ವಿಭಾಗಿಸಿದ್ದು, ಪ್ರತಿನಾಡಿನಲ್ಲಿ 'ನಾಟ್ಟರ್ ಯಾ ನಾಟ್ಟನ್' ಎಂಬ ವಿಶಿಷ್ಟ ವರ್ಗವು ಪ್ರಧಾನವಾಗಿದೆ ಉದಾ:-ಪಳಯ ನಾಡಿನ ನಾಟ್ಟರು ವಲ್ಲಂಬನ್‌ರೂ, ಕಲ್ಲನರೂ ಆಗಿದ್ದಾರೆ. ಒಂದು ನಾಡಿನಲ್ಲಿ ಬೇರೆ ಬೇರೆ ಜಾತಿಗಳ ಕೂಟ

ಗಳಿಗೆ ಸಂಬಂಧಿಸಿದ ವ್ಯವಹಾರ, ವ್ಯವಸ್ಥೆಗಳನ್ನು ಆ ನಾಡಿನ ನಾಟ್ಟರರೇ ಮಾಡುವ ಪದ್ಧತಿ" ಇಲ್ಲಿ ನಾಟ್ಟರೆಂದರೆ ನಮ್ಮ ನಾಡಿನ ನಾಡವರೇ ಎಂದು ತಿಳಿದುಕೊಳ್ಳಬಹುದು.

ಡಾ| ಸಲೆತ್ತೊರರು ಅವರ 'The Social and Economic Life in the Vijayanagara Empire' ಎಂಬ ಅವರ ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ As regards the official status of the Nad people and the Madhyasthas, the following may be suggested. Inscriptional evidence does not positively define the status of these functicaries. The idea of Cerupasing the Nad people with the Tamil Nattar is not altogether improbable"

"At this stage, the Nattar (i. e;t he representatives of the Nadu) appeared to have volunteered to settle the question of enjoyment... and to carry out the decision arrived at by the Nattar and to have in the meantime during this period of hearing (by the Nattar) to worship of the temple performed by others" (Page 375)

ಅದೇ ಗ್ರಂಥದ ಪುಟ 134ರಲ್ಲಿ ಈ ಕೆಳಗಿನ ಚರಣವು ನಾಡವರ ವಿಷಯ ಬರೆಯಲ್ಪಟ್ಟಿದೆ. "ಈ ಜಾತಿಯು ದಕ್ಷಿಣ ಕನ್ನಡ ಜಿಲ್ಲೆಯ ಕನ್ನಡ ಮಾತನಾಡುವ ವ್ಯವಸಾಯಗಾರರದ್ದಾಗಿದೆ........ಈ ಜಾತಿಯ ಕುರಿತಾದ ಹೆಚ್ಚಿನ ವಿವರ ನನಗೆ ಬಂದಿಲ್ಲ. ಆದರೆ ಅವರು ಬಂಟ ಜಾತಿಗೆ ಸಂಬಂಧಿಸಿದವರೆಂದೂ, ಬಂಟರ ಬೇರೆ ಬೇರೆ ಒಳವರ್ಗಗಳಲ್ಲಿ ಇವರೂ ಒಂದು ವರ್ಗಕ್ಕೆ ಸೇರಿದ್ದವರೆಂದೂ ತಿಳಿದಿದ್ದೇನೆ. ಈ ನಾಡವ ಅಥವಾ, ನಾಡವರು ಎಂಬ ಹೆಸರು ನಾಡಿನ ಜನರು ಎಂಬುದನ್ನು ತಿಳಿಸುತ್ತದೆ." ಥರ್ಸ್ಟನರಿಗೆ 'ನಾಡವ' ಎಂಬುದರ ತಮಿಳು ಉಚ್ಚಾರಣೆ 'ನಾಟ್ಟರ್' ಎಂದು ತಿಳಿಯಲಾರದೆ ಮತ್ತು ಈ ನಾಡವ ವರ್ಗ ಆದಿಯಲ್ಲಿ ಕಂನಾಡಿನ ಎಲ್ಲಾ ಕಡೆ ಹರಡಿತ್ತೆಂದು ತಿಳಿಯದೆ ನಾಟ್ಟರರಿಗೂ, ನಾಡವರಿಗೂ ಸಂಬಂಧ ಕಲ್ಪಿಸಲು ಅಸಾಧ್ಯವಾಯಿತು.

ಅಂತೆಯೇ ಮಲಬಾರಿನ ನಾಯರರೂ ಈ ನಾಡವರ ವರ್ಗಕ್ಕೆನೇ ಸೇರಿದವರೆಂದು ತಿಳಿದುಬರುತ್ತದೆ. ಥರ್ಸ್ಟನರು ನಾಯರರ ಕುರಿತು ಹೀಗೆ ಬರೆದಿದ್ದಾರೆ. "ಮೂಲದಲ್ಲಿ ಈ ನಾಯರರು ದ್ರಾವಿಡ ಶಾಖೆಗೆ ಸೇರಿದವರಾಗಿದ್ದು ಮಲಬಾರಿಗೆ ವಲಸೆ ಬಂದವರಲ್ಲಿ ಪ್ರಧಾನರಾಗಿದ್ದಾರೆ. ಇವರು ತಮ್ಮ ಆಕ್ರಮಣ ಕಾರ್ಯದಲ್ಲಿ ವಿಜಯಿಗಳಾದುದರಿಂದ ಭೂಮಾಲೀಕರಾಗಿಯೂ, ಆಳುವವರಾಗಿಯೂ ಸ್ಥಾನ ಪಡೆ

ದರು. ಆರ್ಯರೊಡನೆ ನಡೆದ ಸಂಪರ್ಕದಿಂದ ಇವರಲ್ಲಿ ಜಾತಿಸಂಕೀರ್ಣವಾಯಿತು. ಇದು ಇವರ ದೈಹಿಕ ಲಕ್ಷಣಗಳಲ್ಲಿ ಕಂಡು ಬರುತ್ತದೆ. ಮೊದಲಲ್ಲಿ ನಾಯರರು ಬರೀ ಸೈನಿಕ ವರ್ಗಕ್ಕೆ ಸೇರಿದ್ದು, ಭೂಮಿಯನ್ನು ಪಡೆದು, ಯೋಧರಾಗಿ ಮಾತ್ರ ಕೆಲಸ ಮಾಡುತ್ತಿದ್ದರು. ತಮಿಳು ಪ್ರದೇಶದಿಂದ ವಲಸೆ ಬಂದ ಜಾತಿಗಳೊಡನೆ ಸಂಕೀರ್ಣಗೊಂಡು ಈಗ ಅವರು ಬೇರೆ ಬೇರೆ ಉದ್ಯೋಗವನ್ನು ನಡೆಸುತ್ತಾರೆ. ಈ ನಾಯರರ ವಾಸಸ್ಥಾನಕ್ಕೆ 'ಬೀಡು' ಎಂದು ಕರೆಯುವುದು ವಿಚಾರಣೀಯವಾಗಿದೆ.

Dravidian Etymological Dictionary ಇದರಲ್ಲಿ 3012ನೇ ಗುಂಪಿನಡಿಯಲ್ಲಿ ಶಬ್ದಾರ್ಥ ಹೀಗಿದೆ.

Ta. natu (obl. and adj nattu) country, district, province, locality, situation, earth, land, world, kingdom, state, rural tracts (opposite nakaram), open place, side, agricultural tract; Natan inhabitant of a country.

Ma.Natu cultivated land (opposite to Katu) the country(opposite to town), kingdom, province, smaller district; Nattar the people

Ka. Nadu (cultivated, planted), country (in opposition to kadu (province district, country (in opposition to town), nadadi-country man. rustic, an ordinary person; Nadiga village superintende-nt in the service of a swartha guru.

Tu. nadu, nadu district village; nadige one of cultivating class-es is the Northern Part of Canara

Te. Nadu, Nadika a Country.

## — ಔ —

### ಅಹಿಕ್ಷೇತ್ರವೆಂದರೆ (ಅಹಿಚ್ಛತ್ರ) ಯಾವುದು?

1. Panchala-Rohilkhand. Panchala was originally the country north and south—west of Delhi from the foot of the Himalayas to the river Chambal, but it was afterwards divided into north Panchala respected by the Ganges The capital of the former was Ahichhatra and that of the latter was Kampilya. South Panchala was the kingdom of Raja Drupada, whose daughter Droupadi was married to the five Pandavas. Mokandi was also the name of another capital of South Panchala extending from the Southern bank of the

Ganges to the river Charmanvati or Chambal (M. Bh Adi P. ch. 148) and North Panchala extending from the Ganges to the Himalayas. Kanoaj was also the capital of Panchala at the time of Buddha (Rhys David's Buddhist India, Page 27)

2. Ahichhatra —Ramnagar — 20 miles west of Barrely is Rohilkhand. The name of Ahichhatra is at present confused with the grambt fortress in the hands of Alamperkot and Sauratganj. It was the capital of North Panchala or Rohilkhand (Dr. Fiihrer M. A. and Cunningham A neo Gw. Page 359). It was also called Chatravati (M. Bh. Adi P. CH. 148). It is the Ahichhatra of the inseription Epigraphia India Vol. II Page 432, note by Filhrer) It is also called Ahichhatra (M. Bh. Vana Parva. ch. 255) In gain words Ahichhatra is said to be the principal town of the country called Jangala, which therefore was another name for North Panchala (C Weber's Indicha studies, X Page 398).

Ahichhatra and Ahikshetra are the same

ಇಷ್ಟು ವಿಚಾರಗಳಿಂದ ಅಹಿಚ್ಛತ್ರ ಪ್ರದೇಶವು ಯಾವುದೆಂದು ಸಂಕ್ಷೇಪವಾಗಿ ನಿಶ್ಚಯ ಮಾಡಬಹುದು.

ಡಾ॥ ಫ್ರಾಂಸಿಸ್ ಬುಕಾನನರು ಅವರ ಪುಸ್ತಕದಪುಟ 38ರಲ್ಲಿ ಈರೀತಿಯಾಗಿ ಬರೆದುದು ಬರೇ ಸಂಪ್ರದಾಯದ ಪ್ರತಿಫಲನವೇ ಹೊರತು ವಿಮರ್ಶೆಯ ಫಲಿತಾಂಶವಲ್ಲವೆಂಬುದನ್ನು ಸರಿಯಾಗಿ ತಿಳಿದು ಕೊಳ್ಳ ಬೇಕು.

"History of Haiga according to the Brahmins, 25 -2—1801 at Hiriguthy :— He (Mayooravarma) then brought a colony of five thousand true Brahmins from Ahichhatra a city in Telingana and settled them in Haiga. He brought others of the same origin and settled them in Konkana and Tuluva)

ತೆಲಿಂಗಾನದಲ್ಲಿ ಯಾವ ಅಹಿಚ್ಛತ್ರವೂ ಇಲ್ಲ. 'ಕೂಟಮಹಾಜಗತ್ತಿ'ನಲ್ಲಿ ಬರೆದಿರುವ "ನಾವು ಕದಂಬರಾಜನಾದ ಮಯೂರವರ್ಮನ ಕಾಲದ ಅಹಿಚ್ಛತ್ರವನ್ನು ವಿಚಾರಿಸುವುದಾದರೆ; ಅದು ಗೋದಾವರೀ ತೀರದ ದಕ್ಷಿಣ ಪ್ರದೇಶವಾದ ಅಹಿಚ್ಛತ್ರ ಎಂಬುದರಲ್ಲಿ ಯಾವ ಸಂದೇಹಕ್ಕೂ ಎಡೆಯಿಲ್ಲ" ಎಂಬ ಒಕ್ಕಣೆಯೂ ನಿರಾಧಾರವಾಗಿದೆ.

— ೫೦ —

Gazetteer of the Bombay Presidency-Kanara ಎಂಬ ಗ್ರಂಥದಲ್ಲಿ ಹವಿಕ ಬ್ರಾಹ್ಮಣರ ಕುರಿತಾದ ವಿವರಣೆ ಕೊಡುವಾಗ ಈ ಕೆಳಗಿನ ವಿಮರ್ಶೆಯು ಅದರಲ್ಲಿ ಕಂಡು ಬರುತ್ತದೆ. [ಪುಟ 117, 118 & 136] ಹವಿಕರು ನಾಲ್ಕು ವರ್ಗಗಳಾಗಿ ವಿಭಾಗಿಸಲ್ಪಟ್ಟದಾರೆ – ಹವಿಕ, ಕೋಟ, ಸಕಲೇಶಪುರ, ಮತ್ತು ಶಿವಳ್ಳಿ- ಹವಿಕರೊಡನೆ ಇತ್ತೀಚಿಗೆ ಕಲಹ ಉಂಟಾಗಿ, ಅವರನ್ನು ಬಿಟ್ಟು ಬಿಟ್ಟ ಸಕಲೇಶಪುರದವರನ್ನು ಹೊರತು ಉಳಿದವರೆಲ್ಲರೂ (ಎಂದರೆ ಹವಿಕರು, ಕೋಟದವರು, ಶಿವಳ್ಳಿಯವರು) ಸಹಭೋಜನ ಮಾಡುತ್ತಾರೆ. ಆದರೆ ಅಂತರ್ವಿವಾಹ ಅವರೊಳಗೆ ನಡೆಯುವುದಿಲ್ಲ. ಕೋಟದವರು ಹವಿಕರಿಂದ ಪ್ರತ್ಯೇಕವಾಗಲು ಬಹಳ ಕಾಲದಿಂದ ಅವರು ಬೇರೆ ಇದ್ದುದೇ ಕಾರಣ. ಮತ್ತು ಶಿವಳ್ಳಿಯವರೂ ಸಕಲೇಶಪುರದವರೂ ಪ್ರತ್ಯೇಕವಾಗಲು ಪ್ರಾಮುಖ್ಯವಾಗಿ ಸಾಮಾಜಿಕ ವೈಷಮ್ಯ ಹಾಗೂ ಕಲಹವೇ ಕಾರಣವಾದುವು.

ಹಾಗಾದರೆ ಕೋಟದವರು ಹವಿಕರ ಬುಡಕಟ್ಟಿಗೆ ಸೇರಿದವರೇ? ಇದನ್ನು ಕೋಟ ಬ್ರಾಹ್ಮಣರು ಒಪ್ಪುವುದಿಲ್ಲವಾದರೂ, ಇಲ್ಲಿ ವಿಚಾರ ಮಾಡುವ ಪ್ರಶ್ನೆ ಇದೆ. ಕೋಟದವರಿಗೂ ಇತರರಂತೆ ಮಠವಿಲ್ಲದಿರುವುದು, ಅವರದ್ದೇ ಆದ ಪ್ರತ್ಯೇಕ ಸಾಲಿಗ್ರಾಮ ನರಸಿಂಹ ದೇವಾಲಯವು ಅವರ ಧಾರ್ಮಿಕ ಕೇಂದ್ರವಾಗಿರುವುದೂ, ಅವರು ತಮ್ಮ ಕೂಟ ಮಹಾ ಜಗತ್ತನ್ನು ನಿರ್ಮಿಸಿದುದೂ ಇದನ್ನು ವಿಚಾರಿಸುವಾಗ ಇವರು ಹಿಂದಕ್ಕೆ ಹವಿಕರಿಂದ ಪ್ರತ್ಯೇಕವಾಗಿ ದಕ್ಷಿಣಕ್ಕೆ ವಸಾಹತು ಬಂದು ಕೋಟದಲ್ಲಿ ನೆಲೆ ಮಾಡಿದಂತೆ ಕಂಡುಬರುತ್ತದೆ. ಈ ರೀತಿ ವಿಮರ್ಶೆ ಮಾಡುವಾಗ ಬ್ರಾಹ್ಮಣರು ತಮ್ಮ ಮೂರನೆಯ ವಲಸೆಯಲ್ಲಿ ವೈಸೂರತ್ತಣಿಂದ (ಕುಪ್ಪೆತ್ತೂರು, ಹಂಗಳ-ಇತ್ಯಾದಿ) ಕ್ರಿ. ಶ. ಹನ್ನೊಂದನೆಯ ಸುಮಾರಿಗೆ ಬಂದಾಗ ಈ ಕೋಟ ಬ್ರಾಹ್ಮಣರು ಆ ವರ್ಗಕ್ಕೆ ಸೇರಿದವರೋ ಅಲ್ಲವೊ ಎಂಬ ಸಂದೇಹ ಮೂಡುತ್ತದೆ. "...But the Kote Kote swara and Haiga or Havika Brahmins are all branches of the same, the differnces between them having arisen in their setlement in Kanara." (Thurston Vol I. Page 376) ಅಂತೂ ಈ ಸಂದೇಹ ನಿವಾರಣೆಗೆ ಬೇರಾವ ಆಧಾರಗಳೂ ಸಹಾಯಕಗಳಾಗಿ ದೊರಕದಿರುವುದರಿಂದ ಈ ವಿಷಯವನ್ನಿಷ್ಟೇ ಉಲ್ಲೇಖಿಸಿ ಬಿಟ್ಟಿದ್ದೇನೆ.

ಈ ವಿವರದಲ್ಲಿ ತೋರಿ ಬರುವ ಶಿವಳ್ಳಿಯವರು ಯಾರು? "ಹೊನ್ನಾವರ ಮತ್ತು ಶಿರಸಿಯಲ್ಲಿ ಐದು ಮಂದಿ ಶಿವಳ್ಳಿಯವರಿದ್ದಾರೆ, ಶಿರಸಿಯಿಂದ ಒಂಭತ್ತು ಮೈಲು

ದೂರದಲ್ಲಿರುವ ಹಿಂದಕ್ಕೆ ಸಾಂತಪುರವೆಂದು ಕರೆಯಲ್ಪಡುತ್ತಿದ್ದ ಶಿವಳ್ಳಿ ಗ್ರಾಮ ದಿಂದ ಈ ಹೆಸರು ಅವರಿಗೆ ಬಂದುದಾಗಿದೆ. ಶಿವಳ್ಳಿಯವರು ಹವಿಕರ ಒಂದು ಭೇದವೇ ಆಗಿದ್ದು ಧಾರ್ಮಿಕ ಹಾಗೂ ಮತ ಸಂಬಂಧವಾಗಿ ಇವರು ನಲ್ವತ್ತು ವರ್ಷಗಳ ಹಿಂದೆ (ಎಂದರೆ ಸಾಧಾರಣ ಕ್ರಿ. ಶ. 1840ಕ್ಕೆ) ಹವಿಕರಿಂದ ಪ್ರತ್ಯೇಕ ವಾದರೂ............ಇವರು ಮಾಧ್ವ ವೈಷ್ಣವರಾಗಿದ್ದು ಸೋದಾ ಮಠದ (ಸೋಂದೆ) ಶಿಷ್ಯರಾಗಿದ್ದಾರೆ. ಇವರು ರೀತಿ ನೀತಿಗಳಲ್ಲಿ ಹವಿಕರನ್ನೇ ಹೋಲುತ್ತಾರೆ." ಇಲ್ಲಿ ನಮೂದಿಸಲ್ಪಟ್ಟ ಶಿವಳ್ಳಿಯವರೇ ದಕ್ಷಿಣ ಕನ್ನಡದ ಶಿವಳ್ಳಿಯವರೆಂಬ ನಿರ್ಧಾರ ಮಾಡಬಾರದು. ಕಾರಣ ಶಿರಸಿಯ ಹತ್ತಿರದ ಶಿವಳ್ಳಿಯವರು ಮತಾಂತರ ಹೊಂದಿದ ಹವಿಕರು ಎಂಬುದರಲ್ಲಿ ಎರಡು ಮಾತಿರಲಾರದು. ಆದುದರಿಂದ ನಮ್ಮ ಜಿಲ್ಲೆಯ (ಇಲ್ಲಿ ತುಳು ನಾಡೆಂಬ ಹೆಸರನ್ನು ಉಪಯೋಗಿಸಲಾರೆ. ಕಾರಣ ಹವಿಕರೂ ತುಳು ನಾಡಿನವರೇ) ಶಿವಳ್ಳಿ ಬ್ರಾಹ್ಮಣರೂ ಹವಿಕರಿಗೆ ಏನೇನೂ ಸಂಬಂಧವಿಲ್ಲದವ ರಾಗಿದ್ದಾರೆ.

ಅದೇ ಗ್ರಂಥದಲ್ಲಿ (The Gazetteer of Bombay Presidency Kanara, page 117) ಹವಿಕ ಬ್ರಾಹ್ಮಣರಲ್ಲಿಯೂ ಜಾತಿ ಸಂಕೀರ್ಣವಾಗಿದ್ದಿರ ಬಹುದೆಂಬ ಅಭಿಪ್ರಾಯವನ್ನು ಈ ರೀತಿಯಾಗಿ ತಿಳಿಸಿದೆ. "ಅವರದ್ದೇ ಆದ ಸಂಪ್ರ ದಾಯದಂತೆ, ಅವರು ಉತ್ತರ ಹಿಂದೂ ದೇಶದಿಂದ ಕ್ರಿ. ಶ. 680ರಿಂದ 700ರ ಸುಮಾರಿಗೆ ಮಯೂರವರ್ಮನಿಂದ ತರಿಸಲ್ಪಟ್ಟರೆಂದೂ, ಈ ಮಯೂರ ವರ್ಮನು ಕದಂಬ ಕುಲದ ಸ್ಥಾಪಕನೆಂದೂ ಅಥವಾ ಎರಡನೇ ಕದಂಬ ಕುಲದ ಮೂಲ ಪುರುಷನೆಂದೂ ಹೇಳಲ್ಪಟ್ಟಿದೆ. ಇನ್ನೊಂದು ಸಂಪ್ರದಾಯದಂತೆ ಇವರು ಹಾಲು ಅಕ್ಕಿ ಗೌಡ ಜಾತಿಯ ಹೆಂಗುಸರಲ್ಲಿ ಬ್ರಾಹ್ಮಣಗೆ ಜನಿಸಿದ ಸಂತತಿಯವರೆಂದೂ ತಿಳಿದು ಬರುತ್ತದೆ.

ತುಳುವದಲ್ಲಿ ಬ್ರಾಹ್ಮಣರಲ್ಲಿ ಜಾತಿ ಸಂಕೀರ್ಣ (racial intermixure) ಆಗಿರಬೇಕು ಎಂದುದಕ್ಕೆ ಇದೊಂದು ನಿದರ್ಶನ. ಆದುದರಿಂದ ಯಾವ ವರ್ಗದ ವರೂ "ಜಾತಿ ಪರಿಶುದ್ಧತೆಯ" (Racical Purity) ಕುರಿತು ವಾದಿಸುವಂತಿಲ್ಲ.

ದಕ್ಷಿಣ ಭಾರತದ ದ್ರಾವಿಡ ಬ್ರಾಹ್ಮಣರ ಮೂಲದ ಕುರಿತಾಗಿಯೇ ಈ ಕೆಳಗಿನ ವಿಷಯಗಳು ಹೇಳಲಾಗಿವೆ. ಅವುಗಳು ಸತ್ಯವಾದುವುಗಳೂ ಆಗಿವೆ. "ಈಗ ಸಾಮಾನ್ಯ ವಾಗಿ ತಿಳಿದು, ಅಂಗೀಕರಿಸಲ್ಪಟ್ಟಂತೆ, ದಕ್ಷಿಣದ ಬ್ರಾಹ್ಮಣರು ಪರಿಶುದ್ಧ ಆರ್ಯ ರಲ್ಲ. ಅವರು ಆರ್ಯ ಮತ್ತು ದ್ರಾವಿಡ ಜನಾಂಗಗಳ ಸೇರ್ಪಡೆಯಿಂದಾದ ವರ್ಗ. ಹಳಗಾಲದಲ್ಲಿ, ಈಗ ಕಂಡು ಬರುವಂತೆ ಜಾತೀಯತೆಯು ಅಷ್ಟು ಕಠಿಣವಾಗಿರಲಿಲ್ಲ.

ಬ್ರಾಹ್ಮಣನಲ್ಲದವನು, ಬ್ರಾಹ್ಮಣ್ಯಕ್ಕೆ ಅಗತ್ಯವಾದ ಜ್ಞಾನವನ್ನು ಹೊಂದಿ, ಬ್ರಾಹ್ಮಣರ ಕರ್ತವ್ಯವನ್ನು ಮಾಡಿ, ಬ್ರಾಹ್ಮಣತ್ವವನ್ನು ಪಡೆಯಲು ಸಾಧ್ಯವಿತ್ತು. ನಂಬೂದರಿ ಬ್ರಾಹ್ಮಣರಲ್ಲಿ, ಈಗಲೂ ಪ್ರಚಲಿತವಿರುವ ಕ್ರಮವನ್ನು ಅರಿತುಕೊಂಡರೆ(ದೇಶದ ಸ್ತ್ರೀಯರೊಡನೆ ಸಂಗ ಮಾಡುವುದು), ಹಿಂದಿನ ಕಾಲದಲ್ಲಿ ಇಂತಹ ಸಂಗ ಸಂಪರ್ಕಗಳು ಹೆಚ್ಚಾಗಿದ್ದಿರಬೇಕೆಂದೂ, ಅವುಗಳ ಪರಿಣಾಮವಾಗಿ ಉತ್ಪತ್ತಿಯಾದ ಮಕ್ಕಳು ಬ್ರಾಹ್ಮಣರೆಂದೇ ಪರಿಗಣಿಸಲ್ಪಡುತ್ತಿದ್ದರೆಂದೂ ತಿಳಿದು ಬರುತ್ತದೆ(ಇಂತಹ ಬ್ರಾಹ್ಮಣ ಪತಿತರೆಂದು ತಿಳಿಯಲ್ಪಟ್ಟಿರುವುದು ಸಹಜ) ಇಂದಿಗೂ ಅಂತಹವರಿಗೆ ಬ್ರಾಹ್ಮಣರ ಸಮಾಜದಲ್ಲಿ ಸಮಾನತೆ ಇಲ್ಲವೆಂಬುದೇನೊ ನಿಜ. ಶ್ರೇಷ್ಠವರ್ಗದ ಈ ರೀತಿಯ ಬ್ರಾಹ್ಮಣರಿಗೂ(ಬಿಳಿವರ್ಣದ ಮತ್ತು ದೀರ್ಘ ಮೂಗುಳ್ಳವರು),ಸ್ವಲ್ಪ ಕಡಮೆ ಸುಸಂಸ್ಕೃತರಾದ ಬ್ರಾಹ್ಮಣರಿಗೂ [ಕಪ್ಪು ವರ್ಣ, ಅಗಲ ಮೂಗಿನ ಕುಳ್ಳಗಾದವರು] ಇರುವ ವ್ಯತ್ಯಾಸವನ್ನು ಈ ರೀತಿಯ ವಂಶ ಸಂಕೀರ್ಣ(racial admixture)ವನ್ನಾಧರಿಸಿ ತಿಳಕೊಳ್ಳ ಬಹುದು. ಮೇಲು ವರ್ಗದ ಬ್ರಾಹ್ಮಣರಿಗೆ ಕೆಳ ವರ್ಗದ ತಮ್ಮ ಬಂಧುಗಳ ಮೂಲವನ್ನು ಈ ರೀತಿಯಲ್ಲಿ ಹುಡುಕುವುದು ಅವಮರ್ಯಾದೆಯಾಗಲಾರದು. (Whether the jungle tribes are, as I belive, the microscopic remnant of a pre-Dravidian people or as some hold, of Dravidians driven by a conquering race to the seclusion of the jungles, it is to the lasting influence of some such broadnosed anscestor that the high nasal index of many of the inhabitants of Southern India must, it seems to me, be attributed—Madras Census Report 1891 by Mr H. A. Stuart)

— ೮೩ —

ಬ್ರಾಹ್ಮಣರು ಸಹ್ಯಾದ್ರಿ ಖಂಡದಲ್ಲಾಗಲೀ ಗ್ರಾಮ ಪದ್ಧತಿಗಳಲಾಗಲೀ ತಾವು ಅಹಿಚ್ಛತ್ರದಿಂದ ಬಂದವರೆಂದು ಹೇಳುವುದರ ಅರ್ಥವೇನು ಎಂಬುದನ್ನು "ತುಳುನಾಡಿನಲ್ಲಿ ಬ್ರಾಹ್ಮಣ್ಯ" [ಪುಟ 97 ರಿಂದ 112] ಎಂಬ ಲೇಖನದಲ್ಲಿ ನಿಷ್ಕರ್ಷೆ ಮಾಡಿದ್ದೇನೆ. "ಮೈಸೂರು ಶಾಸನಗಳಲ್ಲಿ ಅಹಿಚ್ಛತ್ರಪುರ [ವಿಜಯಪುರ] ಅಹಿಚ್ಛತ್ರ ಅಗ್ರಹಾರ ಎಂಬ ಎಂಬ ಹೆಸರುಗಳು ಅಲ್ಲಲ್ಲಿ ಬಂದಿವೆ. ಆದುದರಿಂದ ಅಲ್ಲಿಂದ ಕನ್ನಡ ಜಿಲ್ಲೆಗೆ [ಕಂನಾಡಿಗೆ] ಬ್ರಾಹ್ಮಣರೂ ಬೇರೆ ಜನಗಳೂ ಬಂದ ಬಗೆಗೆ ಸಂದೇಹವಿಲ್ಲ" [ಕಂನಾಡ ಕಥೆ ಪುಟ 113]

"On the western side of India the Brahmins passed down the Konkan and Deccan in comparatively recent times, and they settled

more abundantly in Canara than they did in the southern district of Malabar. The Malabar Brahmins are thought to have arisen out of a fishing caste. But in all probabilities they repesent an earlier immigaticn, subsequently isolated and cut off from the rest of India by geographical positions." (Short account of the castes and tribes of the Presideney arranged according to certain main groups-Manual of the Madras Presideney Vol. II appendix. page 225)

"ಸಿಂದರು, ಸಿಂಧೂ ತೀರದಿಂದ ಬಂದವರೆಂಬ ಮಾತು ಅವರ ಮನೆತನದ ಹೆಸರಿನಿಂದಲೇ ತಿಳಿದು ಬರುವುದಾದರೂ, ಸಿಂಧೂ ತೀರದ ಯಾವ ನಾಡಿನಿಂದ ಬಂದರು ಎಂಬ ಮಾತು ಸಂದಿಗ್ಧವಾಗಿಯೇ ಉಳಿಯುತ್ತದೆ. ಇವರು ಅಹಿಚ್ಛತ್ರದಿಂದ ಕಂನಾಡಿಗೆ ಬಂದಿರಬೇಕೆಂದು ಡಾ। ದೇವದತ್ತ ಭಂಡಾರಕರರ ಅಭಿಪ್ರಾಯ. ಇದು ಸರಿ ಇದ್ದರೂ ಇರಬಹುದು. ಅಹಿಚ್ಛತ್ರದಿಂದ ನಿಶ್ಚಿತ ಸ್ಥಾನವನ್ನು ಕುರಿತು ಭಿನ್ನಾಭಿಪ್ರಾಯಗಳಿದ್ದುದು ಕಂಡು ಬರುತ್ತದೆ. ಆದರೂ ಸಿಂಧೂ ನದಿಯು, ಹರಿಯುವ ಹಿಮಾಚಲ ಅಂಚಿನಲ್ಲಿರ ಬೇಕೆಂದು ಹೇಳಲಾಗುತ್ತಿದೆ" [ಕಂನಾಡ ಕಥೆ, ಪುಟ 112]

ಮೈಸೂರು ಗಜೆಟಿಯರಿನ ಮೊದಲ ಭಾಗದಲ್ಲಿ [ಪುಟ 281, ಎಡಿಟೆಡ್ ಬೈ ಹಯವದನ ರಾವ್] ಮೈಸೂರಿಗೆ ಬ್ರಾಹ್ಮಣರನ್ನು ತರಿಸಿದ ವಿಷಯ ಈ ರೀತಿಯ ವಿವರಣೆ ಇದೆ. "ಮೈಸೂರಿಗೆ ಬ್ರಾಹ್ಮಣರ ಆಗಮನವು ಕ್ರಿ.ಶ. ಮೂರನೇಯ ಶತಮಾನದಲ್ಲೆಂದೂ ತಿಳಿಯಲಾಗಿದೆ. ಶಿವಮೊಗ್ಗ ಜಿಲ್ಲೆಯ ಶಿಖರಪುರ ತಾಲೂಕಿನ ಸ್ಥಾನಗುಂದೂರ [ತಲಗುಂದ]ನಲ್ಲಿ ಕದಂಬ ಅರಸನಾದ ಮುಕ್ಕಣ್ಣ ಯಾ ತ್ರಿಣೇತ್ರನು ಈ ಬ್ರಾಹ್ಮಣರನ್ನು ನೆಲೆನಿಲ್ಲಿಸಿದನೆಂದು ಐತಿಹ್ಯವಿದೆ. ಕೆಲವು ಶಾಸನಗಳು ಈ ವಿಷಯ ವಾಸ್ತವತೆಯನ್ನು ತಿಳಿಸುವಂತಿವೆ. ತನ್ನ ರಾಜ್ಯದಲ್ಲಿ ಯಾವ ಬ್ರಾಹ್ಮಣರೂ ಇಲ್ಲದುದನ್ನು ಕಂಡು ಉತ್ತರದ ಅಹಿಚ್ಛತ್ರ ಅಗ್ರಹಾರದಿಂದ (ಬರೈಲಿ ಜಿಲ್ಲೆಯಲ್ಲಿದೆ) ಅನೇಕ ಬ್ರಾಹ್ಮಣರ ಕುಟುಂಬಗಳನ್ನು ತರಿಸಿ ಸ್ಥಾನಗುಂದೂರು ಅಗ್ರಹಾರದಲ್ಲಿ ನೆಲೆಸಿದನು; ಇದು ಪಶ್ಚಿಮದಲ್ಲಿ ಪೂರ್ವದಲ್ಲಿ ಪಲ್ಲವ ಅರಸನಾದ ಮುಕ್ಕಂತಿಯು ಅದೇ ಸಮಯದಲ್ಲಿ ಬ್ರಾಹ್ಮಣರನ್ನು ತನ್ನ ರಾಜ್ಯದಲ್ಲಿ ನಿಲ್ಲಿಸಿದನು. ದಕ್ಷಿಣದಲ್ಲಿ ಗಂಗ ಅರಸನಾದ ವಿಷ್ಣುಗೋಪನು ಅದೇ ಕಾಲದಲ್ಲಿ ಬ್ರಾಹ್ಮಣರಿಗೆ ಆಶ್ರಯದಾತನಾದವನು (ಜೈನ ಧರ್ಮವನ್ನು ತ್ಯಜಿಸಿ) ರೈಸ್ ಚರಿತ್ರೆಕಾರನ ಪ್ರಕಾರ ಕ್ರಿ. ಶ. ಮೂರನೇ ಶತಮಾನಕ್ಕಿಂತ ಮೊದಲು ಬ್ರಾಹ್ಮಣರು ಮೈಸೂರಿನಲ್ಲಿದ್ದಿರಬೇಕು. ಶಾಸನಗಳೂ ಇವಕ್ಕೆ ಅನುಕೂಲವಾಗಿವೆ ಎಂದು ಆತನ ಅಭಿಪ್ರಾಯ.

ಕ್ರಿ. ಶ. ಎರಡನೆಯ ಶತಮಾನದ ಮಳವಳ್ಳಿ ಶಾಸನದ ಪ್ರಕಾರ ಶತಕರ್ಣಿ ಎಂಬ ಅರಸನು ಶಿವ ದೇವಾಲಯದ ಒಬ್ಬ ಬ್ರಾಹ್ಮಣನಿಗೆ ಮಾಡಿದ ದಾನವನ್ನೂ ಅನಂತರ ಕದಂಬ ಅರಸನೊಬ್ಬನು, ಅದೇ ದೇಗುಲದ ಪರವಾಗಿ ಬ್ರಾಹ್ಮಣನಿಗೆ ಮಾಡಿದ ದಾನವನ್ನೂ ಉಲ್ಲೇಖಿಸುತ್ತದೆ. ಮಾತ್ರವಲ್ಲದೆ, ತಲಗುಂದ ಶಾಸನದಲ್ಲಿ ಕದಂಬರೇ ನಿಷ್ಣಾತರಾದ ಬ್ರಾಹ್ಮಣರೆಂದೂ ಕಂಡುಬರುತ್ತದೆ. (ಇದರ ವಿಷಯ ಹಿಂದಕ್ಕೆ ಕೊಟ್ಟಿದ್ದೇನೆ) ಆದುದರಿಂದ ಬ್ರಾಹ್ಮಣ್ಯವು ವೈಷ್ಣವನನ್ನೂ ಅದಲ್ಲೂ ಶಿವನನ್ನು ಲಿಂಗದ ರೂಪದಲ್ಲಿ ಪೂಜಿಸುವ ಬ್ರಾಹ್ಮಣ್ಯವು, ಕ್ರಿಸ್ತಾಬ್ದದ ಆದಿಯಲ್ಲಿಯಲ್ಲಿಯೇ ಪ್ರಚಾರದಲ್ಲಿರಬಹುದೆಂದು ಊಹಿಸಬಹುದು. ಜೈನ ಬೌದ್ಧಮತಗಳೊಡನೆ ಸಮಾನವಾಗಿ ನಿಂತು, ಅವುಗಳನ್ನು ಮರೆಯಿಸುವ ಶಕ್ತಿಯನ್ನು ಬ್ರಾಹ್ಮಣ್ಯವು ಹೊಂದಿತ್ತು ಇತ್ತು ಎಂದು ತಿಳಿಯಬಹುದು. ಹಾಗಾದರೆ ಈ ಸಂಪ್ರದಾಯಗಳ ಅರ್ಥವೇನು? ರೈಸ್ ಸೂಚಿಸುವಂತೆ ಆ ಮೊದಲೇ ಅಸ್ತಿತ್ವದಲ್ಲಿದ್ದ ಬ್ರಾಹ್ಮಣ ಮತವು ಕ್ರಿ. ಶ. ಮೂರನೇ ಶತಮಾನದಿಂದ ಸಾರ್ವಜನಿಕರ ಅಂಗೀಕಾರವನ್ನು ರಾಷ್ಟ್ರದ ಮೂಲಕ ಪಡೆಯಿತೆನ್ನಬಹುದು." ನಾನು ಈ ಮೊದಲು ತಿಳಿಸಿದಂತೆ ತುಳುವಕ್ಕೆ ಬ್ರಾಹ್ಮಣರ ಎರಡನೆಯ ವಲಸೆಯು ಇದೇ ಸಮಯದಲ್ಲಿ ಆಯಿತೆಂದು ಹೇಳಬೇಕು.

○○ ○○ ○○ ○○ ○○

## ನಿರ್ಮಾಲ್ಯ ವಿಚಾರ

1. ದೇವಾರ್ಚನಪರೋ ವಿಪ್ರೋ ವಿತ್ತಾರ್ಥೀ ತತ್ಪರಕ್ರಿಯಃ ।
ಅಸೌ ದೇವಲಕೋ ನಾಮ ಹವ್ಯಕವ್ಯೇಷು ವರ್ಜಿತಃ ।
ದೇವಕೋಶೋಪಜೀವೀ ಚ ನಿಮ್ನದೇವಲಕೋ ಭವೇತ್ ।
ಅಪಾಂಕ್ತೇಯಃ ಸ ವಿಜ್ಞೇಯಃ ಸರ್ವಕರ್ಮಸು ಸರ್ವದಾ । (ಇತಿ ಪರಾಶರಃ)

(ದೇವ ಪೂಜಾನಿರತನಾಗಿ ದೇವಕರ್ಮಗಳಲ್ಲಿ ಆಸಕ್ತಿವುಳ್ಳವನಾಗಿ ಧನಾಭಿಲಾಷೆಯಿಂದ ಕೂಡಿದವನೂ ದೇವಲಕನೆಂದೆಣಿಸಿಕೊಂಡು ಹವ್ಯಕವ್ಯಾದಿಗಳಿಗೆ ವರ್ಜಿತನಾಗಿರುವನು. ದೇವರ ಭಂಡಾರದಿಂದ ಜೀವಿಸುವವನಾಗಿ ಕೀಳುಮಟ್ಟದವನಾಗಿ ಸಕಲ ಕರ್ಮಗಳಲ್ಲಿಯೂ ಪಂಕ್ತಿಭ್ರಷ್ಟನಾಗಿರುವನೆಂದು ತಿಳಿಯತಕ್ಕದು)

2. ಯೋಗೃಹಿತ್ವಾ ಧನಂ ವಿಪ್ರಃ ಕುರುತೇ ದೇವಪೂಜನಂ ।
ಸ ವೈ ದೇವಲಕೋ ನಾಮ ಸರ್ವಕರ್ಮ ಬಹಿಷ್ಕೃತಃ ।

(ಯಾವ ಬ್ರಾಹ್ಮಣನು ಹಣವನ್ನು ಸ್ವೀಕರಿಸಿ ದೇವರ ಪೂಜೆಯನ್ನು ಮಾಡುವನೋ ಅವನು ದೇವಲಕನೆಂದೆಣಿಸಿಕೊಂಡು ಸಕಲ ಕಾರ್ಯಗಳಲ್ಲಿ ಬಹಿಷ್ಕರಿಸಲ್ಪಡುತ್ತಾನೆ) ಇತ್ಯಾದಿ ಮಹಾಭಾರತ, ಮನು, ಯಾಜ್ಞವಲ್ಕ್ಯಸ್ಮೃತಿಗಳಲ್ಲಿ ಹೇಳುತ್ತದೆ.

3. ಪತ್ರಂ, ಪುಷ್ಪಂ, ಫಲಂ ತೋಯಮನ್ನಪಾನಾದಿ ತದ್ವಿಧಂ ।
ಅನಿವೇದ್ಯ ನ ಭುಂಜೀತ ಸಾಧಕಶ್ಚಂದ್ರಮೌಳಯೇ ।
ಉಪಭೋಗಾಯ ಗುರುಣಾ ವಸ್ತು ಯದ್ಯದುಪಸ್ಥಿತಂ ।
ತತ್ಸಮರ್ಪ್ಯ ತು ದೇವಾಯ ದದಮೀತಾತ್ಮಪಾವಕಃ ।

(ಪತ್ರ, ಪುಷ್ಪ, ಫಲ, ನೀರು, ಅನ್ನಪಾನಾದಿಗಳನ್ನು ಸಾಧಕನು ಈಶ್ವರನಿಗೆ ಸಮರ್ಪಿಸದೆ ತಿನ್ನ ಬಾರದು. ಗುರುವಿನ ಉಪಭೋಗಕ್ಕೋಸ್ಕರವಾಗಿ ಯಾವ ಯಾವ ವಸ್ತುಗಳಿವೆಯೋ, ಅವೆಲ್ಲವನ್ನೂ ದೇವರಿಗೆ ಸಮರ್ಪಿಸಿ ಭಾವುಕನು ಕೊಡ ತಕ್ಕದ್ದು.)

4. ನಿರ್ಮಾಲ್ಯಂ ತು ಸಮಾನೀಯ ಪಾದಾಂಶಂ ಚಂಡಮೂರ್ತಯೇ ।
ಪ್ರದದ್ಯಾತ್ ಅವಶಿಷ್ಟಂತು......
........................................ ಬ್ರಾಹ್ಮಣಸ್ತತಃ ।
ಭಕ್ಷಯೇತ್ಪರಯಾ ಭಕ್ತ್ಯಾ ಮುಚ್ಯತೇ ಸರ್ವಪಾತಕೈಃ ।
ಚಂಡಭಾಗಮದತ್ವಾತು ಯೋ ಭುಂಕ್ತೇ ಕಿಲ್ಬಿಷೀ ಭವೇತ್ ।

(ನಿರ್ಮಾಲ್ಯವನ್ನು ತಂದು ಚಂಡಮೂರ್ತಿಗೆ ಕಾಲುಭಾಗವನ್ನು ಸಮರ್ಪಿಸ ಬೇಕು. ಅನಂತರ ಶುದ್ಧಾತ್ಮನಾದ ಬ್ರಾಹ್ಮಣನು ಅವಶಿಷ್ಟವನ್ನು ಭುಜಿಸತಕ್ಕದ್ದು ಹೀಗೆ ಮಾಡುವುದರಿಂದ ಸರ್ವಪಾಪಗಳಿಂದ ಮುಕ್ತನಾಗುತ್ತಾನೆ. ಚಂಡಭಾಗವನ್ನು ಕೊಡದೇ ಯಾರು ಉಣ್ಣುವನೋ ಅವನಿಗೆ ಪಾಪ ಉಂಟಾಗುತ್ತದೆ.)

5. ತಸ್ಮಾತ್ ಸರ್ವಪ್ರಯತ್ನೇನ ಚಂಡಾಂಶಂ ಪರಿವರ್ಜಯೇತ್ ।
ಸಕಲಾನಾಂ ಚ ನೈವೇದ್ಯಂ ಭೋಕ್ತವ್ಯಂ ಸರ್ವದಾ ನರೈಃ ।
ಪ್ರತಿಮಾಸು ಚ ಸರ್ವಾಸು ನ ಚಂಡೋಽಧಿಕೃತೋಽಭವೇತ್ ।
ಬ್ರಹ್ಮಹಾಪಿ ಶುಚಿರ್ಭೂತ್ವಾ ನಿರ್ಮಾಲ್ಯಂ ಯಸ್ತು ಧಾರಯೇತ್ ।
ಶಿವಲೋಕಮವಾಪ್ನೋತಿ ಸರ್ವಭೋಗ ಸಮನ್ವಿತಃ ।
ವಿಪ್ರಾಃ ನಿರ್ಮಲತಾಂ ಯಾಂತಿ ತನ್ನಿರ್ಮಾಲ್ಯಂ ಪ್ರಕೀರ್ತಿತೆ ॥

(ಸರ್ವಪ್ರಯತ್ನಗಳಿಂದ ಚಂಡಾಂಶವನ್ನು ಬಿಡತಕ್ಕದ್ದು. ಈ ರೀತಿಯ ಸಕಲ ನೈವೇದ್ಯವನ್ನು ಮಾನವನು ಸದಾ ಉಣತಕ್ಕದು. ಬ್ರಹ್ಮಹತ್ಯ ಮಾಡಿದವನು ಶುಚಿ ಯಾಗಿದ್ದು ನಿರ್ಮಾಲ್ಯವನ್ನು ಯಾರು ಧರಿಸುವನೋ ಅವನು ಸಕಲ ಭೋಗಗಳಿಂದ ಕೂಡಿದವನಾಗಿ ಶಿವಲೋಕವನ್ನು ಪಡೆಯುತ್ತಾನೆ. ವಿಪ್ರನು ನಿರ್ಮಲತೆಯನ್ನು ಪಡೆಯುವುದರಿಂದ ನಿರ್ಮಾಲ್ಯವೆಂದು ಹೇಳಿಸಿಕೊಳ್ಳಲ್ಪಡುತ್ತದೆ.)

6. ಮತ್ಪ್ರಸಾದೋದಕಂ ಪುಷ್ಪಂ ಸದಾ ಧಾರ್ಯಂ ಮದಾಶ್ರಿತೈಃ ।
ಪಾದೋದಕಂ ಮಹಾತೀರ್ಥಂ ತಸ್ಮಿನ್ಗಂಗಾ ಸರಸ್ವತೀ ।

(ನನ್ನಾಶ್ರಿತರಿಂದ ನನ್ನ ಪ್ರಸಾದೋದಕವೂ ಪುಷ್ಪವೂ ಸದಾ ಧರಿಸಲ್ಪಡತಕ್ಕದು ಪಾದೋದಕ ಮಹಾತೀರ್ಥದಲ್ಲಿ ಗಂಗಾಸರಸ್ವತಿಯರ ಸಾನ್ನಿಧ್ಯವಿದೆ.)

### ಈ ರೀತಿ ಶೈವಾಗಮದಲ್ಲಿ ಅರ್ಚನಫಲ.

7. ನಿರ್ಮಲತ್ವಾಚ್ಚ ನಿರ್ಮಾಲ್ಯಮಿತಿ ಸಂಕೀರ್ತ್ಯತೇ ದ್ವಿಜೈಃ ।
ನಿರ್ಗತ ಮಾಲ್ಯ ನಿರ್ಮಾಲ್ಯಂ ।

(ಮಲವಿರಹಿತವಾದುದರಿಂದ ನಿರ್ಮಾಲ್ಯವೆಂದು ಹೇಳಿಸಲ್ಪಡುವುದು. ಅಥವಾ ನಿರ್ಗತ ಮಾಲ್ಯವು ನಿರ್ಮಾಲ್ಯವೆನಿಸುವುದು )

8. ಯತ್ರಯತ್ರ ಶಿವಾಗಾರೇ ತತ್ರ ತತ್ರ ಮಮಾಜ್ಞಯಾ ।
ಶಿವನಿರ್ಮಾಲ್ಯಭುಂಜಾನೋ ಛತ್ರವೇತ್ರಾಣಿಧಾರಕಾ।

ಈ ರೀತಿ ಸಹ್ಯಾದ್ರಿಖಂಡದಲ್ಲಿ ಉಕ್ತವಾದಂತೆ ಶಿವನಿರ್ಮಾಲ್ಯವು ತ್ಯಾಜ್ಯವಲ್ಲವೆಂಬುದನ್ನು ಸ್ಪಷ್ಟಮಾಡುವುದಕ್ಕೋಸುಗ ಮೇಲಿನ ಉದ್ಧರಣೆಗಳನ್ನಿತ್ತಿದ್ದೇನೆ.

ಎರಡನೆಯದಾಗಿ ದೇವಲಕನೂ, ನಮ್ಮ ನಾಡಿನಲ್ಲಿರುವ ಸ್ಥಾನಿಕನೂ ಒಂದೇ ಅಲ್ಲ ಎಂಬುದೂ ಮೇಲಿನ ದೃಷ್ಟಾಂತಗಳಿಂದ ಸ್ಫುಟಗೊಳ್ಳುವುದು.

— ಕ —

ತುಳು ನಾಡಿನ ಬ್ರಾಹ್ಮಣ್ಯದ ಕುರಿತಾಗಿ ಕೊನೆಯ ಮಾತನ್ನು ಹೇಳುವಾಗ 'ಕೂಟ ಮಹಾ ಜಗತ್ತು' ಎಂಬ ಪುಸ್ತಕದಲ್ಲಿ ಪ್ರಕಟಿತವಾದ ಕೆಲವು ವಿಷಯಗಳನ್ನಿತ್ತಿ ಸ್ವಲ್ಪ ವಿಮರ್ಶೆ ಮಾಡುವುದು ಅನುಚಿತವಲ್ಲ. ಸತ್ಯ ಸಂಗತಿಗಳನ್ನು ಚರಿತ್ರೆಯ ಬೆಳಕಿನಲ್ಲಿ ತಿಳಿದು ಕೊಳ್ಳುವುದು ನಮ್ಮ ಕರ್ತವ್ಯ. ಈ ವಿಮರ್ಶೆಯನ್ನು ಸ್ವಾರ್ಥ ದೃಷ್ಟಿಯಿಂದಾಗಲೀ ಸ್ವಪ್ರತಿಷ್ಠೆಗಾಗಲೀ ನಾನು ಮಾಡುವುದಿಲ್ಲ. ತುಳುನಾಡಿನ ಬ್ರಾಹ್ಮಣರ ನಿಜ ಚರಿತ್ರೆಯನ್ನು ತಿಳಿದು ಕೊಳ್ಳುವ ಉದ್ದೇಶ ನಮ್ಮದಿರಬೇಕು. ಮೇಲು ಕೀಳೆಂಬ ಭೇದ ಭಾವಗಳನ್ನು ಸಿದ್ಧಾಂತ ಪಡಿಸಬೇಕೆಂಬ ಉದ್ದೇಶವೇ ಮುಖ್ಯವಾಗಿದ್ದರೆ, ಅದನ್ನು ಹೇಗೂ ಮಾಡಲು ಸಾಧ್ಯವಿದೆ ಆದರೆ ಸಂಶೋಧನೆಯ ಕೆಲಸ ಇದಲ್ಲ; ಚರಿತ್ರೆಯ ನಿರ್ದೇಶನ ಇದಲ್ಲ. ಕೂಟ ಮಹಾ ಜಗತ್ತು ಎಂಬ ಪುಸ್ತಕದಲ್ಲಿ ಕಂಡು ಬರುವ ಈ ಕೆಳಗಿನ ಅಂಶಗಳನ್ನು ಚರಿತ್ರೆ ಒಪ್ಪುವಂತಿಲ್ಲ.

1. "ಶ್ರೀ ವೇದವ್ಯಾಸ ಮುನಿಗಳಿಂದ ರಚಿತವಾದ ಸ್ಕಂದ ಪುರಾಣದ ಪ್ರಾಮುಖ್ಯ ವಿಭಾಗವೆಂದರೆ ಸಹ್ಯಾದ್ರಿ ಖಂಡವು" ಎಂಬುದು ಸತ್ಯವಲ್ಲವೆಂದೂ ನನ್ನೀ ಪುಸ್ತಕದ ಪುಟ 97, 98, 99ರಲ್ಲಿ ಸ್ಪಷ್ಟ ಮಾಡಿದ್ದೇನೆ.

2. ಕೂಟ ಮಹಾಜಗತ್ತು ಈ ಪುಸ್ತಕದ ಲೇಖಕರು ಡಾ॥ಕುನ್ಹರಿಂದ ಸಂಶೋಧಿಸಲ್ಪಟ್ಟ "ಸ್ಕಂದ ಪುರಾಣಾಂತರ್ಗತಂ ಸಹ್ಯಾದ್ರಿ ಖಂಡಂ" ಎಂಬ ಗ್ರಂಥವನ್ನು ಆಧಾರವಾಗಿಟ್ಟುಕೊಳ್ಳುವ ಬದಲು [ಈ ಲೇಖಕರೇ ಇದು ಅಧಾರ ಗ್ರಂಥವೆಂದು

ಒಪ್ಪುತ್ತಾರೆ] ಹೊಸಬಾಳೆ ಗ್ರಾಮ ನಿವಾಸಿ ಅನಂತಶರ್ಮರು ಪ್ರಕಟಿಸಿದ ಉತ್ತರ ಸಹ್ಯಾದ್ರಿ ಖಂಡವನ್ನು ಆಧಾರವಾಗಿಟ್ಟು ಕೊಂಡುದು ಸ್ವಲ್ಪ ಆಶ್ಚರ್ಯವನ್ನುಂಟು ಮಾಡುತ್ತದೆ. ಕಾರಣ ಡಾ|| ಕುನ್ಹರ ಗ್ರಂಥವೂ ತುಂಬಾ ನ್ಯೂನತೆಗಳನ್ನೊಳಗೊಂಡಿದ್ದರೂ ಅನೇಕ ಹಸ್ತ ಪ್ರತಿಗಳನ್ನು ಪರಿಶೀಲಿಸಿ ಅಧಿಕೃತವೆಂದೆನಿಸುವವುಗಳನ್ನು ಅದರಲ್ಲಿ ಪ್ರಕಟಿಸಲಾಗಿದೆ; ಆದರೆ ಹೊಸಬಾಳೆ ಅನಂತಶರ್ಮರು ಪ್ರಕಟಿಸಿದ ಉತ್ತರ ಸಹ್ಯಾದ್ರಿ ಖಂಡವು ಆಧಾರ ಗ್ರಂಥವಾಗಿ ಪರಿಗಣಿಸಲ್ಪಡಲು ಯೋಗ್ಯತೆ ಉಳ್ಳದ್ದೆಂದು ನನಗೆ ಕಂಡು ಬರುವುದಿಲ್ಲ. ಚಾರಿತ್ರಿಕ ಸತ್ಯ ಸಂಗತಿಗಳನ್ನು ಯಾವ ತೆರನಾಗಿ ಇವುಗಳು ವಿಕೃತಗೊಳಿಸಿವೆ ಎಂಬುದನ್ನು ತಿಳಿಸುವುದಕ್ಕೋಸ್ಕರ ನಾನು ನನ್ನ ವಿಮರ್ಶೆಯಲ್ಲಿ ಈ ಎರಡೂ ಗ್ರಂಥಗಳಿಂದ ವಿಷಯಗಳನ್ನು ಆಯ್ದುಕೊಂಡಿದ್ದೇನೆ.

3. ಫ್ರಾನ್ಸಿಸ್ ಬುಕಾನನರು ತುಳುವ, ಹೈಗದ ಬ್ರಾಹ್ಮಣರ ಚರಿತ್ರೆಯನ್ನು ಕ್ರಿ.ಶ.1801ರಲ್ಲಿ ಆ ಬ್ರಾಹ್ಮಣರೇ ಹೇಳಿದಂತೆ ಬರೆದುದು ವಿನಾ ತಾನಾಗಿ ಸಂಶೋಧನೆ ವಿಮರ್ಶೆ ಮಾಡಿ, ಸತ್ಯ ಮಿಥ್ಯಗಳ ತುಲನೆ ಮಾಡಿ ಬರೆದುದಲ್ಲವೆಂಬುದನ್ನು ಸರಿಯಾಗಿ ಮನಗಾಣಬೇಕು.

4. ಕೂಟ ಮಹಾಜಗತ್ತಿನ ಪುಟ 33ರಲ್ಲಿ "..........ಇತ್ತೀಚಿನ ವರೆಗೂ ಕೂಟ ಬ್ರಾಹ್ಮಣರಲ್ಲಿ ಶಿವಳ್ಳಿ ಬ್ರಾಹ್ಮಣರೊಡನೆ ನೆಂಟಸ್ಥಿಕೆಯು ಬಹಳ ಅಪರೂಪವಾಗಿ ನಡೆದದ್ದು ಕಾಣುತ್ತದೆ. ಆದರೆ ನಲ್ವತ್ತರ ಶಿವಳ್ಳಿ ಮತ್ತು ಎಪ್ಪತ್ತರ ಶಿವಳ್ಳಿಯ ನೆಂಟಸ್ಥಿಕೆ ಹಿತವಲ್ಲವೆಂಬ ಭಾವನೆಯು ತೀರ ಸಾಮಾನ್ಯವಾಗಿತ್ತು" ಎಂಬುದಾಗಿ ಬರೆದಿದೆ. ಈ ಟೀಕೆಯು ಏನೂ ಹುರುಳಿಲ್ಲದುದು. ಕಾರಣ ಶಿವಳ್ಳಿಯವರು ಕೋಟದವರೊಡನೆ ವಿವಾಹ ಸಂಬಂಧ ಮಾಡುವುದು ಯೋಗ್ಯವಲ್ಲವೆಂಬ ಭಾವನೆಯು ಇತ್ತೀಚಿನ ವರೆಗೆ ಶಿವಳ್ಳಿಯವರಲ್ಲಿಯೂ ಇತ್ತು ಎಂಬುದನ್ನು ತಿಳಿಯಬೇಕು. ಸಾಮಾನ್ಯ ಅಭಿಪ್ರಾಯ ಹೀಗಿವೆ "ಆಯಾ ಊರಿನವರು ಆಯಾ ಪಂಗಡದವರು ಆಯಾ ಊರಿಗೆ ಶ್ರೇಷ್ಠರು. ಇತರರು ಶ್ರೇಷ್ಠರಲ್ಲ." ಹಾಗಾದರೆ ಶಿವಳ್ಳಿ ಮತ್ತು ಕೋಟದವರೊಳಗೆ ವಿವಾಹ ಸಂಬಂಧ ಈ ಹಿಂದೆ ನಡೆಯದಿರಲು ಅವರಲ್ಲಿರುವ ಆಚಾರ ವಿಚಾರಗಳೊಳಗಣ ವೈವಿಧ್ಯವೇ ಕಾರಣ ಹೊರತು ಮೇಲು ಕೀಳೆಂಬ ಭಾವನೆಯಲ್ಲ. ಈ ರೂಢಿಯು ಕೋಟ ಶಿವಳ್ಳಿಯವರಿಗೆ ಮಾತ್ರ ಅನ್ವಯಿಸುವುದಿಲ್ಲ. ಬ್ರಾಹ್ಮಣರಲ್ಲಿ ಕಂಡು ಬರುವ ಬೇರೆ ಬೇರೆ ಒಳ ಪ್ರಭೇದಗಳಿಗೂ ಅನ್ವಯಿಸುತ್ತದೆ.

ಎರಡನೇಯದಾಗಿ ನಾವಡ, ನವೋಥ ಎಂಬ ಕುಲ ನಾಮವು ಹೇಗೆ ಬಂದಿರಬಹುದೆಂದು, ಲೇಖಕರು ಆಧಾರವಾಗಿ ತೆಗೆದುಕೊಂಡು 'ಉತ್ತರ ಸಹ್ಯಾದ್ರಿ ಖಂಡದ

(ಅನಂತಶರ್ಮ ಪ್ರಕಟಿತ) ಹನ್ನೆರಡನೇ ಅಧ್ಯಾಯದಿಂದಲೇ ತಿಳಿಯಲವಕಾಶವಿದೆ.

ತೇಭ್ಯಃ ಸ್ವಕಾಂತಾಂತಾಂ ತತ್ರ ನವೋಢಾಂ ನವಯೌವನಾಂ।
ವಿಚಿತ್ರ ಸದನೋಪೇತಾಂ ವಿಚಿತ್ರಾಭರಣೈರ್ಯುತಾಂ।
ಗೋಮಹಿಷ್ಯಾದಿ ಸರ್ವಸ್ವಪೂರಿತಂ ಭವನಂ ತದಾ॥
ಸ್ನಾತ್ವಾ ಶಕ್ತಿಮತೀತೋಯೇ ನೃಸಿಂಹಸ್ಯ ಚ ಸನ್ನಿಧೌ।
ಧಾರಾಪೂರ್ವಂ ದಧೌ ಗ್ರಾಮಂ ಪ್ರಜಾಭಿರಭಿನಂದಿತಂ।
ನಿರ್ಭೀತಾಃ ಸಂಚರಂ ಸ್ತತ್ರದ್ವಿಯ ಶಾಂತಾಃ ಶ್ವತಂದ್ವಿಜಾಃ।

(ಅದ ಕಾರಣ ಇಂಥವುಗಳೆಲ್ಲವೂ ಕರುಣಾಳುಗಳಿಗೆ ಸಲ್ಲತಕ್ಕವುಗಳಲ್ಲವಾದುದರಿಂದ ಆಶ್ಚರ್ಯವೇನೂ ಅಲ್ಲವೆಂಬುದಾಗಿ ಹೇಳುತ್ತಾ, ಆ ಬ್ರಾಹ್ಮಣರುಗಳಿಗೆ ಕರುಣಾಳುವಾದ ಶೂದ್ರನು, ನವಯೌವನ ಭರಿತಳಾದ **ನವೋಢಳಾದ** ವಿಚಿತ್ರಾಭರಣಗಳಿಂದ ರಂಜಿತೆಯಾದ ಸ್ತ್ರೀಯಳನ್ನು ಗೋಮಹಿಷ್ಯಾದಿಗಳಿಂದ ಭರಿತವಾದ ಮನೆಯನ್ನು ಸಹವಾಗಿ; ಶುಕ್ತಿಮತೀ ನದಿಯಲ್ಲಿ ಸ್ನಾನವಾಡಿ, ನರಸಿಂಹ ಸ್ವಾಮಿಯಬಳಿಯಲ್ಲಿ ಧಾರಾಪೂರ್ವಕವಾಗಿ, ಪ್ರಜೆಗಳಿಂದ ಭರಿತವಾದ ಗ್ರಾಮವನ್ನು ಶೂದ್ರಜನು ಬ್ರಾಹ್ಮಣರಿಗೆ ಕೊಟ್ಟನು.) ಈ ಉದಾಹರಣೆಯಿಂದ ಕೋಟ ಬ್ರಾಹ್ಮಣರಲ್ಲಿಯೂ ಜಾತಿಸಂಕೀರ್ಣವಾಗಿದೆ ಎಂದು ತಿಳಿಯಲು ಅವಕಾಶವಿದೆ. (ಉತ್ತರ ಸಹ್ಯಾದ್ರಿ ಖಂಡ, ಹೊಸಬಾಳೆ ಅನಂತಶರ್ಮ ಪ್ರಕಟಿತ, ಪುಟ 38) ಇದು ಡಾ॥ಕುನ್ಹರ ಸ್ಕಂದ ಪುರಾಣಾಂತರ್ಗತ್ ಸಹ್ಯಾದ್ರಿ ಖಂಡವ್ ಎಂಬ ಗ್ರಂಥದಲ್ಲಿಯೂ ಕಂಡು ಬರುತ್ತದೆ. (11ನೇ ಅಧ್ಯಾಯ)

6 ಕೋಟ ಮತಸ್ಥರಿಗೆ 'ಗಣಹೋಮ' ಏಕೆ ಪ್ರಾಶಸ್ತ್ಯವೆಂಬುದನ್ನು ಲೇಖಕರು ಪುಟ 39ರಲ್ಲಿ ತಿಳಿಸಿದ್ದಾರೆ. "ಅಹಿಚ್ಛತ್ರದಿಂದ ನಮ್ಮ ಸಾಲಿಗ್ರಾಮ ಕ್ಷೇತ್ರದ ಸಂದರ್ಶನಕ್ಕೆ ಬರಲು ಭಟ್ಟಾಚಾರ್ಯನನ್ನು ಪ್ರೇರೇಪಿಸಿ ಅನಂತರ ಈ ಕ್ಷೇತ್ರದಲ್ಲಿ ಲೋಕಾದಿತ್ಯ ರಾಜನಿಗೂ, ಭಟ್ಟಾಚಾರ್ಯನಿಗೂ ಮತ್ತು ಇತರ ಅನೇಕರಿಗೂ ಪ್ರತ್ಯಕ್ಷನಾಗಿ, ಶ್ರೀ ಗಣಪತಿಯು 'ಗಣಪತೋಮುಖ'–ಗಣಹೋಮವು ಕ್ಷಿಪ್ರವಾಗಿ ಸಿದ್ಧಿಸುವ ಮತ್ತು ಮೋಕ್ಷವನ್ನು ದೊರಕಿಸುವ ಸನ್ಮಾರ್ಗವನ್ನು ಬೋಧಿಸಿದ್ದರಿಂದ" ಪ್ರಾಮುಖ್ಯವಾಯಿತು. ಆದರೆ ಈ ಗಣ ಹೋಮವನ್ನು ಮಾಡದೆ ಯಾವ ಕಾರ್ಯವನ್ನೂ ತುಳುನಾಡಿನ ಬ್ರಾಹ್ಮಣರು ಮಾಡಲಾರರು ಎಂಬ ವಿಷಯವನ್ನು ವಿಮರ್ಶಕರು ತಿಳಿದಿರಬೇಕು. ಈ ರೀತಿಯ ಮಹಾತ್ಮೆಯನ್ನು ಅವರಷ್ಟಕ್ಕೇ ಬಿಟ್ಟು ಬಿಡುವುದು ಲೇಸು. 'ಕೋಟ ಮಹಾ ಜಗತ್ತು' ಎಂಬ ಪುಸ್ತಕದಲ್ಲಿ ಕಂಡುಬರುವ ಇತರ ಅನೇಕ ಸಂಶಯಾತ್ಮಕ ಪ್ರಶ್ನೆಗಳಿಗೆ ಉತ್ತರಗಳನ್ನು ಕೊಡಲು ನಾನು ಬಯಸುವುದಿಲ್ಲ. ಕಾರಣ ನನ್ನ ಈ ಪುಸ್ತಕದಲ್ಲಿಯ ವಸ್ತು ಪ್ರತಿಪಾದನೆಗೆ ಅವು ಅಪ್ರಸ್ತುತ.

ooo ooo ooo

ಸಹ್ಯಾದ್ರಿ ಖಂಡದಲ್ಲಿ ಪತಿತರಾಗಿ ತಿಳಿಯಲ್ಪಟ್ಟ ಪಂಚಗ್ರಾಮದವರ ಚರಿತ್ರೆ ಈ ಕೆಳಗಿನಂತೆ ಇರಬಹುದೆಂದು ನನಗನಿಸುತ್ತದೆ. ಈ ಪಂಚಗ್ರಾಮದವರು ಮೈಸೂರು ರಾಜ್ಯದ ಪಂಚಗ್ರಾಮಗಳಿಂದ ತುಳುವಕ್ಕೆ ಅಹಿಚ್ಛತ್ರ ಬ್ರಾಹ್ಮಣರ ನಂತರ ಬಂದವರಿರಬೇಕು. ಈ ಪಂಚಗ್ರಾಮಗಳಾವುವೆಂದರೆ– ಹಾಸನ ಜಿಲ್ಲೆಯ 'ಗ್ರಾಮ' ತುಮಕೂರು ಜಿಲ್ಲೆಯ ಕಡಬ; ಮೈಸೂರು ಜಿಲ್ಲೆ ಹಂಗಳ; ಬೆಂಗಳೂರು ಜಿಲ್ಲೆಯ ನೂಲೂರು ಮತ್ತು ಹಾಸನ ಜಿಲ್ಲೆಯ ಬೇಲೂರು (ಗ್ರಾಮ, ಕಡಬ, ಹಂಗಳ, ಮಾಲೂರು ಮತ್ತು ಬೇಲೂರು) ಈ ಗ್ರಾಮಗಳಲ್ಲಿ ತಮಿಳು ನಾಡಿನಿಂದ ಹೆಬ್ಬಾರರೆಂಬ ಹೆಸರಿನ ಬ್ರಾಹ್ಮಣರು ನೆಲೆನಿಂತರೆಂದೂ, ಮೈಸೂರು ಗಜೆಟಿಯರ್‌ನ ಮೊದಲ ಭಾಗದಲ್ಲಿ 'Ethnology and caste'ಎಂಬ ಪರಿಚ್ಛೇದದಲ್ಲಿ ಕಂಡು ಬರುತ್ತಿದೆ. ಹೆಬ್ಬಾರ ಎಂಬುದು ಹೆಬ್+ಹಾರವ ಬ್ರಾಹ್ಮಣರಲ್ಲಿ ಮುಖ್ಯಸ್ಥ; ಹಿರಿಯನ ಎಂಬರ್ಥವನ್ನೀಯುತ್ತದೆ. ಜೈನರಲ್ಲಿಯೂ ಇತರರಲ್ಲಿಯೂ ಹೆಗ್ಗಡೆ ಎಂಬ ಪದವಿದ್ದಂತೆ ಬ್ರಾಹ್ಮಣರಲ್ಲಿ ಹೆಬ್ಬಾರ ಇದೆ. ಹಾಸನ ಜಿಲ್ಲೆಯ ಗ್ರಾಮದಲ್ಲಿ ನೆಲೆನಿಂತ ಬ್ರಾಹ್ಮಣರು ಮೊತ್ತ ಮೊದಲು ಈ ಹೆಸರನ್ನು ಅರಿತು ಅನಂತರ ಅದು ಪಂಚಗ್ರಾಮದ ಬ್ರಾಹ್ಮಣರಿಗೂ ಅನ್ವಯಿಸುವಂತಾಯಿತು. ಈ ಪಂಚಗ್ರಾಮದ ಬ್ರಾಹ್ಮಣರು ಕಾಲಕ್ರಮೇಣ ದಕ್ಷಿಣ ಕನ್ನಡಕ್ಕೆ ವಲಸೆ ಬಂದು ಕುಂದಾಪುರದ ಬಳಿ ತಳವೂರಿರಬೇಕೆಂದೂ ಅವರು ಹೊರಗಣಿಂದ ಬಂದವರಿಂದ ಹಾಗೂ ಊರ ಬ್ರಾಹ್ಮಣರಬುಡಕಟ್ಟಿಗೆ ಸೇರದವರಾದುದರಿಂದ ಪತಿತರಾದರೆಂದೂ, ಇದಕ್ಕನುಗುಣವಾದ ಪುರಾಣ ಕಥೆಯು ನಿರ್ಮಿತವಾಗಿ ಗ್ರಾಮ ನಿರ್ಣಯದಲ್ಲಿ ಸೇರಿಸಲ್ಪಟ್ಟಿತೆಂದೂ ಹೇಳಬಹುದು. ಸಹ್ಯಾದ್ರಿಯಲ್ಲಿ ಹೇಳಿದ ಒಂಭತ್ತು ಹೆಸರುಗಳಲ್ಲಿ ಹೆಬ್ಬಾರವೆಂಬುದೊಂದು.

## — ೩ —

ಗೌಡ ಸಾರಸ್ವತದಲ್ಲಿರುವ ಬೇರೆ ಬೇರೆ ಕುಲಗಳು (ಕೌಟುಂಬಿಕ ಹೆಸರುಗಳು) ಉದ್ಯೋಗ ಪರವಾಗಿ ಈ ಕೆಳಗಿನಂತೆ ಬಂದಿರ ಬಹುದೆಂದು ನನಗನಿಸುತ್ತದೆ :

1) ಕಾಮತ್—ಕೋಮಟಿ, ವ್ಯಾಪಾರ ನಿಪುಣನು (ಆದರೆ ಕೋಮಟಿ ಜಾತಿಯಲ್ಲ)

2) ನಾಯಕ—ರಾಜಸ್ಥಾನದಲ್ಲಿ (Royal court) ಒಬ್ಬ ಅಧಿಕಾರಿ (ರಾಯಭಾರಿ ಯಾ ಸೈನ್ಯದಮುಖಂಡ)

3) ಕಿಣಿ—ಕರಣಿ (ಬರಹಗಾರ)

4) ಪ್ರಭು— ಒಡೆಯ ( ಅದರಲ್ಲೂ ಬ್ರಾಹ್ಮಣರಿಗೆ ಬೇಕಾದ ಸೌಕರ್ಯಗಳನ್ನು ಒದಗಿಸಿ ಕೊಡುವವನು)

5) ಹೆಗ್ಗಡೆ—ಹಿರಿಯ ಮನುಷ್ಯ (ಮುಖ್ಯಸ್ಥ)

6) ಪೈ—ಪೈಯಂಚಿರದ ನಿವಾಸಿ

7) ಪಡಿಯಾರ್—ಪ್ರತಿಹಾರ (ಪಡಿಹಾರ) — A Male Door Keeper (ಪಡಿಯಾರ್ ಎಂಬ ಪ್ರತ್ಯೇಕ ಜನಪ್ರಭೇದವಲ್ಲ)

8) ಭಂಡಾರಿ—ಭಾಂಡಾರವನ್ನು ರಕ್ಷಿಸುವವನು (ಕೋಶಾಧಿಕಾರಿ)

9) ಶೆನ್ವಾ—ಶೆನ್ವಿ (96 ಕುಟುಂಬಗಳು)

10) ಮಲ್ಲ—ಮಲ್ಲಯ್ಯ (ಮಲ್ಲ+ಅಯ್ಯ)

11) ಕುಡುವ—ವ್ಯವಸಾಯಗಾರ

12) ಶ್ಯಾನುಭಾಗ—ಲೆಕ್ಕಪತ್ರ ಇಡುವವನು

13) ಭಕ್ತ—ದೈವಿಕ ಭಕ್ತಿಯುಳ್ಳವನು

14) ಬಾಳಿಗ—ಸಿರಿವಂತ

15) ಅವಧಾನಿ—ಗೌರವಾರ್ಥವಾಗಿ ಕೊಡುವ ಬಿರುದು

16) ಭಟ್ಟ—ವಿದ್ಯಾವಂತನಾಗಿ ತತ್ವಬಲ್ಲಿವನಾಗಿರುವ ಬ್ರಾಹ್ಮಣ; ಯೋಗ್ಯತೆ ಪಡೆದವನಿಗೆ ಕೊಡುವ ಬಿರುದು.

ಈ ಹೆಸರುಗಳು, ಬೇರೆ ಕಡೆಗಳ ಇತರ ಕುಲನಾಮಗಳಂತೆ, ಮೊದಲು ಅನ್ವರ್ಥ ನಾಮಗಳಾಗಿದ್ದು, ಅನಂತರದಲ್ಲಿ ಪರಂಪರಾನುಗತವಾಗಿ ಬಂದಿವೆ. ಸಾರಸ್ವತರಲ್ಲಿಯೂ ಮೇಲಿನ ಹೆಸರುಗಳಲ್ಲಿ ಕೆಲವಿವೆ. (ಕರಣಿ, ಶೆನ್ವಿ, ಶ್ಯಾನುಭಾಗ, ಭಟ್ಟ)

— ಗ —

ಈ ಲೇಖನವನ್ನು ಕೊನೆಗೊಳಿಸುವ ಮೊದಲು ಈ ಕೆಳಗಿನ ಗಮನಾರ್ಹ ವಿಷಯಗಳನ್ನು ಪುನಃ ಸ್ಮರಿಸಿಕೊಳ್ಳಲು ಇಚ್ಛಿಸುತ್ತೇನೆ :

1) ದಕ್ಷಿಣ ಹಿಂದೂದೇಶದ ಪಶ್ಚಿಮ ಕರಾವಳಿಯು ಭಾರತದ ಉಳಿದ ಭೂಪ್ರದೇಶಗಳಿಗಿಂತ ನಂತರ, ಭೌಗೋಳಿಕ ಸ್ಥಿತಿಗಳಲ್ಲಿ ವಿಶೇಷ ಬದಲಾವಣೆಗಳುಂಟಾಗಿ ತೋರಿಬಂದು ಸೇರಿಕೊಂಡಿತು ಆದುದರಿಂದ ಇದನ್ನು ಪರಶುರಾಮ ಸೃಷ್ಟಿ ಎಂದು ಕರೆಯಲಾಯಿತು.

2) ಈ ಹೊಸತಾದ ಭೂಪ್ರದೇಶಕ್ಕೆ ಉತ್ತರ ಭಾರತದಿಂದಲೂ, ದಕ್ಷಿಣ ಪ್ರಸ್ಥ ಭೂಮಿಯಿಂದಲೂ, ಸಮುದ್ರ ಕರಾವಳಿಯಲ್ಲೂ, ಘಟ್ಟದ ಮೇಲಿನ ಕಡೆಯಿಂ

ದಲೂ ಬೇರೆ ಬೇರೆ ವರ್ಗದ ಜನರು ಹಂತ, ಹಂತಗಳಲ್ಲಿ ಬಂದು ನೆಲೆಮಾಡಿ ಕೊಂಡರು.

3) ಇದರ ಪರಿಣಾಮವಾಗಿ ಸಂಕೀರ್ಣವಾದೊಂದು ಸಂಸ್ಕೃತಿಯು ಉದ್ಭವ ವಾಯಿತೆಂದು ಹೇಳಬಹುದು.

4) ಕರಾವಳಿಯ ಹವಾಮಾನವು ದೈಹಿಕ ಚಟುವಟಿಕೆಗಳಿಗೂ, ಮಾನಸಿಕ ತೀಕ್ಷ್ಣತೆಗೂ ಬಹಳ ಅನುಕೂಲವಾಗಿದೆ.

5) ತುಳುವನಾಡು ಗೋಕರ್ಣದಿಂದ ದಕ್ಷಿಣದಲ್ಲಿ ಮಲೆಯಾಳದ ವರೆಗೆ ವಿಸ್ತರಿಸಿದ್ದು, ಅದು ತುರುವರು ಎಂಬ ಗೋವಳರ ಯಾ ಕುರುಬರ ವರ್ಗಕ್ಕೆ ಸೇರಿದ ನಾಡಾಗಿತ್ತು. ಈ ಆದಿಯ ತುರುವರ ನಾಡು (ತುಳುವರ ನಾಡು), ಅನಂತರ ಬಂದು ನೆಲೆಮಾಡಿಕೊಂಡ ಜನರಿಗೆಲ್ಲಾ ಗೌಣಾರ್ಥದಲ್ಲಿ 'ತುಳುವ'ರೆಂಬ ಹೆಸರನ್ನಿತ್ತಿತು ಎಂದು ಹೇಳಬಹುದು

6) ತುಳುನಾಡಿನ ಸಂಸ್ಕೃತಿಯು ಬಿಲ್ಲವ, ಮೊಗೇರ; ತುಳುವ ಕುಡಿಯು; ನಾಡವ, ಆಳುವ ಮತ್ತು ಬ್ರಾಹ್ಮಣರ ಸಂಸ್ಕೃತಿಗಳ ಒಂದು ಸಂಕೀರ್ಣ 'ಸಂಮ್ಮಿಲನ' ಎಂದು ಹೇಳಬಹುದು. ಬ್ರಾಹ್ಮಣರು ತುಳುವಕ್ಕೆ ಮೂರು ಹಂತಗಳಲ್ಲಿ ಬಂದಂತೆ ಕಂಡು ಬರುತ್ತದೆ. (ಕ್ರಿ. ಪೂ. 3ನೆಯ ಶತಮಾನದಿಂದಾರಂಭವಾಗಿ) ಇವರು ಸ್ಥಾನಿಕ, ಹವಿಕ ಮತ್ತು ಅಹಿಚ್ಛತ್ರ ಬ್ರಾಹ್ಮಣರು. ಕ್ರಿ. ಶ. 750ರ ಸುಮಾರಿಗೆ ತುಳುವಕ್ಕೆ ಬಂದರೆಂಬುದಕ್ಕೆ ಯಾವ ಆಧಾರವೂ ಕಂಡು ಬರುವುದಿಲ್ಲ. ಅಂತೆಯೇ ಹವಿಕವು 'ಹಾವು ನಾಡು' ಎಂಬುದಾಗಿ ಹೇಳುವುದರಲ್ಲೂ ಯಾವ ಅರ್ಥವಿಲ್ಲ. ಅದು ಪಶುಕ. ಅದರ ಮೊದಲಿಗರು ಹಳೆ ಪೈಕರು (ಬಿಲ್ಲವರು) ನಮ್ಮ ನಾಡಿಗೆ ಅನುಮಾನಿತ ಸತ್ಯವನ್ನಾಧರಿಸಿಕೊಂಡು 'ಸತಿಯ ಪುತ್ರ; ಶಾಂತಿಕ ಎಂಬ ಹೆಸರುಗಳಿದ್ದಂತೆ ಕಂಡು ಬಂದರೂ (ಇವನ್ನು ಚರಿತ್ರೆಕಾರರೆಲ್ಲರೂ ಒಪ್ಪುವುದಿಲ್ಲ), ನಮ್ಮ ನಾಡಿನ ಎರಡು ಹೆಸರುಗಳು ಸ್ಪಷ್ಟವಿವೆ— ತುಳುನಾಡು (ತುಳುವ) ಮತ್ತು ಅಳ್ವಖೇಡ (ಅಳ್ವರ ನಾಡು); ತುಳುನಾಡೆಂಬುದು 'ಆಳುವ'ರಿಂದಲೂ ಬಂದ ಹೆಸರುಗಳಾಗಿವೆ.

\ ತುಳುವ ಸಂಸ್ಕೃತಿಯಲ್ಲಿ ಭೂತಾರಾಧನೆ, ವಿಚಿತ್ರವಾದ ರೀತಿಯ ನಾಗಾರಾಧನೆ ಮತ್ತು ತತ್ವಗಳಲ್ಲಿ ದ್ವೈತ ಸಿದ್ಧಾಂತ ಇತ್ಯಾದಿ ವೈಶಿಷ್ಟ್ಯಗಳಿದ್ದರೂ ಅದು ಅಖಿಲ ಕರ್ಣಾಟಕದ ಒಂದು ಅಭಿನ್ನ ಅಂಗವೇ ಹೊರತು ಪ್ರತ್ಯೇಕವಾದುದಲ್ಲ. ಬಹಳ ಹಳಗಾಲದಿಂದಲೂ ನಮ್ಮ ಸಂಸ್ಕೃತಿಯು ಕರ್ಣಾಟಕ ಸಂಸ್ಕೃತಿಯ ಅಂಗವೇ ಹೊರತು, ಕೇರಳ ಸಂಸ್ಕೃತಿಯದ್ದಲ್ಲವೆಂಬುದು ಚರಿತ್ರೆ, ಜನಜೀವನ, ಆಚಾರ, ವಿಚಾರಗಳಿಂದ ತಿಳಿದುಬರುತ್ತದೆ. ಕರ್ಣಾಟಕ ಮತ್ತು ತುಳು ಸಂಸ್ಕೃತಿಗಳ

ಕುರಿತು ಶ್ರೀ ಮುಳಿಯ ತಿಮ್ಮಪ್ಪಯ್ಯನವರು ೧೯೩೯ ನೆಯ ಇಸವಿಯ ರಾಷ್ಟ್ರಬಂಧುವಿನ ಯುಗಾದಿಯ ಕಾಣಿಕೆಯಲ್ಲಿ ಪ್ರಕಟವಾದ 'ತುಳುವೂ ಕನ್ನಡವೂ'. ಎಂಬ ಲೇಖವೊಂದರಲ್ಲಿ ಹೀಗೆ ಹೇಳುವರು:

"ನಮ್ಮ ಪ್ರತಿಯೊಂದು ನಾಡುಗಳಲ್ಲಿಯೂ ವೈಯ್ಯಕ್ತಿಕ ಸಂಸ್ಕೃತಿಗಳಿರುತ್ತವೆ. ಅವೆಲ್ಲ ಭರತ ಖಂಡದ ಸಂಸ್ಕೃತಿಗೆ ಅಂಗಗಳಾದರೂ ಅವುಗಳ ಮಟ್ಟಿಗೆ ಅಂಗಿಗಳೂ ಆಗಿವೆ. ಭರತ ಖಂಡದ ಸಂಸ್ಕೃತಿಯು ಸಮುದ್ರವಾದರೆ, ಬೇರೆ ಬೇರೆ ನಾಡುಗಳ ಸಂಸ್ಕೃತಿಗಳನ್ನು ಕಣಿವೆಗಳು, ತೋಡುಗಳು, ಕಾಲುವೆಗಳು, ಹೊಳೆಗಳು, ಮಹಾನದಿಗಳು ಎಂದು ಯೋಗ್ಯತಾನುಸಾರವಾಗಿ ವಿಸ್ತರಿಸಬಹುದು. ಆದರೆ ಕೆಲ ಕೆಲವು ಕಣಿವೆ, ತೋಡು ಕಾಲುವೆಗಳಲ್ಲಿ ಸ್ವಕೀಯವಾದ ಒಸರು ಇಲ್ಲದಿದ್ದರೂ ಕಾಲಾನುಸಾರವಾಗಿ ಬರುವ ಹೋಗುವ ಪ್ರವಾಹಕ್ಕೆ ದಾರಿಯಾಗುವಂತೆ, ಕೆಲ ಕೆಲವು ಒಳನಾಡುಗಳಲ್ಲಿ ನೆಲೆಗೊಂಡ ಸಂಸ್ಕೃತಿಗಳು ಇಲ್ಲವಾದರೂ ಅವುಗಳು ದೇಶೀಯ ಸಂಸ್ಕೃತಿಗೆ ಸಾಧಕಗಳಾಗುತ್ತವೆ. ಕರ್ಣಾಟಕ ಸಂಸ್ಕೃತಿ ಎಂದರೆ ಅಂಥ ದೇಶೀಯ ಸಂಸ್ಕೃತಿಗಳಲ್ಲೊಂದು. ಕ್ರಿ. ಪೂ. ದಲ್ಲೇ ಬಂದು ಶ್ರವಣಬೆಳ್ಗೊಳದಲ್ಲಿ ನೆಲೆಸಿ ಅಲ್ಲಿಂದ ದಕ್ಷಿಣದಲ್ಲೆಲ್ಲಾ ವಿಸ್ತರಿಸಿದ ಜೈನ ಸಂಸ್ಕೃತಿಯೊಂದು; ಅಶೋಕನ ಶಾಸನಗಳಿಂದ ತಿಳಿದುಬರುವಂತೆ ಪಸರಿಸಿದ ಬುದ್ಧ ಸಂಸ್ಕೃತಿ ಇನ್ನೊಂದು; ಇವೆರಡಕ್ಕೂ ಮೊದಲಿನದಾಗಿದ್ದು ಇಲ್ಲಿನ ಮೂಲ ಸಂಸ್ಕೃತಿ ಎನಬಹುದಾದ ನಾಗ ಸಂಸ್ಕೃತಿ ಬೇರೊಂದು; ಕೇರಳದಲ್ಲಿ ಹುಟ್ಟಿ ತೌಳವ, ಹೈಗ, ಕೊಂಕಣಗಳ ಮೂಲಕವಾಗಿ ಹಿಮಾಲಯದ ವರೆಗೆ ಏರಿ ಹಿಂತಿರುಗಿ ಕನ್ಯಾಕುಮಾರಿಯ ವರೆಗೆ ಹರಿದು ನಮ್ಮ ಕರ್ಣಾಟಕದ ಶೃಂಗೇರಿಯಲ್ಲಿ ನೆಲೆಗೊಂಡ, ಶ್ರೀ ಶಂಕರಾಚಾರ್ಯರಿಂದಲೂ, ಅವರ ಅನುಯಾಯಿಗಳಾದ ಸಾಯಣ, ಮಾಧವಾದಿಗಳಿಂದಲೂ, ವ್ಯಾಪಿಸಿದ ಭಾರತೀಯ ಸಂಸ್ಕೃತಿ ಮತ್ತೊಂದು; ಈಗಿನ ಕರ್ಣಾಟಕದ ಉತ್ತರ ಸೀಮೆಯಾದ ಕಲ್ಯಾಣದ ಬಸವೇಶ್ವರನ ಮೂಲಕವಾಗಿ ಉದ್ಭವಿಸಿ ಹರಡಿದ ವೀರ ಶೈವ ಮತ; ತಮಿಳು ನಾಡಿನಿಂದ ಒಂದು ಪರಂಪರೆ ಹಿಡಿದು ದಕ್ಷಿಣ ಚಕ್ರವರ್ತಿಗಳಾಗಿದ್ದ ಹೊಯ್ಸಳ ರಾಜಕುಲದ ಬಿಟ್ಟಿದೇವನನ್ನು ವೀರ ವೈಷ್ಣವನನ್ನಾಗಿ ಮಾರ್ಪಡಿಸಿ ಮೇಲು ಕೋಟೆಯಲ್ಲಿ ನೆಲೆಸಿದ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತಮತ; ನಮ್ಮ ಉಡುಪಿಯಲ್ಲಿ ಅವತರಿಸಿ ಆಸೇತು ಹಿಮಾಲಯವಾಗಿ ವ್ಯಾಪಿಸಿ ಪುನಃ ಉಡುಪಿಯಲ್ಲಿ ಮಠಾದಿಗಳನ್ನು ಸ್ಥಾಪಿಸಿದ ಶ್ರೀಮಧ್ವಾಚಾರ್ಯರಿಂದ ಉಕ್ಕಡಿಸಿದ ದ್ವೈತ ಮತ; ಈ ಎಲ್ಲವುಗಳ ಮೇಳವಾದುದೇ ಕರ್ಣಾಟಕದ ಅಂತಸ್ಸಂಸ್ಕೃತಿ. ಪುರಂದರ, ಕನಕರೇ ಮೊದಲಾದ ದಾಸ ಕವಿಗಳಿಂದಾಗಿ ಆ ಅಂತಸ್ಸಂಸ್ಕೃತಿಗೆ ಸಕ್ಕರೆ ಬೆರೆಸಿದಂತಾಯಿತು. ಸಂಸ್ಕೃತಿಯ ಪೋಷಣೆಯಲ್ಲಿ ಕಲೆ (Arts)ಗಳಿಗೆ ಅಗ್ರಸ್ಥಾನವೆಂಬು

ದನ್ನೂ, ಆ ಕಲೆಗಳಲ್ಲಿ ಸಂಗೀತ ಚಿತ್ರ ಶಿಲ್ಪಗಳೇ ಪ್ರಮುಖಗಳೆಂಬುದನ್ನೂ ಎಲ್ಲರೂ ಒಪ್ಪುತ್ತಾರೆ ದಕ್ಷಿಣ ದೇಶಕ್ಕೆಲ್ಲ ಮಾರ್ಗ ದರ್ಶಕವಾಗಿರುವುದಲ್ಲದೆ ಹಿಂದೂಸ್ಥಾನದ ದೇಶೀ ಸಂಗೀತಗಳೊಳಗೆಲ್ಲ ಕರ್ನಾಟಕ ಸಂಗೀತಕ್ಕೆ ಮಾನ್ಯಸ್ಥಾನವಿದೆ ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ಸಂಗೀತ ವಿದ್ವಾಂಸನು ಯಾವ ವರ್ಣ ಕೃತಿರಾಗ ಪಲ್ಲವಿಗಳನ್ನು ಹಾಡಿದರೂ ಕಿವಿಯಿಂದ ಕೇಳುವ ಕನ್ನಡಿಗರಿಗಂತಿರಲಿ, ತೆಲುಗು, ತಮಿಳು, ಮತ್ತು ಮಳಯಾಳಿಗಳಿಗಾದರೂ ಕೂಡಾ ಪುರಂದರ ದಾಸರ ಕೀರ್ತನೆಯೊಂದನ್ನಾದರೂ ಹಾಡಿಕೇಳಿಸದ್ದಿದ್ದರೆ ಆ ಸಂಗೀತವು ಸರ್ವಾಂಗ ಸುಂದರವಾಗಿ ತೋರಲಿಕ್ಕಿಲ್ಲವೆಂಬುದು ದಾಕ್ಷಿಣಾತ್ಯ ಸಂಗೀತ ರಸಿಕರಿಗೆಲ್ಲ ಗೊತ್ತಿರುವ ಸಂಗತಿ. ಒಬ್ಬ ದಾಕ್ಷಿಣಾತ್ಯ ಸಂಗೀತಗಾರನ ವಿದ್ವತ್ತು ಶಾಸ್ತ್ರೀಯವಾಗಿದೆಯೆನ್ನುವುದಕ್ಕೆ ಬದಲಾಗಿ ತಮಿಳರು 'ನಲ್ಲಕರುನಾಡಗ ವಾಣಿಯಾಯಿರ್ತುಂ' (ಒಳ್ಳೆ ಕರ್ನಾಟಕ ಪದ್ಧತಿಯಾಗಿದೆ) ಎಂಬುದು ರೂಢವಾಗಿದೆ- ಚಿತ್ರ ಶಿಲ್ಪಗಳಲ್ಲಿಯೂ ಕರ್ನಾಟಕ ಸಂಸ್ಕೃತಿ ಹೆಸರು ಗೊಂಡಿದೆ. ಶ್ರವಣ ಬೆಳ್ಗೊಳ, ಕಾರ್ಕಳ, ವೇಣೂರು, ಬೇಲೂರು ಮೊದಲಾದೆಡೆ ಗಳಲ್ಲಿಯ ಪ್ರತಿಮೆಗಳನ್ನೂ, ಕಟ್ಟೋಣ ರಚನಾಕ್ರಮವನ್ನೂ ನೋಡಿದರೆ ಆ ವಿಷಯ ಗಳ ಜಾಣ್ಮೆ ಸ್ಪುಟವಾಗುತ್ತದೆ............ಕರ್ನಾಟಕ ಸಂಸ್ಕೃತಿಯನ್ನು ವಿಸ್ತರಿಸಿದ ಎಷ್ಟೆಷ್ಟೋ ವಾಙ್ಮಯಗಳನ್ನು ನೋಡಬಹುದು. ಆ ಸಂಸ್ಕೃತಿಯ ಪ್ರಚಾರಕ್ಕೆ ಈ ನಮ್ಮ ದಕ್ಷಿಣ ಕನ್ನಡಾಂತರ್ಗತ ಭಾಗವಾದ ತುಳುನಾಡಿನ ತುಳುವರಾದ ಕನ್ನಡ ವಿದ್ವತ್ಕವಿಗಳೂ ಹೇಗೆ ಭಾಗಿಗಳಾಗಿದ್ದಾರೆಂಬುದನ್ನು ಮೇಲಿನ ದೃಷ್ಟಾಂತಗಳಿಂದ ತಿಳಿಯಬಹುದು. ಅಷ್ಟೇ ಅಲ್ಲ ಆ ವರೆಗೂ, ಆ ಮೇಲೆಯೂ ಇಡೀ ಕರ್ನಾಟಕದಲ್ಲಿ 'ನಭೂತೋ ನಭವಿಷ್ಯತಿ' ಎನಿಸಿದ ಕರ್ನಾಟಕ ಶಬ್ದಾನು ಶಾಸನವೆಂಬ ಕರ್ನಾಟಕ ವ್ಯಾಕರಣವನ್ನು ಬರೆದ ಭಾಗ್ಯವು ಹಾಡುವಳ್ಳಿಯ ಭಟ್ಟಾಕಳಂಕನನ್ನು ಹಡೆದ ನಮ್ಮ ದಕ್ಷಿಣ ಕನ್ನಡಕ್ಕೆ. ಹಳೆಗನ್ನಡ ಕಾವ್ಯದೇವಿಗೆ ಕಡೆಯ ಕಾಣಿಕೆಯಾಗಿ ರಾಮಾಶ್ವಮೇಧವನ್ನೊಪ್ಪಿಸಿದ ಮನ್ನಣೆ ನಂದಳಿಕೆ ಲಕ್ಷ್ಮೀನಾರ್ಣಪ್ಪಯ್ಯನವರನ್ನು ಹೆತ್ತ ಇದೇ ದಕ್ಷಿಣ ಕನ್ನಡಕ್ಕೆ.

"ಇಂತಹ ವಿಶಿಷ್ಟವಾದ ದೇಶೀಯ ಸಂಸ್ಕೃತಿ ತುಳುವಿನಲ್ಲಿನೆಲೆಗೊಂಡಿದೆಯೇ? ನೆಲೆಗೊಂಡಿದ್ದರೆ ತುಳುವರೇ ಆದ ರತ್ನಾಕರವರ್ಣಿ ಮೊದಲಾದವರು ಅಖಂಡಕರ್ನಾಟಕ ಸಂಸ್ಕೃತಿಯನ್ನು ಮಾತ್ರವೇ ಮುಂದು ಮಾಡಿ ಗ್ರಂಥಗಳನ್ನು ಬರೆಯುತ್ತಿದ್ದರೆ? ಅಷ್ಟೇ ಅಲ್ಲ; ಭರತೇಶ ವೈಭವದಲ್ಲಿ ರತ್ನಾಕರವರ್ಣಿ 'ಅಯ್ಯಯ್ಯ ಎಂಚಿ ಪೊರ್ಲಾಂಡೆಂದು ತುಳುವರು ಮೆಯ್ಯುಬ್ಬಿ ಕೇಳಬೇಕೆಂದು' ಎಂದು ತುಳುವರಿಗೂ ಉಪದೇಶಿಸಲಿಕ್ಕೇನು ಕಾರಣ? ಹೇಗೆ ತುಳುಪ್ರಾಂತ್ಯವು ಕರ್ನಾಟಕ ಪ್ರಾಂತ್ಯದ ಒಂದು ಅಂಗವೋ ಅವಶ್ಯವಾಗಿ ತುಳುವ ಸಂಸ್ಕೃತಿ ಎಂಬುದು ಅಖಂಡ ಕರ್ನಾಟಕ

ಸಂಸ್ಕೃತಿಯೊಳಗೆ ಒಂದು ಅಂಗವೆಂಬುದೇ ಅದಕ್ಕೆ ಕಾರಣವು. ಅಷ್ಟು ಮಾತ್ರವಲ್ಲ; ‘ಈ ಕಾವ್ಯವನ್ನು ತುಳುವರು ಮೆಚ್ಚಿಕೇಳಬೇಕು’ ಎಂಬುವರಿಂದ ಕವಿರಾಜ ಮಾರ್ಗಕಾರನು ಹೇಳಿದ ‘ಅನಾಡವರ್ಗಳ್, ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್’ ಎಂಬ ಲಕ್ಷಣವು ತುಳು ನಾಡವರೆಂದರೆ ಕನ್ನಡ ನಾಡವರೊಡನೆ ಅಭಿನ್ನರಾದವರೆಂಬುದನ್ನು ಸೂಚಿಸುತ್ತದೆ.

“ಹೀಗೆ ಕರ್ಣಾಟಕ ಸಂಸ್ಕೃತಿಯಲ್ಲಿ ತುಳುವ ಸಂಸ್ಕೃತಿ ಬೆರೆಯಲಿಕ್ಕೆ ಇನ್ನೂ ಒಂದು ಪ್ರಬಲವಾದ ಕಾರಣವಿದೆ. ಬನವಸೆಯ ಕದಂಬರು, ಪೊಂಬುಚ್ಚದ ಪಾಂಡ್ಯರು ಮೊದಲಾದವರ ಕಾಲ ಮೊದಲ್ಗೊಂಡು ಆಯಾ ಅರಸರ ಆಸರೆಯಿಂದ ಇಲ್ಲಿಗೆ ಬಂದು ನೆಲಸಿದ ಮತ್ತು ಮೊದಲಿಂದಲೂ ಇಲ್ಲಿಯೇ ಇದ್ದ ಸಂಸ್ಕೃತಿ ಪೋಷಕವಾದ ಜನ ಸಮುದಾಯವಾವುದೆಂಬುದನ್ನು ಪರಾಂಬರಿಸಿದರೆ ಆ ಕಾರಣವು ಸ್ಫುಟವಾದೀತು.

“ತೌಳವ ಸಂಸ್ಕೃತಿ ಅಪೂರ್ಣವಾದರೂ ಅದರ ಸ್ವರೂಪವೆಂತಹುದೆಂಬುವನ್ನು ತಿಳಿಯಲಾರದಂತೆ ಅದು ನಾಶವಾಗಿಲ್ಲ. ಆದರ ಅಂತಸ್ಸಂಸ್ಕೃತಿ ಭೂತ, ನಾಗ, ಶಾಸ್ತಾವುಗಳ ಪೂಜೆಯಲ್ಲಿ ಮಾತ್ರವಿದೆ. ಆ ಭೂತಾದಿ ಭಕ್ತಿಯನ್ನು ದೇವ ಭಕ್ತಿಯ ಅಂಗವನ್ನಾಗಿ ಗಣಿಸುವ ಭಾವನೆಯನ್ನು ಅವರಲ್ಲಿ ನೆಲೆಗೊಳಿಸಿದುದು ಕದಂಬಾದಿ ಕನ್ನಡ ರಾಜರೆ. ಅದರಿಂದಲೆ ಆ ಭೂತಾದಿಗಳಿಗೆ ದೇವಸ್ಥಾನಗಳಲ್ಲಿ ಅಂತೆಯೊದಗಿತು ............ಬಹಿಸ್ಸಂಸ್ಕೃತಿಯೊಳಗಿನ ಆಚಾರವನ್ನು ನೋಡುವ. ಭೂತಾಳ ಪಾಂಡ್ಯನ ಅನಂತರದಲ್ಲಿ ಇಲ್ಲಿ ಹಲವರು ಅಳಿಯ ಸಂತಾನದ ಕಟ್ಟನ್ನಾಚರಿಸ ತೊಡಗಿದರು. ಅದು ತುಳು ಸಂಸ್ಕೃತಿಯ ಮೂಲ ತತ್ವಗಳಲ್ಲೊಂದೋ ಎಂಬುದು ಸಂದೇಹ ಗ್ರಸ್ತವಾಗಿದೆ. ಹೇಗಿದ್ದರೂ ಆ ಕಟ್ಟನೊಳಗಿನ ಹಲವರಿಗೇ ಅದರಲ್ಲಿ ಅಸಡ್ಡೆಯುಂಟಾದುದರಿಂದ ಅದಂತಿರಲಿ. ಇನ್ನು ಹಲವರ ವಿವಾಹಾದಿ ಕರ್ಮಗಳಲ್ಲಿ ಒಂದಿಷ್ಟು ತೌಳವ ಪದ್ಧತಿ ನೆಲಸಿರುವುದೂ, ತಂತಮ್ಮ ಭಾಷೆಗಳನ್ನು ಉಚ್ಚರಿಸುವಾಗಲೂ ತುಳುವಿನ ಸ್ವರವಿಕಾರವು ಸೇರಿರುವುದೂ ತುಳು ಸಂಸ್ಕೃತಿ ಅವಶೇಷಗಳು.

ಕಲೆಗಳಲ್ಲಿ ತುಳುವರ ವೈಶಿಷ್ಟ್ಯವೇನೂ ಉಂಟಾಗಲಿಲ್ಲ. ತುಳು ಸಂಗೀತ, ತುಳುಚಿತ್ರ, ಶಿಲ್ಪಾದಿಗಳು ಇಲ್ಲವೇ ಇಲ್ಲ. ಇಲ್ಲಿಯ ಶಾಸನಗಳೆಲ್ಲವೂ ಕನ್ನಡ, ಸಂಸ್ಕೃತಗಳಲ್ಲಿಯೇ ನೆಲಸಿದೆ. ವಿಶಿಷ್ಟತೆಯನ್ನು ಸೂಚಿಸುವ ಹೊಸತಾದ ಸ್ವಕೀಯ ಶೋಧಗಳನ್ನು ಕಂಡು ಹಿಡಿದು ಪಸರಿಸಿದರೆ ಮಾತ್ರವೆ ಅದಕ್ಕೆ ತುಳು ಸಂಸ್ಕೃತಿಯೆಂಬ ಹೆಸರೊದಗಬಹುದು........ನಮ್ಮ ತುಳುವರಾದ ರತ್ನಾಕರವರ್ಣಿ, ಸಾಳ್ವ, ಮುದ್ದಣ (ನಂದಳಿಕೆ ನಾರ್ಣಪ್ಪಯ್ಯನವರು) ರ ಗ್ರಂಥಗಳಿಗೆ ಕನ್ನಡವಾಙ್ಮಯದಲ್ಲಿ ಎಡೆ ಸಿಕ್ಕಿರುವುದು ಮಾತ್ರವಲ್ಲ; ‘ಕನ್ನಡದ ತಿರುಳ್’ಗಳೆಂದು ಅವುಗಳನ್ನು ಎಲ್ಲ ಕನ್ನಡಿ

ಗರೂ ತಲೆ ಬಾಗಿ ಪೂಜಿಸುತ್ತಾರೆ. ತೌಳವವೆಂಬುದು ಅಖಂಡ ಕರ್ಣಾಟಕ ಸಂಸ್ಕೃತಿಯ ಅಂಗವಾಗಿರುವುದೇ ಅದಕ್ಕೆ ಕಾರಣ.

"ತುಳು, ಕೊಂಕಣಿ ಮಾತಾಡುವವರಿಗೆ ಕನ್ನಡ ನುಡಿಯಲ್ಲಿ ದೇಶೀಯವಾದ ಹಕ್ಕಿರುವುದು ಮಾತ್ರವೇ ಅಲ್ಲ; ಆಯಾ ಭಾಷೆಗೂ ಭಾಷಾ ರಚನೆಗೂ ಕನ್ನಡ ವಾಙ್ಮಯದಲ್ಲಿ ಪ್ರವೇಶವಾಗಿದೆ. ಆದರಿಂದ ಕನ್ನಡ ಸಂಸ್ಕೃತಿಗೆ ತುಳು, ಕೊಂ ಸಂಸ್ಕೃತಿಗಳು ಅಂಗವಾಗುತ್ತವೆ."

## ಅನುಬಂಧ

# ತೌಳವ ಸಂಸ್ಕೃತಿ

ಮಾನವನು ಕಾರ್ಯ ನಿರತನಾದಾಗ ಆತನ ಮನಸ್ಸು ವಿಕಾಸಗೊಳ್ಳುತ್ತದೆ. ಈ ವಿಕಾಸವು ಪದೇ ಪದೇ ತೋರಿಬರುತ್ತದೆ. ಹೀಗೆ ತೋರಿ ಬರುವ ಮನೋ ವಿಕಾಸವನ್ನೇ ಸಂಸ್ಕೃತಿ ಎನ್ನಬಹುದು. ಈ ಸಂಸ್ಕೃತಿ ವಿಮರ್ಶೆಯ ದೃಷ್ಟಿಯಿಂದ ನಮಗೆ ನಮ್ಮ ನಾಡಿನ ಎಲ್ಲಾ ಕುಲಗಳೂ ಜಾತಿಗಳೂ ಎಲ್ಲಾ ವರ್ಗಗಳೂ ಒಂದೇ ಸಮವಾಗಿ ಮಾನ್ಯವಾದುವು; "ಹಾರುವರೆಂದು ಹೆಚ್ಚಿಲ್ಲ, ಹೊಲೆಯರೆಂದು ಕಡೆಯಿಲ್ಲ"

ಸಂಸ್ಕೃತಿಯು ಕಲಿತ ವಿದ್ಯೆಯ ಪ್ರಭಾವವೆನ್ನುವುದಕ್ಕಿಂತಲೂ ಅರಗಿದ ವಿದ್ಯೆಯ ಪರಿಣಾಮವೆನ್ನುವುದು ಉತ್ತಮ. ಇದು ನಡೆನುಡಿಗಳಲ್ಲಿ ಸಂದುಬಿಡದಂತೆ ಎರಡನ್ನೂ ಒಂದಾಗಿ ಬೆಸೆಯುವ ಮನಃ ಪರಿಣಾಮವು. ಇದರಲ್ಲಿ ವಿಚಾರವೂ ಆಚಾರವೂ ಒಂದನ್ನೊಂದು ಅಗಲದಂತೆ ಬೆರಕೆಯಾಗಿವೆ. "ವಿಚಾರವು ಬೀಜ, ಆಚಾರವು ಅದರ ವಿಕಾರವಾದ ವೃಕ್ಷ"

ನಮ್ಮ ತುಳುನಾಡಿನ ಸಂಸ್ಕೃತಿ ಎಂಬುದು ಈ ಮೊದಲೇ ಸ್ಪಷ್ಟೀಕರಿಸಿದಂತೆ ಸಂಕೀರ್ಣವಾದ ಕರ್ಣಾಟಕ ಸಂಸ್ಕೃತಿಯ ಒಂದು ಅಂಗ. ಈ ಸಂಸ್ಕೃತಿಯು ಪುರಾತನ ನಾಗ ಸಂಸ್ಕೃತಿಯನ್ನೂ ಇತಿಹಾಸದ ಇರುಳಿನ ಮೊಗೇರ, ಬಿಲ್ಲವ (ಹಳೆ ಪೈಕ) ಮತ್ತು ದನಗಾರರಾದ ತುರುವರ ಜನಜೀವನವನ್ನೂ, ಐತಿಹಾಸಿಕ ನಾಡವರ (ಆಳುವರ) ಯಾ ರಾಷ್ಟ್ರಕೂಟರ (ರಟ್ಟರ) ವ್ಯವಹಾರವನ್ನೂ, ಇವೆಲ್ಲವುಗಳಿಗೆ ಶಿಖರದಂತೆ ಆರ್ಯ ಸಂಸ್ಕೃತಿಯ ಅಂಗಗಳಾದ ಬ್ರಾಹ್ಮಣ ಮತ್ತು ಜೈನ ಧರ್ಮಗಳನ್ನೂ ಸೇರಿಕೊಂಡಿದೆ ಎಂದು ದೃಢವಾಗಿ ಹೇಳಬಹುದು. ಈ ರೀತಿಯ ಸಂಕೀರ್ಣ ಜೀವನಕ್ಕೆ ಈ ನಾಡಿಗೆ ಇತರ ಕಡೆಗಳಿಂದ ಐತಂದ ವರ್ಗಗಳ ಸಂಪ್ರದಾಯಗಳೂ ಸೇರಿ ಪ್ರವಾಹವು ತೀವ್ರ ಗತಿ ಹೊಂದಿತೆಂದು ಹೇಳಬಹುದು.

ನಮ್ಮ ಸಂಸ್ಕೃತಿಯು ದಕ್ಷಿಣದಲ್ಲಿ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಕಾಸರಗೋಡು ತಾಲೂಕಿನ ಪರಿಯಂತ ಪಸರಿಸಿದೆ ಎಂದು ಖಂಡಿತವಾಗಿ ಹೇಳಬಹುದು. ಹೊಸದುರ್ಗ, ನೀಲೇಶ್ವರಗಳಿಗಿಂತಲೂ ದಕ್ಷಿಣದಲ್ಲಿ ತಿರುಕರು ನಾಡು (ಶ್ರೀಕರ್ಣಾಟ) ಎಂಬಲ್ಲಿ ವರೆಗೆ ಹಬ್ಬಿತ್ತು ಎಂದೂ ಹೇಳಬಹುದು. ಇದಕ್ಕೆ 'ತಿರುಕರು ನಾಡು' ಎಂಬ ಹೆಸರೇ ಸಾಕ್ಷಿ. ಮಾತ್ರವಲ್ಲದೆ ಕನ್ನಡಿಗರ, ತುಳುವ ಬ್ರಾಹ್ಮಣರ ಹಾಗೂ ಕೆಲ ಶೂದ್ರ ವರ್ಗದವರ ಅವಶೇಷಗಳನ್ನೂ ಅಲ್ಲಿ ಇರುವುದು ಇದಕ್ಕೆ ಸಾಕ್ಷಿ

ಯಾಗಿದೆ. ಮುಳಿಯ ತಿಮ್ಮಪ್ಪಯ್ಯನವರು ಹೇಳಿದಂತೆ ಕಾಸರಗೋಡು ತಾಲೂಕಿನ ಚಂದ್ರಗಿರಿ ಹೊಳೆಯಿಂದ ಬಡಗಣ ಭಾಗದಲ್ಲಿ (ಕುಂಬಳ ಸೀಮೆ) ಹಿಂದಿನಿಂದ ಇಂದಿನ ವರೆಗೆ ಒಂದೇ ಒಂದು ಮಳೆಯಾಳ ಸಾಹಿತ್ಯ ಗ್ರಂಥವಾಗಲೀ, ಮಲಯಾಳ ಶಾಸನವಾಗಲಿ ತಲೆದೋರಿದಂತೆ ಕಂಡು ಬರುವುದಿಲ್ಲ. ಬದಲಾಗಿ ಕನ್ನಡ ಯಕ್ಷ ಗಾನ ಪ್ರಬಂಧಗಳೇ ಮೊದಲಾದ ಉತ್ತಮ ಸಾಹಿತ್ಯ ಗ್ರಂಥಗಳೂ ಹಲವಾರು ಕನ್ನಡ ಶಾಸನಗಳೂ ಉದಯಿಸಿದುದು ಕಂಡುಬರುತ್ತದೆ.

ಕನ್ನಡ ಸಂಸ್ಕೃತಿಯ ನಿರ್ಮಾಪಕರಲ್ಲಿ ಹಟ್ಟಿಕಾರರೂ(ದನಗಾರರೂ,ಗೊಲ್ಲರೂ, ಕುರುಬರೂ, ತುರುವರೂ) ಕನ್ನರೂ ಪ್ರಮುಖರು. ದಕ್ಷಿಣಾತ್ಯ ಪ್ರದೇಶಗಳಲ್ಲಿ ಎಲ್ಲೆಲ್ಲೂ ವ್ಯಾಪಿಸಿದ್ದ ಈ ಕನ್ನ ಜನರಿಂದೇ 'ಕಂನಾಡು' ಆ ಹೆಸರನ್ನು ಪಡೆಯಿತೆಂದು ಹೇಳುವುದರಲ್ಲಿ ಹೆಚ್ಚಿನ ಔಚಿತ್ಯವಿದೆ. ಆದಿ ಜನಾಂಗದಲ್ಲಿ 'ಕನ್' ಅಥವಾ 'ಕಳ್' ಎಂಬವರಿದ್ದಿರಬೇಕು. ಆ 'ಕನ್' ಮತ್ತು ಋಗ್ವೇದದಲ್ಲಿ ಬರುವ 'ನಾಟ'ರು ಬೆರೆದು ಕನ್ನಡಿಗರಾಗಿರ ಬಹುದು ಎಂದು ಮೊದಲಾಗಿ ಮುಳಿಯ ತಿಮ್ಮಪ್ಪಯ್ಯನವರು ಊಹಿಸಿದ ಕುರಿತಾಗಿ ಹೆಚ್ಚಿನ ವಿಮರ್ಶೆ ಮಾಡುವುದಗತ್ಯವಾಗಿದೆ. ಈ ಕನ್ನ ಮೂಲ ಜನಾಂಗವು 'ಅಧಿಕಾರ' ಹೊಂದಿದ ನಂತರ 'ನಾಡವ' 'ರಾಷ್ಟ್ರಿಕ' (ರಾಷ್ಟ್ರಕೂಟ) ಜನವಾಯಿತೆಂದು ನಿರ್ಧರಿಸ ಬಹುದಾಗಿಯೂ ವಿಮರ್ಶಿಸಿದೆ.

ಈ 'ರಾಷ್ಟ್ರಿಕ'ಯಾ'ರಾಷ್ಟ್ರಕೂಟ'ಪದದ ಉತ್ಪತ್ತಿಯು ಎರಡು ರೀತಿಯಲ್ಲಾ ಗಿರಬೇಕೆಂದು ಪರಸ್ಪರ ವಿರುದ್ಧ ಅಭಿಪ್ರಾಯಗಳು ವ್ಯಕ್ತ ಮಾಡಲ್ಪಟ್ಟಿವೆ. 'ರಹಟ' ದಿಂದ 'ರಟ್ಟ'ವಾಗಿ, 'ರಟ್ಟ' ಪದದಿಂದಲೇ 'ರಾಷ್ಟ್ರ'ವೆಂದು ಆ ಪದ ಸಂಸ್ಕೃತೀಕೃತ ವಾಗಿ 'ಕೂಟ'ದೊಡನೆ ಸಮಾನ ಹೊಂದಿ 'ರಾಷ್ಟ್ರಕೂಟ'ವಾಯಿತೆಂಬುದು ಮುಳಿಯ ತಿಮ್ಮಪ್ಪಯ್ಯನವರ ಅಭಿಪ್ರಾಯ. ಅವರು 'ರಟ್ಟವು' 'ರಾಷ್ಟ್ರ'ದ ತದ್ಭವ ವಲ್ಲವೆಂದೂ ಸ್ಪಷ್ಟಪಡಿಸಿದ್ದಾರೆ. ಇದು ವಿಚಾರಣೀಯವಾಗಿದೆ. ಇದೇ ವಿಷಯವಾಗಿ ಶ್ರೀಮಾನ್ ಆಳ್ತೆಕರ ಅವರು 'ರಠಿಕ' ರಿಷ್ಟಿಕ, ರಷಕ, ರಟ್ರಿಕ ಮುಂತಾದ ಅಶೋಕ ಶಿಲಾಶಾಸನಗಳಲ್ಲಿ ದೊರೆಯುವ ರೂಪಗಳು ಸಂಸ್ಕೃತ 'ರಾಷ್ಟ್ರಿಕ' ಶಬ್ದದಿಂದಲೇ ಉದ್ಭವಿಸಿವೆಯೆಂದೂ 'ರಠಿಕ'ದಿಂದಲೇ 'ರಟ್ಟ'ವು ಬಂದಿರುತ್ತದೆಂದೂ ಅಭಿಪ್ರಾಯ ಪಟ್ಟಿದ್ದೂ ವಿಚಾರಕ್ಕೆಡೆಗೊಡುವಂಥದ್ದಾಗಿದೆ. ಏನೇ ಇರಲಿ. ಕರ್ಣಾಟಕದ ಪ್ರಾಮುಖ್ಯ ಈ ಎರಡು ಸಾಮಾಜಿಕ ಪವರುಗಳೇ ನಮ್ಮ ತುಳುವದ ಪವರುಗಳೂ ಆಗಿವೆ. ಭೌಗೋಳಿಕ ವೈಶಿಷ್ಟ್ಯಗಳಿಂದ ನಮ್ಮನಾಡಿನ ಜನಜೀವನವು ಸ್ವಲ್ಪ ಮಟ್ಟಿಗೆ ತನ್ನದೇ ಆದ ಹಾದಿಯೊಂದನ್ನು ನಿರ್ಮಿಸುವಂತಾಯಿತೇ ವಿನಾ, ಸಮಷ್ಟಿ ಬೇರೆಯೇ ಎನ್ನುವಂತಿಲ್ಲ.

ತೌಳವ ಸಂಸ್ಕೃತಿಯ ವೈಶಿಷ್ಟ್ಯಕ್ಕೆ ದೃಷ್ಟಾಂತವಾಗಿ - 1) ಭೂತಾಳ ಪಾಂಡ್ಯನ ಅಳಿಯ ಸಂತಾನ ಕಟ್ಟು (2) ನಾಗಾರಾಧನೆ (3) ಭೂತಾರಾಧನೆ-ಇವು ಗಳನ್ನು ತೋರಿಸಿಕೊಡುವುದಿದೆ. ಆದರೆ ಇವುಗಳೂ ನಮ್ಮ ತುಳುವರಿಕ್ಕೆ ವಿಶೇಷವಾಗಿ ರಿಸಿದುವುಗಳೆಂದು ದೃಢವಾಗಿ ಹೇಳುವಂತಿಲ್ಲ. ಪುರಾಣ ಕಾಲದಿಂದಲೂ, ಅದಕ್ಕೂ ಪ್ರಾಚೀನವಾದ, 'ಹೆಣ್ಣು ಮೂಲ'ವಾಗಿಯೇ ಇದ್ದ ಜನಗಳು ಅನೇಕವಿದ್ದುವು. ಮೈಸೂರಿನಲ್ಲಿ ಕೆಳವರ್ಗದ ಜನಗಳಲ್ಲಿ 'ಮಾತೃ ಪ್ರಾಧಾನ್ಯ' ಕ್ರಮವು ಇತ್ತೆಂದು ಕಂಡು ಬರುತ್ತದೆ. (ಕುರುಬರು, ಬೇಡರು, ಮಾದಿಗರು, ಹೊಲೆಯರು ಇತ್ಯಾದಿ) ಈ ಹೆಣ್ಣು ಮೂಲದ ಒಂದು ಅವಶಿಷ್ಟವಾಗಿಯೇ ಸೋದರಮಾವನ ಸ್ಥಾನಮಾನ ಗಳು ಸಮಾರಂಭ ಸಂಪ್ರದಾಯಗಳಲ್ಲಿ ಸ್ಫುಟವಾಗಿ ನಿಂತಿವೆ. ಇದು ಅಖಿಲ ಕರ್ಣಾ ಟಕದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.

'ಮೈಸೂರಿನ ಹಲವು ಜಾತಿಗಳಲ್ಲಿ 'ಕ್ಷೇತ್ರಪ್ರಧಾನ' ವ್ಯವಸ್ಥೆಯು(Matri-achate) ಎಂದರೆ 'ಹೆಣ್ಣು ಮೂಲ'ವು ಅಸ್ತಿತ್ವದಲ್ಲಿದ್ದುದು ಕಂಡು ಬರುತ್ತದೆ. ಈ ವ್ಯವಸ್ಥೆಯ ಪ್ರಕಾರ ಆಸ್ತಿ ಪಾಸ್ತಿಗಳು ಹೆಣ್ಣಿನ ಮೂಲಕ ಅನುಭವಿಸಿಕೊಂಡು ಬರುವುದು ಪ್ರಾಮುಖ್ಯವಾಗಿದೆ. ಮಾತ್ರವಲ್ಲದೆ ಸಂತಾನ (ವಂಶ) ಪಾರಂಪರ್ಯವು ಹೆಣ್ಣಿನ ಮೂಲಕ ಬರುವುದಾಗಿದೆ. ರಾಜ್ಯದಲ್ಲಿರುವ ಅನೇಕ ಜಾತಿಗಳಲ್ಲಿಯೂ, ವಂಶಗಳಲ್ಲಿಯೂ ಒಬ್ಬನ ಕುಟುಂಬವು ಮನೆಯಲ್ಲಿ ವಾಸವಾಗಿರುವ ಮಗಳ ಮೂಲಕ ಮುಂದುವರಿಯುವಂತೆ ಪ್ರಯತ್ನ ನಡೆಯುತ್ತದೆ ಈ ಕ್ರಮವು ಕುರುಬರು,ಬೇಡರು, ವಡ್ಡರು,ದಂಬರರು,ಮಾದಿಗರು,ಹೊಲೆಯರು— ಇವರಲ್ಲಿ ಕಂಡುಬರುತ್ತದೆ. ರಾಜ್ಯದ ಅನೇಕ ಜಾತಿಗಳಲ್ಲಿಯೂ ವಂಶಗಳಲ್ಲಿಯೂ ಹೆಂಗಸಿನ ಸಹೋದರನಿಗೆ ಕೊಟ್ಟ ಪ್ರಾಮುಖ್ಯ ಸ್ಥಾನವನ್ನು ಪರಿಶೀಲಿಸಿದಾಗ, ಕುಟುಂಬವು ಗಂಡನ ಮೇಲೆ ಹೊಂದಿ ಕೊಂಡಿರದೆ ತಾಯಿ ಮತ್ತು ಆವಳ ಸಹೋದರನ ಮೇಲೆ ಹೊಂದಿಕೊಂಡಿದ್ದ ವ್ಯವ ಸ್ಥೆಯನ್ನೆನಪಾಗದಿರಲಾರದು. ಮೈಸೂರು ರಾಜ್ಯದ ಅದ್ಯಂತ ಬಳಕೆಯಲ್ಲಿರುವ ಜಾತಿಗ ಳಿಗೆ ಸಂಬಂಧಿಸಿದ ಪದ್ಧತಿ ಎಂದರೆ ಒಬ್ಬ ವ್ಯಕ್ತಿಯು ವಿವಾಹವಾಗುವ ಸಮಯದಲ್ಲಿ ಆತನ ಸಹೋದರಿಯ ಮಗಳನ್ನು ವಧುವಾಗಿ ಕೇಳುವುದು ಅಥವಾ ಆತನ ಮಗನಿಗೆ ವಧುವಾಗಿ ಅಪೇಕ್ಷಿಸುವುದು." (Mysore Gazetteer Vol. 1—Edited by C. Hayavadana Rao)

ಭೂತಾಳ ಪಾಂಡ್ಯನ ಅಳಿಯ ಸಂತಾನ ಕಟ್ಟಿನ ಸಂಶೋಧನೆಯನ್ನು ಮಾಡುವ ಉದ್ದೇಶವನ್ನು ನಾನು ಇಲ್ಲಿ ಇಟ್ಟುಕೊಂಡಿಲ್ಲ. ಆದರೆ ಒಂದು ವಿಷಯವು ಇಲ್ಲಿ ಅಪ್ರಸ್ತುತವಾಗಲಾರದು. ಡಾ. ಸಲೆತ್ತೂರರು ಹೇಳುವಂತೆ ಕ್ರಿ.ಶ. 1441ರಿಂದ 1444ರ ವರೆಗೆ ತುಳುವವಲ್ಲಾಳಿದ ಕುಲಶೇಖರನು 1444 ಕ್ರಿ.ಶ.ದಲ್ಲಿ ತನ್ನಧಿಕಾರ ವನ್ನು ತನ್ನ ಸೋದರಿಯಳಿಗೆ ಬಿಟ್ಟುಕೊಟ್ಟು ತನ್ನ ವಂಶದಲ್ಲಿ (ಆಲೂಪ ವಂಶ) ಅಳಿಯ ಸಂತಾನ ಕಟ್ಟನ್ನು ಆಚರಣೆಗೆ ತಂದನು ಮತ್ತು ಕ್ರಿ.ಶ. 1506ರಲ್ಲಿ

ಕೆಳದಿಯ ರಾಜನಾಗಿದ್ದ ಚೌಡಪ್ಪ ನಾಯಕನು 'ಅಳಿಯ ಸಂತಾನ ಕಟ್ಟು'ಗೆ ಶೀಘ್ರ ಶಾಸನದ ಮುಖಾಂತರ ಕಾನೂನಿನ ಮುದ್ರೆಯೊತ್ತಿದನು. "ಹೀಗೆ ಸುಮಾರು ಹದಿಮೂರನೆಯ ಶತಮಾನದವರೆಗೆ ಬರಿಯ ಪದ್ಧತಿಯಾಗಿದ್ದ 'ಅಳಿಯ ಸಂತಾನ ಕಟ್ಟು' ಕ್ರಮೇಣ ರಾಜರುಗಳ ಮನ್ನಣೆಗೆ ಪಾತ್ರವಾಗಿ ಅಲೂಪರಾಜರುಗಳಿಂದ ಸ್ವೀಕರಿಸಲ್ಪಟ್ಟು ಕೆಳದಿಯ ರಾಜರ ಸಮ್ಮತಿ ಪಡೆದು ರಾಜ್ಯ ಶಾಸನವಾಗಿ ಪರಿಣಮಿಸಿತು. ಹೀಗೆ 16ನೆಯ ಶತಮಾನದ ಆದಿಯಿಂದ ಈ ಪದ್ಧತಿ ಕಾನೂನಾಗಿ ಮಾರ್ಪಟ್ಟಿತು."

Castes and Tribes of Southern India ಎಂಬ ಥರ್ಸ್ಟನರ ಮೊದಲಭಾಗದ ಪುಟ 153-154ರಲ್ಲಿ ಭೂತಾಳ ಪಾಂಡ್ಯನ ಅಳಿಯಸಂತಾನ ಕಟ್ಟು ಕಟ್ಟಳೆ ಎಂಬುದು ಕ್ರಿ ಶ. 1840ರಲ್ಲಿ ರಚಿಸಿದ ಫೋರ್ಜರಿಯೆಂದೂ ಅದನ್ನು ರಚಿಸಿದ ಇಬ್ಬರು ಮೋಸಗಾರರನ್ನು ತೃಪ್ತಿಕರವಾಗಿ ಗುರುತು ಮಾಡಲಾಗಿದೆ ಎಂದು ಇತರ ಎಲ್ಲಾ ಪ್ರತಿಗಳು ಆದರ ನಕಲೆಂದೂ, ಕೈಬರಹದ ಬೇರೆ ಪ್ರತಿಗಳಿಲ್ಲವೆಂದೂ ಸ್ಪುಟವಾಗಿ ನಿರೂಪಿಸಿದೆ.

ಈ ಕಟ್ಟಿನಲ್ಲಿಉಲ್ಲೇಖವಾದ ವಿಷಯಗಳನ್ನು ಕೂಲಂಕಷವಾಗಿ ಪರಿಶೀಲಿಸಿದರೆ, ಕತೆಯ ಅನೇಕ ಭಾಗಗಳು ಮೈಸೂರಿನಿಂದ ಕೊಂಡುದೆಂಬ ಊಹೆಗೂ ಎಡೆ ಇದೆ.

1] ಮಹಿಷಾಸುರನನ್ನು ಈ ಕಟ್ಟಿಗೆ ಅಧಿದೇವತೆಯಾಗಿ ನೇಮಿಸಿದುದು,

2] ಗಂಡಸರಿಗೆ ದತ್ತಕ್ಕೆ ತೆಗೆದುಕೊಳ್ಳುವ ಹಕ್ಕಿಲ್ಲದಿರುವುದು,

3] ಭೂತಾಳ ಪಾಂಡ್ಯನ 16 ಕಟ್ಟಳೆಗಳಲ್ಲಿ ಹೆಚ್ಚಿನವು ಮೈಸೂರು ರಾಜ್ಯದಲ್ಲಿರುವ ಮೇಲೆ ನಮೂದಿಸಿದ ಜಾತಿವಂಶಗಳಲ್ಲಿ ಕಂಡು ಬರುತ್ತದೆ. (ಈ ವಿಷಯಗಳನ್ನು ಸ್ವಲ್ಪ ಮಟ್ಟಿಗೆ Mysore Gazetteer ನ ಒಂದನೇ ಭಾಗದಲ್ಲಿ Pre-marital Communism ಮತ್ತುPost marital Licence ಶಿರೋನಾಮೆಯ ಎಂಬ ಕೆಳಗೆ ಕಂಡುಕೊಳ್ಳ ಬಹುದು)

ನಾಗಾರಾಧನೆ ತುಳುನಾಡಿಗೇನೂ ವಿಶೇಷದ್ದಾಗಿ ಪರಿಗಣಿಸಲ್ಪಡಲು ಇದ್ದುದಲ್ಲ. ಅದು ಭಾರತದ ಆದ್ಯಂತ ಪ್ರಚಾರದಲ್ಲಿದ್ದುದು. ಕರ್ನಾಟಕದಲ್ಲಿ ನಾಗಜಾತಿಯ ಪಂಗಡವು ಹಳಗಾಲದಲ್ಲಿದ್ದಿತೆಂಬುದಕ್ಕೆ ಅನೇಕ ದೃಷ್ಟಾಂತಗಳಿವೆ. ಈ ನಾಗಜಾತಿಯವರಿಗೆ ಸರ್ಪವೇ ಲಾಂಛನ. ಅವರಲ್ಲಿ ಒಂದು ಪ್ರಭೇದ 'ಮಣಿ' ಕುಲ, ಈ ಕುಲವು ನಮ್ಮ ನಾಡಿನಲ್ಲಿ ಇದ್ದಿರ ಬಹುದಾದ ಕೆಲವು ಊರಹೆಸರುಗಳು ಮಣಿಪುರ, ಮಣಿಲ, ಮಾಣ್ಯೂರು, ಮಣಿ ನಾಲ್ಕೂರು ಮತ್ತು ಮಾಣಿ. 'ನಾಗರ ಪಂಚಮಿ' ಎಂಬುದಾಗಿ ಸಾರ್ವತ್ರಿಕ ಆಚರಣೆ ಭಾರತದಲ್ಲಿದ್ದುದು 'ನಾಗನ'

(ಸರ್ಪ) ಕಡೆಗೆ ಇದ್ದ ಭಕ್ತಿ ಮತ್ತು ಭಯಗಳನ್ನು ತೋರಿಸುತ್ತದೆ. ಬೇರೆ ನಾಡುಗಳಲ್ಲಿ ಹೀಗಿರುವುದಾದರೂ, ಈ ನಾಗ ಪೂಜೆಯನ್ನು ಕುರಿತು ನಮ್ಮ ತುಳುನಾಡಿನಲ್ಲಿ ವಿಶೇಷವಾದೊಂದು ವಿಷಯವಿದೆ. ಅದೇನೆಂದರೆ "ಸ್ಕಂದ ನೆಂಬ ಕಾರ್ತಿಕೇಯನನ್ನು ನಾಗ (ಸರ್ಪ) ರೂಪದಿಂದ, 'ಸುಬ್ರಹ್ಮಣ್ಯ'ನೆಂಬ ಹೆಸರಿನಿಂದ ಆರಾಧಿಸುವ ವಿಧಾನವು ನಮ್ಮ ತುಳುನಾಡಿನಲ್ಲಿರುವಂತೆ ಇತರತ್ರ ಎಲ್ಲಿಯೂ ಇಲ್ಲ-(i) ನಮ್ಮ ಜಿಲ್ಲೆಯಲ್ಲಿ ಊರೂರುಗಳಲ್ಲಿರುವ 'ನಾಗಸ್ತಾನ'ಗಳೆಂಬ ಕಲ್ಲುಗಳು ನಾಗರೂಪಿಯಾದ ಸುಬ್ರಹ್ಮಣ್ಯನ ವಿಗ್ರಹಗಳು; (ii) ಈ ಜಿಲ್ಲೆಯಲ್ಲಿಯ 'ಸುಬ್ರಹ್ಮಣ್ಯ-ಮಂಜೇಶ್ವರ, ಬಳ್ಳಮಂಜ, ಕಾಡುಕುಕ್ಕೆ, ಕುಡುಪು" ಮೊದಲಾದ ಊರುಗಳಲ್ಲಿಯ ಸುಪ್ರಸಿದ್ಧವಾದ ಸುಬ್ರಹ್ಮಣ್ಯಾಲಯಗಳಲ್ಲಿ ಸುಬ್ರಹ್ಮಣ್ಯನೆಂದು ಪೂಜಿಸಲ್ಪಡುವುದು ನಾಗ ವಿಗ್ರಹವೇ; ಮತ್ತು ಇವೆಲ್ಲಾ ಎಡೆಗಳಲ್ಲಿ ವರ್ಷಾವಧಿಯ ರಥೋತ್ಸವವಾಗುವುದು ಮಾರ್ಗಶೀರ ಶುಕ್ಲಷಷ್ಠಿ ಅಂದರೆ ಸ್ಕಂದಷಷ್ಠಿಯದಿನವೇ. (ಈ ದಿನಕ್ಕೆ ಉತ್ತರ ದೇಶದಲ್ಲಿ 'ಚಂಪಾಷಷ್ಠಿ' ಎಂದಲ್ಲದೆ 'ಸ್ಕಂದಷಷ್ಠಿ' ಎಂದು ಹೆಸರಿಲ್ಲ); (iii) ನವಗ್ರಹಗಳಲ್ಲಿಯ 'ರಾಹು' ಎಂಬ ಗ್ರಹದ ಪೀಡಾ ಪರಿಹಾರಾರ್ಥ ವಾಗಿ ದಾನಮಾಡುವುದು 'ನಾಗ (ಸರ್ಪ)' ಪ್ರತಿಮೆಯನ್ನು ಮತ್ತು ಆ ಬಗ್ಯೆ ಆರಾಧಿಸುವುದು ಸುಬ್ರಹ್ಮಣ್ಯನೆಂಬ ಸ್ಕಂದನನ್ನು; (iv) ತಮಿಳುನಾಡಿನಲ್ಲಿ ಸ್ಕಂದ ನಿಗೆ 'ಸುಬ್ರಹ್ಮಣ್ಯ'ನೆಂಬ ಹೆಸರಿದೆ; ಆದರೆ ಆತನ ವಿಗ್ರಹವು ಸರ್ಪ ರೂಪಿಯಲ್ಲ ನವಿಲನ್ನೇರಿರುವ ಆರು ಮೋರೆಯದು (ಮಯೂರಾಸನ— ಷಣ್ಮುಖ) (V) 'ಅತ್ತಾವರ ದೈಯೊಂಗುಳೆ ಪಾಡ್ದನ' ಎಂಬ ತುಳು ಭೂತ ಪ್ರಾರ್ಥನೆಯಲ್ಲಿ 'ಕುಕ್ಕೆ ಸುಬ್ರಾಯ ದೇವೆರ್' ಎಂದಿದೆ; ಸ್ಕಂದ ಷಷ್ಠಿಯ ದಿನಕ್ಕೆ ತುಳುವಿನಲ್ಲಿಯೂ ಕನ್ನಡದಲ್ಲಿಯೂ ಈ ಜಿಲ್ಲೆಯಲ್ಲಿ ವಾಡಿಕೆಯಾಗಿ ಹೇಳುವುದು 'ಕುಕ್ಕೆ ಸಟ್ಟಿ' ಅಥವಾ 'ಕುಕ್ಕೆ ಷಷ್ಠಿ' ಎಂದೇ; ಕುಕ್ಕೆ ಎಂಬ ತುಳು ಶಬ್ದಕ್ಕೆ 'ಮಗು' 'ಮಗ' ಎಂದರ್ಥವು. ಆದುದರಿಂದ ಕುಕ್ಕೆ ಎಂಬುದು ಸ್ಕಂದನ 'ಕುಮಾರ'ವೆಂಬ ಹೆಸರಿನ ಅಚ್ಚ ತುಳು ಭಾಷೆಯ ರೂಪು; ಹೀಗಾದುದರಿಂದ ಕುಕ್ಕೆ ಸುಬ್ರಾಯ ದೇವೆರ್ ಎಂದರೆ ಸರ್ಪ (ರೂಪ) ನಾದ ಕುಮಾರ ದೇವರು' ಎಂದಾಗುತ್ತದೆ." (ಇತಿಹಾಸದ ಇರುಳಿನಲ್ಲಿ ತುಳುನಾಡು-ಎಸ್. ಗೋವಿಂದ ಪೈ, ಮಂಜೇಶ್ವರ.)

ನಾಗಬನಗಳಿಗೆ ದ್ರಾವಿಡ ಭಾಷೆಯಲ್ಲಿ 'ಕಾವು' ಎಂದು ಕರೆಯುತ್ತಾರೆ. ನಮ್ಮ ಜಿಲ್ಲೆಯ ತುಳು ಮತ್ತು ಕನ್ನಡ ಭಾಷೆಗಳಿಂದ 'ಕಾವು' ಎಂಬೀ ಶಬ್ದವು ಬಹುಶಃ ಲುಪ್ತವಾಗಿ ಹೋಗಿ ಅದರ ಬದಲಲ್ಲಿ 'ನಾಗಬನ'ವೆಂಬ ಶಬ್ದವೇ ವ್ಯವಹಾರ ದಲ್ಲಿದೆ. ಈ ಕಾವು ಶಬ್ದದ ಹಿರಿತನವು (ಪ್ರಾಚೀನತೆಯು) ಕಾವೂರು, ಕಾವಾಡಿ,

ಕಾವು, ನಾಯಿಕಾವು, ನಾಗಕಾವು ಇತ್ಯಾದಿ ಊರ ಹೆಸರುಗಳ ಮೂಲಕವೂ, ಕಾವಕ್ಕೆ, ಕಾವಮ್ಮ, ಕಾವು ಎಂಬ ಹೆಂಗಸರಲ್ಲಿ ಬರುವ ಹೆಸರುಗಳ ಮೂಲಕವೂ ಉಳಿದು ಬಂದಿದೆ. ನಾಗನ ಪ್ರೀತಿಗಾಗಿ ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ, ಕಾರ್ಕಳ, ಕುಂದಾಪುರ ಮತ್ತು ಪುತ್ತೂರು ತಾಲೂಕುಗಳಲ್ಲಿ 'ನಾಗಮಂಡಲ'ವೆಂಬ ಸೇವೆಯು ನಡೆಸಲ್ಪಡುತ್ತದೆ. (ವ್ಯವಹಾರದಲ್ಲಿ ಇದನ್ನು ಮಂಡಲ ಸೇವೆ ಅನ್ನುತ್ತಾರೆ) ಇದರಲ್ಲಿ ಪ್ರಾಚೀನತೆಯ ಕುರುಹಿಗಿಂತ ಬ್ರಾಹ್ಮಣ್ಯದ ಪ್ರಭಾವವೇ ಹೆಚ್ಚಿದ್ದಂತೆ ಕಂಡು ಬರುತ್ತದೆ. ಇಲ್ಲಿ ಹೆಚ್ಚಿನ ವಿವರಗಳನ್ನು ಕೊಡಲು ಅವಕಾಶವಿಲ್ಲ.

ಭೂತಾರಾಧನೆಯ ಕುರಿತು ನಾಲ್ಕು ಮಾತುಗಳು. ತುಳುವರ ಭೂತಾರಾಧನೆಯ ಕ್ರಮ, ನಿಯಮಗಳ ಕುರಿತಾದ ಪ್ರತ್ಯೇಕ ಸಂಶೋಧನೆ ನಡೆಯುವುದು ವಿಹಿತವಾದರೂ ಇದು ತುಳುವರದ್ದೇ, ತುಳುನಾಡಿನದ್ದೇ ವೈಶಿಷ್ಟ್ಯವೆಂದು ಹೇಳುವಂತಿಲ್ಲ. ಕಾರಣ ಇದು ಒಂದೊಂದು ರೀತಿಯಲ್ಲಿ ಒಂದೊಂದು ಪ್ರದೇಶದಲ್ಲಿ, ಅದರಲ್ಲೂ ದಾಕ್ಷಿಣಾತ್ಯರಲ್ಲಿ, ಕಂಡುಬರುತ್ತದೆ. (ತಮಿಳು, ಮಲಯಾಳ ದೇಶಗಳಲ್ಲೂ) ಶ್ರೀರಂಗನಾಥ ಪೂಂಜರು ಅವರ ಭೂತಾರಾಧನೆ ಎಂಬ ಲೇಖನದಲ್ಲಿ ಈ ಕೆಳಗಿನ ರೀತಿಯಲ್ಲಿ ತೀರ್ಮಾನವನ್ನು ಮಾಡಿದ್ದಾರೆ. ಈ ತೀರ್ಮಾನವನ್ನು ಪಾರ್ಶ್ವಿಕವಾಗಿ ಒಪ್ಪಬಹುದೆ ವಿನಾ, ಸಂಪೂರ್ಣವಾಗಿ ಅಂಗೀಕರಿಸುವುದು ಕಷ್ಟ. "ಹೀಗೆ ಭೂತಾರಾಧನೆಯು ಕ್ರಮಬದ್ಧ ಜೀವನದ ಮೊತ್ತಮೊದಲಿನ ವ್ಯವಸ್ಥೆಯೆಂದೂ ನ್ಯಾಯ, ನೀತಿ, ಸತ್ಯ ಧರ್ಮಗಳಿಗನುಗುಣವಾಗಿ ವ್ಯವಹರಿಸಲು ತುಂಬ ಸಹಾಯವಾಗಿತ್ತೆಂದೂ, ಸತ್ಪುರುಷರ ಮರಣಾನಂತರ ಅವರ ಪವಿತ್ರಾತ್ಮಗಳು ಲೋಕಕಲ್ಯಾಣಕ್ಕಾಗಿ ಸಂಚರಿಸುತ್ತಿದ್ದು ತಮ್ಮ ಭಜಕರನ್ನು ಸಂರಕ್ಷಿಸುತ್ತವೆ' ಎಂಬ ತತ್ವವನ್ನು ಆಧರಿಸಿತ್ತೆಂದೂ, ಈ ಮೂಲ ಭಾವನೆಯೇ ಸಮಾಜವನ್ನು ವ್ಯವಸ್ಥಿತ ರೀತಿಯಲ್ಲಿ ಬೆಳೆಯಿಸಿ ಪೋಷಿಸಿತೆಂದೂ, ಕ್ರಮೇಣ ಇಂತಹ ಪವಿತ್ರಾತ್ಮಗಳ ಮೂಲವನ್ನು ಶೋಧಿಸುವ ವಿಚಾರವುಂಟಾಗಿ ಪರಮಾತ್ಮನ ಕಲ್ಪನೆಯೊದತೆಂದೂ, ಪರಿಣಾಮವಾಗಿ ಸ್ವರ್ಗ, ನರಕ, ಪಾಪ, ಪುಣ್ಯ, ಆತ್ಮ ಪರಮಾತ್ಮ ಎಂಬ ದ್ವಂದ್ವಗಳ ಅಭಿಪ್ರಾಯವು ಬೆಳೆಯಿತೆಂದು ಎಣಿಸಬಹುದು."

ಅಂತೂ ಇಷ್ಟು ಒಪ್ಪಿಗೆಯಾಗಬಹುದು. ಆದಿಯಲ್ಲಿ ಈ ಭೂತಗಳಾಗಲೀ, ದೈವಗಳಾಗಲೀ ವ್ಯಕ್ತಿಗೆ ಯಾ ವಂಶಕ್ಕೆ ಯಾ ಜಾತಿಗೆ ಸಂಬಧಿಸಿದ್ದು ಕಾಲಕ್ರಮೇಣ ಅವುಗಳ ಆರಾಧನಾ ಕ್ರಮದಲ್ಲಿ ಬದಲಾವಣೆಯಾಗಿ, ಅವುಗಳ ಪ್ರಭಾವ ವಿಶಾಲವಾಗಿ ಸಮಾಜಕ್ಕೆ ಒಪ್ಪಿಗೆಯಾಗುವ ರೀತಿಯಲ್ಲಿ ಪರಿವರ್ತನೆಯಾಯಿತೆನ್ನಬಹುದು. ಮಾತ್ರವಲ್ಲದೆ ಬ್ರಾಹ್ಮಣ್ಯದ ಪ್ರಾದುರ್ಭಾವದಿಂದ ಈಭೂತಾರಾಧನೆಯು ಸುವ್ಯವ

ಸ್ಥಿತವಾಯಿತೆನ್ನಬಹುದು. ಅನೇಕ ದೈವಗಳ ಪಾಡ್ದನಗಳಲ್ಲಿ ಅವುಗಳು ಘಟ್ಟ ದಿಂದಿಳಿದು ಬಂದ ಉಲ್ಲೇಖವಿದೆ. ಹಾಗಾದರೆ ಅವು ನಮ್ಮ ನಾಡಿನವುಗಳಲ್ಲವೆಂದೂ, ಬೇರೆ ಬೇರೆ ಸಂಗಡಗಳು ನಮ್ಮೀನಾಡಿಗೆ ವಲಸೆಬಂದು ನೆಲಸಿದಾಗ, ಅವುಗಳೊಡನೆ ಈ ದೈವಗಳು ಬಂದುವೆಂದೂ, (ಅರ್ಥಾತ್ ಅವುಗಳನ್ನು ಈ ಜನರು ತಂದರೆಂದೂ) ಅನುಮಾನಿಸಬಹುದು. ಅದಲ್ಲದೆ ದೈವಗಳ ಮೂಲದ ಪಾಡ್ದನದಲ್ಲಿ (Origin of the Devils or Bhutas) ಶ್ರೀಮನ್ನಾರಾಯಣನ ಆಜ್ಞಾನುವರ್ತಿಯಾಗಿ ಈಶ್ವರನು ಈ ದೈವಗಳನ್ನು ಭೂಲೋಕಕ್ಕೆ ಕಳುಹಿಸಿದನೆಂದೂ, ಕೆಲವು ತುಳುವಕ್ಕೆ ಬಂದುವೆಂದೂ ಕಂಡು ಬರುವುದರಿಂದ, ಈಗಿರುವ ಭೂತಾರಧನಾಕ್ರಮದಲ್ಲಿ ಬ್ರಾಹ್ಮಣ ರಿಂದ, ಉಂಟಾದ ವ್ಯವಸ್ಥೆಯೇ ಎದ್ದು ತೋರುತ್ತದೆ ವಿನಾ, ಹಳೆಗಾಲದ ಪದ್ಧತಿ ಹೇಗಿತ್ತೆಂಬುದನ್ನು ತಿಳಕೊಳ್ಳುವುದೂ ಕಷ್ಟವಾಗಿದೆ.(ಈ ಭೂತಾರಾಧನೆಯು ಕ್ರಮವು ಕದಂಬ ಅರಸರಿಂದ ಸುವ್ಯಸ್ಥಿತಗೊಳಿಸಲ್ಪಟ್ಟಿರಬೇಕು - ಎನ್ನುವುದಕ್ಕೂ ತೃಪ್ತಿಕರ ವಾದ ಆಧಾರಗಳು ದೊರಕಿದಂತೆ ಕಂಡು ಬರುವುದಿಲ್ಲ)

ಶ್ರೀಮಾನ್ ಗೋವಿಂದ ಪೈಗಳು 'ತೆಂಕನಾಡು' ಎಂಬ ಪುಸ್ತಕದಲ್ಲಿ ಪ್ರಕಟಿ ಸಿದ 'ತುಳುನಾಡು' ಎಂಬ ಲೇಖನದಲ್ಲಿ 'ಭೂತಪೂಜೆ'ಯ ಕುರಿತಾಗಿ ಹೀಗೆ ಬರೆ ದುದು ಮಹತ್ವವುಳ್ಳದಾಗಿದೆ.

"ಈ ಧರ್ಮಗಳಲ್ಲದೆ ತುಳುನಾಡಿನ ಪ್ರಾಯಶಃ ಮೂಲ ಧರ್ಮವಾದ ಭೂತ ಪೂಜೆಯೂ ಇದೆ. ಭೂತಪೂಜೆ ಎಂದರೆ ಪ್ರಕೃತಿಯ ಮತ್ತು ಸಂಸಾರದಲ್ಲಿಯ ವಿಶೇಷ ದರ್ಶನಗಳನ್ನು ಅಥವಾ ಸಂಭವಗಳನ್ನು ಇಲ್ಲವೆ ಕೆಲವೊಮ್ಮೆ ವ್ಯಕ್ತಿಗಳನ್ನು, ಏವಂಚ ಕಣ್ಣಿಗೆ ಕಾಣುವ ಹಾಗೂ ಮನಸ್ಸಿನಲ್ಲಿ ಒತ್ತುವ ವಿಷಯಗಳನ್ನು, ವ್ಯಕ್ತೀ ಕರಿಸಿ ಹಾಗೂ ಅವನ್ನು ದೇವೀಕರಿಸಿ ಆರಾಧಿಸುವಿಕೆ. ಆ ವ್ಯಕ್ತಿಗಳನ್ನು ತುಳುವಿನಲ್ಲಿ 'ದೈಯ್ಯೊಂ' (ಗಳು)=ದೈವ(ಗಳು) ಎನ್ನುತ್ತಾರೆ. ಅವುಗಳಲ್ಲಿ ಗಂಡು ಭೂತಗಳೂ (ಉದಾ:-ಅಣ್ಣಪ್ಪ, ಜಾರಂದಾಯ, ಮಗ್ರಂದಾಯೆ, ಕಲ್ಕುಡ, ಕೋಟಿ-ಚೆನ್ನಯ ಇತ್ಯಾದಿ) ಇವೆ. ಹೆಣ್ಣು ಭೂತಗಳೂ (ಉದಾ:—ಉಳ್ಳಾಲ್ತಿ, ಜುಮಾದಿ, ಕಲ್ಲುರ್ಟಿ, ದೇಯಿ ಬೈದ್ಯೆದಿ ಇತ್ಯಾದಿ) ಇವೆ; ಈ ದೇಶದವೂ (:-ಮಗ್ರಂದಾಯೆ ಇತ್ಯಾದಿ) ಇವೆ, ಗಟ್ಟದಸೀಮೆಯಿಂದ ಇಲ್ಲಿಗೆ ಬಂದುವೂ (ಉದಾ: —ತೊಡಕಿನಾರ್ ಇ.) ಇವೆ; ಇಲ್ಲಿ ಯವೇ ಆಯಾ ಊರುಗಳ ಕೆಲ ವಿಶಿಷ್ಟ ವ್ಯಕ್ತಿಗಳು ಸತ್ತು ಭೂತವಾದವೂ (ಉದಾ:- ಕೋಟಿ ಚೆನ್ನಯ, ಕಾಂತುನೆತ್ರಿ ಇತ್ಯಾದಿ) ಇವೆ; ಕೆಲವು ಸನಾತನ ಧರ್ಮದಿಂದ ಎರ ಕೊಂಡುವೂ(ಉದಾ:-ಜುಮಾದಿ=ಧೂಮಾವತಿ; ಪಂಜುರ್ಲಿ=ವರಾಹ; ಚಾವುಂಡಿ= ಚಾಮುಂಡಿ.) ಇವೆ. ಅತ್ಯಂತ ಪ್ರಾಚೀನಕಾಲದವು, ಅಂದರೆ ಸನಾತನ ಧರ್ಮ ಇಲ್ಲಿಗೆ

ಬರುವುದಕ್ಕಿಂತ ಮುಂಚಿನವಾದರೆ ಈಗ ಪ್ರಾಯಶಃ ಒಂದೂ ಇಲ್ಲ, ಇವುಗಳ ಗುಡಿಗಳುತುಳುನಾಡಿನ ಪ್ರತ್ಯೇಕ ಊರಲ್ಲಿ ಎಂಬಂತೆ ಸರ್ವತ್ರ ಇದೆ. ಆ ಗುಡಿಗಳಲ್ಲಿ ವರ್ಷಕ್ಕೊಮ್ಮೆ ಬಂಡಿ ಇರುವ 'ಸಾನ' (=ಸ್ಥಾನ ಅಂದರೆ ಭೂತದ ಗುಡಿ) ಗಳಲ್ಲಿ ಬಂಡಿಎಳೆಯುವ, ಇಲ್ಲದಲ್ಲಿ ಸಾಮಾನ್ಯವಾದ 'ಆಯನ' (=ಉತ್ಸವ) ಗಳು ಆಗುವುದುಂಟು; ಆ ಅಯನಕ್ಕೆ 'ನೇಮು' ವೂ ಎನ್ನುತ್ತಾರೆ. ಅವಂದು ಆ ಭೂತಗಳ ಚರಿತ್ರವನ್ನು ಆದ್ಯಂತವಾಗಿ ಬಣ್ಣಿಸುವ ಪಾಡ್ದನೆ [=ಪ್ರಾರ್ಥನೆ]ಗಳೆಂಬ ವಚನ ಕಾವ್ಯಗಳನ್ನು ಆಯಾ ಭೂತದ ಗಡಿಯಲ್ಲಿ ಅದರ ತೂಳು ಬಂದವನ ಬಳಗದವರು ಹಾಡುವ ಪದ್ಧತಿಯುಂಟು ಅಥವಾ ಇತ್ತೆಂದು ಮೇಲೆ ಹೇಳಿಯದೆ. ಆ ಪಾಡ್ದನಗಳಲ್ಲಾದರೂ, 'ಪಳ್ಳಿ' ಎಂದು ತುಳುನಾಡಿನಲ್ಲಿ ಮಸೀದಿಯ ಹೆಸರು, 'ಮಕ್ಕ' ಎಂದು ಅರಬಸ್ಥಾನದ ಮಕ್ಕಾ ಪಟ್ಟಣದ (Mecca) ಹೆಸರೂ, ಚಾಕಿರಿ [=ಸೇವೆ] ಮೈದಾನ [=ಬಯಲು], ಸುಲ್ತಾನ = ಅರಸು; ಕ [ಖ] ಜಾನೆ = ಬೊಕ್ಕಸು; ಅಂದಾಜ [=ಅನುಮಾನ], ಖಲಾಸಿ [=ಹಡಗಿನ ಆಳು] ಎಂಬ ಇವೇ ಮೊದಲಾದ ಅರಬಿ, ಪಾರ್ಸಿ ಭಾಷೆಗಳ ಶಬ್ದಗಳೂ ಮಾತ್ರವಲ್ಲ; ಪರೆಂಗಿಬಾಳ್' [=ಪೋರ್ಚುಗೀಸರ ಯಾ ಇಂಗ್ಲಿಷರ? ಖಡ್ಗ], 'ನಾಲ್ಕಾರ್ ಪರೆಂಗಿ ಮುಕ್ಕಾಲಿಗೆ [=ಅವರ ನಾಲ್ಕು ಕಾಲಿನ ಕುರ್ಚಿ], ಪರೆಂಗಿಪೇಟೆ=ಮಂಗಳೂರಿನ ಬಳಿಯ ಅರ್ಕುಳ ಎಂಬಗ್ರಾಮದ ನೆರೆಯಲ್ಲಿ 'ಫರಂಗಿ' ಎಂದು ಕರೆಯಲ್ಪಡುತ್ತಿದ್ದ ಪೋರ್ಚುಗೀಸರು ಕ್ರಿ.ಶ. ೧೭-೧೮ನೆಯ ಶತಮಾನಗಳಲ್ಲಿ ನೆಲಸಿದ್ದಂದಿನಿಂದ ಪರಂಗಿಪೇಟೆ ಈಗಲೂ ಹೆಸರುಳ್ಳ ಹಳ್ಳಿ ಮೊದಲಾದ ಇತ್ತೀಚೆಯ ಶಬ್ದಗಳೂ ಇರುವುದರಿಂದ ಆ ಪಾಡ್ದನಗಳ ನಿರ್ಮಾಣವೂ, ಅತ ಏವ ತುಳುನಾಡಿನಲ್ಲಿ ಈಗ ಗೊತ್ತಿರುವ ಭೂತಗಳ ಪ್ರಾದುರ್ಭಾವವೂ ತಾನೆ ಹಿಂದಕ್ಕೆ ಹೋಗುವಂತಿಲ್ಲ." ಅಂತೂ ತುಳುನಾಡಿನ ದೈವಗಳ ಸಂಖ್ಯೆಯು ಸಮಾಜ ವಿಕಾಸ ಹೆಚ್ಚಾದಂತೆ ಸಮಾಜ ಜಾತಿಗಳ ಸಂಖ್ಯೆ ಹೆಚ್ಚಾದಂತೆ ಏರಿತೆಂದು ನಿಸ್ಸಂದೇಹವಾಗಿ ಹೇಳಬಹುದು. ಭೂತಾರಾಧನೆಗೆ ಬ್ರಾಹ್ಮಣನು ಅತ್ಯಗತ್ಯವಲ್ಲವಾದರೂ, ದೈವಸ್ಥಾನಗಳು ಗತಿಕೆಟ್ಟಾಗ ಅಶೌಚವಾದ ಶುಚಿತ್ವಕ್ಕೆ ಬ್ರಾಹ್ಮಣನ ನೇರವು ಆವಶ್ಯಕವಾಗಿದೆ. ಮಾತ್ರವಲ್ಲದೆ ದೈವಗಳಿಂದುಂಟಾಗ ಬಹುದಾದ ಉಪದ್ರವದ ಪತ್ತೆ ಮತ್ತು ನಿವಾರಣೆಯು ಜೋಯಿಸ ಭಟ್ಟರ 'ಪ್ರಶ್ನೆ' ಯ ಮೂಲಕವೇ ಆಗುವ ನಿಯಮವೆಂಬುದು ಪಾಡ್ದನಗಳಿಂದ ತಿಳಿದು ಬರುತ್ತದೆ. ಅಂತೂ ಈ ಭೂತಾರಾಧನೆಯು 'ಕೋಲ' (Devil-Dance), 'ನೇಮ' (ನಿಯಮ Annual celebration) ಗಳ ರೂಪದಲ್ಲಿ ಬಹು ವಿಜೃಂಭಣೆಯಲ್ಲಿ ಹಿಂದಕ್ಕೆ ನಡೆಯುತ್ತಿತ್ತು. ಹಳ್ಳಿಗಳಲ್ಲಿ ಈಗಲೂ ನಡೆಯುತ್ತಿದೆಂದು ಅನ್ನಬಹುದು.

ತುಳುನಾಡ ಜನಸಾಮಾನ್ಯರಿಗೆ ಈ ಭೂತಗಳು 'ದಿವ್ಯಜ್ಯೋತಿ'ಗಳಾಗಿದ್ದುವು ಎಂದೂ ಹೇಳಬಹುದು. ಭೂತಾರಾಧನೆಯ ಪ್ರಾಮುಖ್ಯತೆಯು ಜನಸಾಮಾನ್ಯರ ಪ್ರಾರ್ಥನೆಯಲ್ಲಿ ದೈವದ ಪ್ರಾರ್ಥನೆಯ ನಂತರ ದೇವರ ಪ್ರಾರ್ಥನೆ ಮಾಡುವುದರಿಂದ ತಿಳಿದು ಬರುತ್ತದೆ.

ಸ್ಥೂಲವಾಗಿ ಹೇಳುವುದಾದರೆ ತುಳುನಾಡಿನಲ್ಲಿ ಇನ್ನಿತರ ಹಲಕೆಲವು ಕಾರ್ಯಕ್ರಮಗಳು ನಡೆಯುತ್ತವೆ. ಅವು ಧಾರ್ಮಿಕವೂ, ಸಾಂಸ್ಕೃತಿಕವೂ ಹಾಗೂ ಸಾಮಾಜಿಕವೂ ಆಗಿರುವ ಸಮಾರಂಭಗಳು. ಉಡುಪಿಯಲ್ಲಿ ಎರಡು ವರ್ಷಗಳಿಗೊಮ್ಮೆ ನಡೆವ ಪರ್ಯಾಯ, ಪಡುಬಿದ್ರಿಯಲ್ಲಿ ಜರಗುವ ಡಕ್ಕೆ ಬಲಿ, ಧರ್ಮಸ್ಥಳದಲ್ಲಿ ಹದಿನೆರಡು ವರ್ಷಗಳಿಗೊಮ್ಮೆ ನಡೆವ 'ನಡಾವಳಿ' ಎಂಬ ಉತ್ಸವ, ಕವತಾರು ಮತ್ತು ಹಿರಿಯಡ್ಕಗಳಲ್ಲಿ ನಡೆದ ವಿಶೇಷ ತರದ 'ಆಯನ' ಹಾಗೂ ನಾಗುವಳ್ಳಿಯ ಮೊದಲ ಹಂತವಾದ ನಂತರ ನಾಡಿನಲ್ಲಿ ಸಾರ್ವತ್ರಿಕವಾಗಿ ಜರಗುವ ಕಂಬಳ (ಕೋಣಗಳನ್ನು ನೀರಿರುವ ಗದ್ದೆಯಲ್ಲಿ ಓಡಿಸುವುದು) ಮತ್ತು ಕಾಲಕಾಲಕ್ಕೆ ನಡೆವ ಕೋಳಿ ಅಂಕ-ಇವುಗಳು ಪ್ರಾಮುಖ್ಯವಾದುವುಗಳಾಗಿವೆ. ತುಳುನಾಡಿನ ಯಕ್ಷಗಾನ ಬಯಲಾಟ ಮತ್ತು ತಾಳ ಮದ್ದಲೆ ಎಲ್ಲರಿಗೂ ಪರಿಚಿತವಾದುದು ಶ್ರೀ ಶಿವರಾಮ ಕಾರಂತರ ಸಂಶೋಧನೆಯು ಗೌರವಾನ್ವಿತವಾಗಿದೆ. ಮೇಲೆ ತಿಳಿಸಿದ ಸಮಾರಂಭಗಳ ಮೂಲವನ್ನು ಕಾಲಮಾನದಲ್ಲಿ ತಿಳಿಯುವುದು ಕಷ್ಟ.

ತುಳುನಾಡಿನಲ್ಲಿ ಆರ್ಯೀಕರಣ ಎಷ್ಟರ ಮಟ್ಟಿಗೆ ನಡೆದಿದೆ ಎಂದು ನಿರ್ಧರಿಸುವುದು ಕಷ್ಟ. ಆದರೂ ಇದರ ವಿಮರ್ಶೆಯನ್ನು ಮಾಡುವುದವಶ್ಯ. ಬ್ರಾಹ್ಮಣರ ನೆರವು ಬ್ರಾಹ್ಮಣೇತರರಿಗೆ ಶಾಸ್ತ್ರೀಯವಾಗಿ ಅನಿವಾರ್ಯವೆಂದೇನೂ ಇಲ್ಲ. ಬ್ರಾಹ್ಮಣರು ಹಿಂದಕ್ಕೆ ತಮ್ಮ ಜ್ಞಾನ, ಪಾಂಡಿತ್ಯ, ಸತ್ಯ, ದಕ್ಷತೆ ಮತ್ತು ಆದರ್ಶಗಳಿಂದ ಜನಾದರಣೀಯರಾದರೇ ವಿನಾ ತುಳುವರ ಧಾರ್ಮಿಕ ಆಗು ಹೋಗುಗಳಿಗೆ ಅಗತ್ಯವೆಂದಲ್ಲ. ಇಂದಿಗೂ ಬ್ರಾಹ್ಮಣೇತರರಲ್ಲಿ ಜನನದಿಂದಾರಂಭವಾಗಿ ಮರಣದ ಅನಂತರದ ಕ್ರಿಯೆಗಳನ್ನು ಮುಗಿಸುವ ತನಕದ ಯಾವತ್ತು ಕರ್ಮಗಳಿಗೂ ಪುರೋಹಿತ ವರ್ಗದ ನೆರವು ಅಗತ್ಯವಿಲ್ಲ. ಅಶೌಚದಿಂದ ಪರಿಹಾರವಾಗಲೂ ಅವರದ್ದೇ ಆದ ಕ್ರಮಗಳಿವೆ. ದೇಗುಲಗಳಿಗೆ ದರ್ಶನವೀಯುವುದು ಅವು ಧರ್ಮ ಕ್ಷೇತ್ರಗಳೆಂದೇ ವಿನಾ ಬೇರಾವ ಕಾರಣಗಳಿಂದಲ್ಲ. ಪ್ರತಿವರ್ಗಕ್ಕೂ ಅದರದ್ದೇ ಆದ ದೈವವಿದೆ (ಭೂತ). ಆ ದೈವದ ಆರಾಧನೆಯೇ ಮುಖ್ಯ. ದೇವಸ್ಥಾನಗಳಿಗೆ ಕೊಡುವ ಸೇವೆಯಾಗಲೀ, ಅವುಗಳಲ್ಲಿ ನಡೆಸುವ ಚಾಕರಿಯಾಗಲೀ ಸಾಮಾಜಿಕ ಮತ್ತು ಆರ್ಥಿಕ ಕೂಡು ಕಟ್ಟುಗಳ ಪರಿಣಾಮವೇ ಪ್ರಧಾನ ಹೊರತು ಅದಿಲ್ಲದೆ ಧರ್ಮ ಕೆಡುವ್ರು

ದೆಂದಲ್ಲ. ಆದರೆ ಬ್ರಾಹ್ಮಣೇತರರು ಬ್ರಾಹ್ಮಣ್ಯಕ್ಕೆಗೌರವವನ್ನು ಬ್ರಾಹ್ಮಣ್ಯದ ಪ್ರಚಾರ ಕಾಲದಿಂದಾರಂಭವಾಗಿ ಇತ್ತಂತೆ ಭಾಸವಾಗುತ್ತಿದೆ. ಇದು ಮುಖ್ಯವಾಗಿ ಜ್ಯೋತಿಷ್ಯ ಶಾಸ್ತ್ರದ ಪ್ರಭಾವದಿಂದಲೂ, ಬ್ರಾಹ್ಮಣರ ಆದರ್ಶ ಜೀವನದಪರಿಣಾಮದಿಂದಲೂ ಎಂದು ಹೇಳಿದರೆ ತಪ್ಪಾಗದು. ದೇವಾಲಯಗಳ ಆಗಮೋಕ್ತ ವಿಧಾನಗಳು ಬ್ರಾಹ್ಮಣೇತರರ ದೈವಸ್ಥಾನಗಳಿಗೂ ಒಂದಲ್ಲ ಒಂದು ರೀತಿಯಿಂದ ಉಪಯೋಗಿಸಲ್ಪಡಲು ಆರಂಭವಾಯಿತು. ಬ್ರಾಹ್ಮಣನೇ ಭೂತಾರಾಧನೆಯನ್ನು ಅಲ್ಲಗಳೆಯುವಂತಿಲ್ಲ. ಆರ್ಯ ಸಂಸ್ಕೃತಿಯು ಎಷ್ಟರಮಟ್ಟಿಗೆ ಈ ನಾಡಿನ ಸಂಸ್ಕೃತಿಯ ಮೇಲೆ ಬೆಳಕು ಹರಿಯಿಸಿತೋ ಅಷ್ಟೇನಮ್ಮ ನಾಡ ಸಂಸ್ಕೃತಿಯು ಆರ್ಯ ಸಂಸ್ಕೃತಿಯನ್ನು ಪರಿವರ್ತನೆ ಗೊಳಿಸಿತು. ಹೀಗಾಗಿ ಪ್ರತಿ ಬ್ರಾಹ್ಮಣ ಕುಟುಂಬಕ್ಕೂ ಒಂದು ದೈವವಿದೆ. ಅದು ಕೌಟುಂಬಿಕದೈವ. ಕುಲದೇವರಿಗೆ ಸೇವೆ ಎಷ್ಟು ಸಲ್ಲತಕ್ಕದ್ದೋ ಅಷ್ಟೇ ಹವಿರ್ಭಾಗ ಈ ದೈವಕ್ಕೆ ಯಾ ಭೂತಕ್ಕೆ ಸಲ್ಲತಕ್ಕದ್ದು. ಅನೇಕ ದೈವಸ್ಥಾನಗಳು ದೇವಸ್ಥಾನಗಳಾದುವು. ಆಲಡೆಗಳು (ಆಲಿನ ಎಡೆ—ಇಲ್ಲಿ ನಾಗ ಮತ್ತು ಭೂತಗಳ ಆವಾಸ) ಬ್ರಹ್ಮಸ್ಥಾನಗಳಾದುವು (ಮುಖ್ಯವಾಗಿ ನಾಗ, ನಂದಿ, ರಕ್ತೇಶ್ವರಿ, ಬ್ರಹ್ಮ, ಕ್ಷೇತ್ರಪಾಲ—ಪಂಚದೈವಗಳ ಸ್ಥಾನ) ಪಾತ್ರಿಗಳೊಡನೆ ವಿಚಾರ ವಿನಿಮಯ ಮಾಡುವ ಪದ್ಧತಿಯು ಬ್ರಾಹ್ಮಣರಲ್ಲೂ ಬಳಕೆಗೆ ಬಂತು (Oracular Consultations). ಬ್ರಾಹ್ಮಣೇತರರಲ್ಲಿ ಭೂತಗಳ ಪಾಡ್ದನ (ಪಾರ್ದನ) ಮತ್ತು ಸಂಧಿಗಳೇ ಧರ್ಮ ಸಂಬಂಧ ಪುನಶ್ಚರಣೆ. ಆದರೆ ಪುರಾಣ ಕತೆಗಳೂ, ಕಥನವೂ ಪ್ರಚಾರದಲ್ಲಿಲ್ಲವೆಂದಲ್ಲ. ದೈವಗಳಿಗೆ ರಕ್ತಾಹಾರ ಅವಶ್ಯವಾದರೂ ಅದನ್ನು ಗುಡಿಯೊಳಗೆ ಕೊಡದಂತೆ ಮಾಡಿದ ಪ್ರಯತ್ನವು ಬ್ರಾಹ್ಮಣರದು. ಕೆಲವು ಕಡೆ ಸಂಪೂರ್ಣ ತ್ಯಜಿಸಲು ಜೈನ ಧರ್ಮವೇ ಕಾರಣ. ತುಳುವದಲ್ಲಿ ಜೈನ ಧರ್ಮಾವಲಂಬಿಗಳೂ ಈ ಭೂತಾರಾಧನೆಯ ಕಟ್ಟಿಗೆ ಒಳಪಡ ಬೇಕಾಯಿತು. ರಕ್ತೇಶ್ವರಿಯೂ (ಲೆಕ್ಕೆಸಿರಿ), ಈಶ್ವರನೂ (ಬೀರ) ತುಳುವದ ಪ್ರಧಾನ ದೈವತಗಳು. ಒಂದು ತುರುಕಾರರಿಗೂ, ಇನ್ನೊಂದು ಬಂಟರಿಗೂ (ಒಕ್ಕೆಲ್ಮೆ) ವಿಶಿಷ್ಟವಾದುವುಗಳು.

ತುಳುವದ ಒಂದು ಮುಖ್ಯ ವೈಶಿಷ್ಟ್ಯವನ್ನು ಈ ಕೆಳಗಿನಂತೆ ಸೂಚಿಸಬಹುದು. ತುಳುವದ ಬ್ರಾಹ್ಮಣನು ಭೂತಾರಾಧಕನೂ ಅಹುದು; ಆಗಮೋಕ್ತ ಪೂಜಾವಿಧಿ ನಡೆಸುವವನೂ ಅಹುದು; ಆಗಮಗಳಿಗೆ ವಿಶೇಷ ಮಹತ್ವ ಕೊಡದವನೂ ಅಹುದು; ವೇದಾಂಗ ಶಾಸ್ತ್ರ ಬಲ್ಲವನೂ ಅಹುದು; ಮಾಧ್ವ ಮತಾವಲಂಬಿಯಾಗಿದ್ದರೆ ವೀರವೈಷ್ಣವನಾಗಿರದೆ, ಶೈವಾಚಾರ ಮತ್ತು ಶಾಕ್ತೇಯ ಪದ್ಧತಿಗಳನ್ನು ಪೂರ್ಣ ನಿರಾಕರಿಸಲು ಅಸಮರ್ಥನೂ ಅಹುದು.

ಮಾಧ್ವ ಧರ್ಮವು ಶತಮಾನಗಳಿಂದ ಬಂದ ಮತೀಯ ಪರಂಪರೆಗಳನ್ನು ಸಮಾಗಮಗೊಳಿಸುತ್ತದೋ ಎಂಬಂತೆ ತುಳುವದ ಒಂದು ವೈಶಿಷ್ಟ್ಯವೆನ್ನಬಹುದು.

o o o o o o o o

ಗಾದೆಗಳ ಮೂಲಕ ತುಳುವ ಸಮಾಜವನ್ನು ಪರಿಶೀಲಿಸೋಣ. ಗಾದೆಗಳು ಸತ್ಯದ ಅರ್ಧಾಂಶವನ್ನು ಮಾತ್ರ ಬಯಲಿಗೆ ತರಬಲ್ಲುವು. ಅವುಗಳು ಒಂದು ಸಮಾಜದ ಯಾ ಜಾತಿಯ ಯಾ ವರ್ಗದ ನ್ಯೂನತೆಗಳನ್ನು ವ್ಯಂಗ್ಯವಾಗಿ ಚಿತ್ರಿಸುತ್ತವೆ. ಈ ಗಾದೆಗಳನ್ನು ಅಕ್ಷರಶಃ ಅರ್ಥವಿಸಿಕೊಳ್ಳುವುದು ಒಪ್ಪಿಗೆಯಾಗದಿರುವುದಾದರೂ, ಈ ಪಂಗಡಗಳು ಒಂದನ್ನೊಂದು ಹೇಗೆ ಕಂಡುಕೊಳ್ಳುತ್ತವೆ ಹಾಗೂ ಅವುಗಳಲ್ಲಿ ಅಭ್ಯಾಸವಾಗಿ ಬಂದ ವೈಲಕ್ಷಣಗಳಾವುವು ಎಂಬವುಗಳನ್ನು ತಿಳಿಸುತ್ತವೆ. "ಸಂದರ್ಭೋಚಿತವಾಗಿ, ವಿಸ್ತಾರವಾದ ಅನುಭವ ಪ್ರಪಂಚವೊಂದನ್ನು ಚೊಕ್ಕವಾದ ಪುಟ್ಟ 'ಮನೋಹರ ವಾಕ್ಯ'ಗಳಲ್ಲಿ ಗಾದೆಯು ಹೇಳುವುದು. ಈ ಗಾದೆಯು ವೇದಕ್ಕೆ ಸಮಾನವೆಂದು ಜನತೆಯು ಅಂಗೀಕರಿಸುವುದು" ಅಂತೂ ಗಾದೆಗಳು ಅನುಭವದ ತಿರುಳು ಎನ್ನಲಡ್ಡಿಯಿಲ್ಲ.

1 ಒಕ್ಕೆಲ್ಮೆ ಮಳ್ತಿನವು ದಂಡೊಗು, ಬ್ರಾಣೆ ಮಳ್ತಿನವು ಪಿಂಡೊಗು, ಮನ್ಸೆ ಮಳ್ತಿನವು ಹೆಂಡೊಗು.

Mean: The Bants' earning is spent on law suits, the Brahmins' earnings on ceremonies the Holeyas' on drinks.

ಕನ್ನಡ:– ಸೆಟ್ಟಿ ಮಾಡಿದ್ದು ದಂಡಕ್ಕೆ, ಭಟ್ಟ ಮಾಡಿದ್ದು ಪಿಂಡಕ್ಕೆ, ಹೊಲೆಯ ಮಾಡಿದ್ದು ಹೆಂಡಕ್ಕೆ.

ಮೈಸೂರು ರಾಜ್ಯದಲ್ಲಿ ಇದೇ ಗಾದೆ ಬಳಕೆಯಲ್ಲಿದ್ದುದು ಗಮನೀಯವಾಗಿದೆ.

The Brahmin earns for Sradhas, the Holeya for drink and the Vokkaliga for the fine.

2. ಬಂಟೆರ್ ಪೋಯಿನವುಳು ನ್ಯಾಯ ತಪ್ಪಂದ್, ಮಡೆಂಜಿ ಪೋಯಿನವುಳು ಕಳಂಕ್ ತಪ್ಪಂದ್.

Mean: Where the Bants are, there is quarrel, where the Madenji fish is, there, is selt.

3. ಬಂಟ ಅಬ್ಬರ, ತೇವು (ಸೇವು) ಗೊಬ್ಬರ

Mean: The Bant's loud cry (noise), the manure of Arum Colocasia.

4. ಬಂಟರಲ್ಲಿ ತಂಟೆ ಹೆಚ್ಚು, ಕುಂಟರಲ್ಲಿ ಗರ್ವ ಹೆಚ್ಚು.

Mean: The Bant's are quarrelsome; Dwarfs are proud.

5. (ಬ್ರಾಣೆ) ಒಂಜಿ ಉಣಸ್‌ಗ್ ಐನ್ ತಾರ್ ದಾಂಟ್‌ದ್ ಪೋನಲ್ಕ.

ಕನ್ನಡ:– (ಬ್ರಾಹ್ಮಣನು) ಒಂದು ಊಟಕ್ಕಾಗಿ ಐದು ಹೊಳೆಗಳನ್ನು ದಾಟಿ ಹೋದಂತೆ.

Mean: Like the Brahmin crossing five rivers for a meal.

6. ಬ್ರಾಹ್ಮಣೋ ಭೋಜನಪ್ರಿಯಃ

Mean: The Brahmin is for good meal.

7. ಬೆನ್ನಿ ಒಕ್ಕೆಲ್ಮೆಗ್

Mean : Agriculture is for the cultivator (here Bant who is known as Okkelme)

ಇದೇ ಅರ್ಥಕೊಡುವ ಗಾದೆಯು ಒಕ್ಕಲಿಗರಿಗೆ ಅನ್ವಯಿಸುವುದಿದೆ.

Agriculture not done by a Vokkaliga is no Vokkaliga.

8. ಬ್ರಾಣನೊ ಚಾಕ್ರಿದಾಯ ಅವರೆ ಬಲ್ಲಿ, ಗಾಣದಾಯನೊ ಬೋರಿ ಆವರೆ ಬಲ್ಲಿ.

Mean: Never a Brahmin's servant, never a Ganiga's bull.

9. ಬ್ರಾಣೆ, ಬಂಟೆ, ಬಿರುವೆ ಸೇರಂದೆ ಕೂನಿ ಆವಂದ್

Mean : For a murder, a Brahmin, a Bant and a Billava are Privy.

10. ಕಾಡ್ ಸೊರ್ಕಿನವುಳು ಏಡೆನ್ ಬುಡೊಡು, ಊರು ಸೊರ್ಕಿನವುಳು ಕೊಂಕಣನ್ ಬುಡೊಡು.

Mean : Where the forest is fat (thick), you must put the goat, where a village is prospering you must let the Konkana's go in.

11. ಕೊಂಕಣೆ ಲಾಭದಾನ್ತೆ, ಬೊಳ್ಳೊಡು ಪೋವಯೆ

Mean : A Konkanastha will not be carried away by the flood without Profits

ಇದೇ ಗಾದೆಯು ಕೋಮಟಿಗಳಲ್ಲಿ ಚೆಟ್ಟಿಯರಿಗೆ ಅನ್ವಯಿಸುತ್ತದೆ.

The Chetty never enters the flood unless there is a profit for the trouble.

12. ಮಾದಿಗ ಇಲ್ಲಡ್ ಉಣಸ್ ಆಂಡ ಬ್ರಾಣಗ್ ದಾನೆ?

ಕನ್ನಡ: ಮಾದಿಗನ ಮನೆಯಲ್ಲಿ ಪಾಯಸ ಮಾಡಿದರೆ ಬ್ರಾಹ್ಮಣನಿಗೇನು?

Mean: What profit has a Brahmin of a dinner in a madiga's (cobbler's) house?

13. ಬಿರುವೆರೆಡ್ ಇರುವೆರ್.

Mean: Two men among the Billavas (Billavas are always divided)

14. ಇರ್ಲ ಇಪ್ಪಡ, ಒರ್ಲ ತಪ್ಪಡ.

Mean: The Acharis are always on the subsistance level; a living hand to mouth.

15. ಆಚಾರಿ ಮರಕ್ ಮಾರಿ, ಬೆತ್ತದ ಕೊಡಿ ಬೆರಿಕ್ ಮಾರಿ.

Mean: The Achari always forestalls danger to a tree and the top of a cane to the back.

16. ಮಡ್ಯೊಳನ ಪುಣ ಪಿದಾಯಿ ದೀನಗ ಗೊತ್ತು.

Mean: The position of a washerman will be known when his dead body is taken out (for he will not have even a piece of cloth belonging to him to cover his corpse) ಈ ಅರ್ಥವನ್ನೇ 'The Agasa is always with his master's finery' ಎಂಬುದು ಪ್ರತಿಧ್ವನಿಸುತ್ತದೆ.

17. ಒಬ್ಬ ಪೂಜಾರಿ ಇಬ್ಬರ್ಗೆ ಸಮ

Mean: One Poojari (Billava) is equal to two men (in strength)

18. ಮನ್ಸಗ್ ಮುಟ್ಟ್ಲೆದ ಪಸೆ ಅಜಿಕೊಡ್ಲೆ ನೆಂಪಿಜ್ಜಿ.

Mean: A Holeya's gratitude lasts only for a period for drying up the moisture of his hat (made of leaves)

19. ನಲ್ಕೆದಾಯನ ತೆಲ್ಕೆ, ಷಗಲೆನ ತೆಲ್ಕೆ.

Mean: The smile of a devil-dancer is like the smile of a crocodile

20. ಕುಂಬಾರನಿಗೆ ವರ್ಷ, ದೊಣ್ಣೆಗೆ ನಿಮಿಷ

Mean: It takes a year for a Kumbara but a minute for a stick.

21. ಅಕ್ಕಸಾಲೆ ಚುಚ್ಚಿದರೆ ಕಿವಿ ನೋವಿಲ್ಲ.

Mean: There won't be pain, if the goldsmith is to pierce the ear.

22. ಬಂಗಾರ್ದ ಬೇಲೆದಾಯಗ್, ಆಯನೊ ತಂಗಡಿನೊ ಅತ್ತಡ ಅಪ್ಪನೊ ಬಂಗಾರ್ಡ್ದ್ ಗೆಪ್ಪಂದ್ ಬಲ್ಲಿ.

Mean: The Akkasali will not scruple to take from the gold given to him by his sister or mother.

23. ಕೋಮಟಿಗ ಕೊಡ; ಬಣಜಿಗ ಬಿಡ.

Mean: A Komati will neve give and a Banjiga will never leave

24. ಹಸಿದ ಹಾರುವವನನ್ನೂ, ಉಂಡ ಒಕ್ಕಲಿಗನನ್ನೂ ಕೆಣಕ ಬೇಡ.

Mean: Don't provoke a Brahmin who is hungry and a Vokkaliga who has taken food.

25. ಜಾಡನಾದರೂ ನೋಡದೆ ನೇಯಲಾರ.

Mean: Even a weaver (Jeda) will not weave without observation.

26. ಈ ಒಂಜಿ (ಒರಿ) ವಾ ಓಡಾರಿಯ?

Mean: What a Vodari are you? (What a dull headed fellow you are!)

27. ಬಂಗಾರದ ಕೆಲಸದವನಿಗೆ ಆಭರಣದಲ್ಲಿದ್ದ ಬಂಗಾರ ಗೊತ್ತು, ಮಡಿವಾಳನಿಗೆ ಊರಲ್ಲಿದ್ದ ಬಡವರು ಯಾರೆಂದು ಗೊತ್ತು.

Mean: The Akkasale knows whose ornaments are made of gold and the Agasa knows the poor of the Village.

28. ಈ ದೋಲು ಗುದ್ದೆರೆ ಪೋ (ನೀನು ಡೋಲು ಬಡಿಯಲು ಹೋಗು)

Mean: Do the work of beating the drum which work is done by the Koragas

29. ಜೈನಗ್ ನಂಟೆ ಇಜ್ಜಿ (ಇಜ್ಜಿ)

A Jaina is friendless.

30 ಸಾಲ್ಯೆ ಪ್ರತ್ಯೇಕಾದ್ ಹಾಳಾಯೆ; ಸೆಟ್ಟಿ ಪ್ರತ್ಯೇಕ ಆವಂದೆ ಹಾಳಾಪೆ

Mean: A Sale is ruined by separating from his party, while a Chetty is from having one.

31. ದಿಕ್ಕನ್ ನಂಬುದು ಬೆನ್ನಿ ಬೆನಡ.

Mean: Never engage in agriculture depending on the word of a Holeya.

32. ಮರಕಲೆರ್ ಮದಪ್ಪಯೆರ್.

Mean: The Marakala's (Fishermen) will not forget (i. e. they are ever grateful and truthful

# ತುಳುನಾಡಿಗೆ ಸಂಬಂಧಿಸಿದ ಪ್ರಾಮುಖ್ಯವಾದ ಕೆಲವು ಚಾರಿತ್ರಿಕ ದಾಖಲೆಗಳು

1. ಸಾಹಿತ್ಯದಲ್ಲಿ ತುಳುನಾಡಿನ ಮೊದಲ ಉಲ್ಲೇಖ: ಪರಣಾರ್ ಎಂಬ ತಮಿಳು ಕವಿಯ ಸಾಹಿತ್ಯದಲ್ಲಿ 'ತುಳುನಾಟ್' ಎಂಬ ಹೆಸರಿದೆ. ಸಂಘಮ್ ಸಾಹಿತ್ಯ ಕ್ರಿ. ಶ. ಒಂದನೆಯ ಶತಕದಿಂದ ಮೂರನೆಯ ಶತಕದ ತನಕ ಬರೆಯಲ್ಪಟ್ಟಿರಬೇಕೆಂದು ಚಾರಿತ್ರಿಕ ಸಂಶೋಧಕರ ಅಭಿಪ್ರಾಯ.

2 ಕಲ್ಬರಹದಲ್ಲಿ (Epigraphy) ತುಳುನಾಡಿನ ಮೊದಲ ಉಲ್ಲೇಖ: ಬಳಗುಳದ ಹೋಬಳಿಯ ಬಲ್ಮುರಿಯ ಅಗಸ್ತ್ಯೇಶ್ವರ ದೇವಸ್ಥಾನದ ಪಶ್ಚಿಮ ಕಡೆಯ ಕಲ್ಲಿನಲ್ಲಿ 'ತುಳುವಂ ಕೊಂಕಣಮುಯ್ದು' ಎಂದು ಮುಂತಾಗಿ ಕೆತ್ತಲ್ಪಟ್ಟಿದೆ. ರಾಜ ರಾಜ ಚೋಳ ದೇವನ 28ನೆಯ ವರ್ಷದ ಆಳ್ವಿಕೆಗೆ ಸರಿಯೊಪ್ಪುವ ಪರಿಧಾವಿ ಸಂವತ್ಸರದ ಶಕ ವರ್ಷ 934-ಕ್ರಿ.ಶ. 1012 (E C.Vol. III)

3. ಕಲ್ಬರಹದಲ್ಲಿ ಆಳುಪರ (ಆಳುವರಸರ) ಮೊದಲ ಉಲ್ಲೇಖ: ಕದಂಬ ಅರಸನಾದ ಕಾಕುಸ್ಥವರ್ಮನ ಹಲ್ಮಿಡಿಯ ಸುಮಾರು 450 ಕ್ರಿ.ಶ.ದ ಶಾಸನದಲ್ಲಿ (ಬೇಲೂರು ತಾಲೂಕು) 'ಅಳಪಗಣ ಪಶುಪತಿ ಯಾ ದಕ್ಷಿಣಾಪಥ' ಎಂಬುದಾಗಿ ಬರೆದಿದೆ. (E.C.Vol XI) ಶ್ರೀ ಕಂಠ ಶಾಸ್ತ್ರಿಯವರಿಂದ ಸಂಶೋಧಿಸಲ್ಪಟ್ಟು ಬರೆಯಲ್ಪಟ್ಟ 'Sourcesof Karnatak History Vol I' ಈ ಗ್ರಂಥದಲ್ಲಿ ಈ ಅಳಪಗಣ ಎಂದರೆ ಆಳುಪ ಕುಲವೆಂಬುದಾಗಿ ತೀರ್ಮಾನಿಸಿ ಬರೆದಿದ್ದಾರೆ. ಈ ತೀರ್ಮಾನವು ಸಂದೇಹ ರಹಿಮಾದುದೆಂದು ಹೇಳಲು ಸಾಧ್ಯವಿಲ್ಲ. ಆದರೂ ತುಳುವವು 'ತುಳವ' ಎಂದು ಕರೆಯಲ್ಪಟ್ಟಂತೆ 'ಅಳಪ' ಎಂಬುದು 'ಆಳುಪ' ವಾಗಲು ಸಾಧ್ಯವಿದೆ ಎಂದೆನ್ನ ಬಹುದು.

4. ಕಲ್ಬರಹದಲ್ಲಿ ನಮ್ಮ ತುಳುನಾಡಿಗೆ ಅನ್ವಯಿಸುವ ಮೊದಲ ಹೆಸರು 'ಆಳುಕ'ವೆಂದಿದೆ. ಇದು ಬಾದಾಮಿಯ ಚಾಲುಕ್ಯವಂಶದ ಮಂಗಲೇಶ್ವನ ಸಿದ್ಧಾರ್ಥಿ ವೈಶಾಖ ಪೂರ್ಣಿಮೆಯ– ಕ್ರಿ. ಶ. 602 ಮಹಾಕೂಟ ಶಾಸನದಲ್ಲಿ ಉಲ್ಲೇಖಿತವಾಗಿದೆ. ಎರಡನೆಯ ಜಿನಸೇನನ ಒಂಭತ್ತನೆಯ ಶತಮಾನದ ಮಹಾ ಪುರಾಣ ಗ್ರಂಥದಲ್ಲಿ ದಾಕ್ಷಿಣಾತ್ಯ ರಾಷ್ಟ್ರಗಳಲ್ಲಿ 'ಕೂಟಸ್ಥಾನೌಳಿಕ' ಎಂಬುವನ್ನು ಉಲ್ಲೇಖಿಸಿದ್ದಾನೆ. ಇದು ನಮ್ಮ ಆಳ್ವಖೇಡವೇ ಇರಬೇಕು. ಏಳನೆಯ ಶತಮಾನದ್ದಿರಬೇಕೆಂದು ತಿಳಿಯಲ್ಪಟ್ಟ 'ಪ್ರಪಂಚ ಹೃದಯ'ಎಂಬ ಸಂಸ್ಕೃತ ಗ್ರಂಥದಲ್ಲಿ 'ಆಳುವ'

ಎಂಬುದಾಗಿಯೂ ಕರೆಯಲ್ಪಟ್ಟಿದೆ. Sources of Karnatak History ಪುಟಗಳು 26, 36 & 37 & 75)

5. ಕ್ಲೋಡಿಯಸ್‌ಪ್ಟೋಲೆಮಿ ಎಂಬ ಗ್ರೀಸ್ ದೇಶದ ಭೌಗೋಳಿಕ ಶಾಸ್ತ್ರಜ್ಞನ ಬರೆದ ದಾಖಲೆಯಲ್ಲಿರುವ 'ಒಲ್ಲಾಖೋರಾ' ಎಂಬ ಊರು 'ಆಳ್ವರಖೇಟ' [ಎಂದರೆ ನಮ್ಮಾ ತುಳುನಾಡು] ವಾಗಿರಬೇಕೆಂದು ತಿಳಿಯಲ್ಪಟ್ಟಿದೆ. ಪ್ಟೋಲೆಮಿಯ ಕಾಲವು ಸುಮಾರು ಕ್ರಿ.ಶ. 140 ಹಾಗಾದರೆ ಆಳುಪರು (ಆಳುವರು) ಕ್ರಿ. ಶ. ಎರಡನೆಯ ಶತಮಾನದಿಂದ ಪ್ರಾಮುಖ್ಯತೆಯನ್ನು ಪಡೆದಿರಬೇಕೆಂದು ಹೇಳಬಹುದು. [S.K-H. ಪುಟ 4]

6. 'Periplus Mari Erithreaca' ಎಂಬ ಸುಮಾರು ಕ್ರಿ.ಶ 70ಕ್ಕೆ ಅನುಗುಣವಾಗುವ ಗ್ರೀಕ್ ಗ್ರಂಥದಲ್ಲಿ ಉಲ್ಲೇಖಿತವಾದ 'ಮಂಡಗೋರಾ' ಮತ್ತು ಕ್ರಿ. ಶ. 140ರ ಸುಮಾರಿನ ಮೇಲೆ ತಿಳಿಸಿದ ಪ್ಟೋಲೆಮಿಯ ಭೂಗೋಳದಲ್ಲಿ ಬರುವ 'ನಿತ್ರಾ' (Nitra) ಎಂಬ ಹೆಸರುಗಳು ತುಳುವದ 'ಮಂಗಳೂರು' ಎಂಬುದಾಗಿ ಗೊತ್ತು ಮಾಡಲಾಗಿದೆ. (S.K.H. Vol 1 & 2)

ಈ ದಾಖಲೆಗಳಿಂದ ತುಳುವವು ಯಾ ತುಳುವದ ಕೆಲವು ಭಾಗಗಳು ಕ್ರಿ ಶ. ದ ಆದಿಯಿಂದ ಅಂತೂ ರಾಜಕೀಯ ಹಾಗೂ ಆರ್ಥಿಕ ಚಟುವಟಿಕೆಗಳನ್ನು ಹೊಂದಿತ್ತು ಎಂಬುದಾಗಿ ಹೇಳಬಹುದು.

7. ಆಳುವರಸರ ತುಳುವದ ಶಾಸನಗಳಲ್ಲಿ ಅತಿ ಪ್ರಾಚೀನವಾದುದೆಂದರೆ ಉಡುಪಿ ತಾಲೂಕಿನ ವಡ್ಡರ್ಸೆಯಲ್ಲಿ ದೊರಕಿದ ಕಂದವರ್ಮರಸನ ತೇದಿಯಿಲ್ಲದ ಶಾಸನ. ಲಿಪಿಯ ಸ್ವರೂಪವನ್ನಾಧರಿಸಿ (Palaeography) ಈ ಶಾಸನವು ಕ್ರಿ. ಶ. 7ನೆಯ ಶತಮಾನದ್ದೆಂದು ನಿರ್ಧರಿಸಿದ್ದಾರೆ (A. R. for 1931-32 of Madras Presidency)

8. ದಾವಣಗೆರೆಯ ಹರಿಹರದಲ್ಲಿದ್ದ ಸೀತಾರಾಮಯ್ಯನಿಂದ ಬಂದ ತಾಮ್ರ ಶಾಸನದಲ್ಲಿ (ಕ್ರಿ. ಶ. 694) ವಿನಯಾದಿತ್ಯನ ಮಗನು ಮಾಡಿದ ದಿಗ್ವಿಜಯದಲ್ಲಿ ಆಳ್ವರನ್ನೂ, ಗಂಗರನ್ನೂ ನಮೂದಿಸಿ ಅವರು ಪುರಾತನರು ಎಂಬುದಾಗಿ ತಿಳಿಸಿದೆ (E. C. Vol. XI No. 66)

9. ಆಳುವಖೇಡದ ವಿಸ್ತಾರವು ಸೊರಬ ತಾಲೂಕಿನ ರಾಷ್ಟ್ರಕೂಟ ಗೋವಿಂದರಸನ ಕ್ರಿ. ಶ. 800ರರ ಶಾಸನದಲ್ಲಿ ||ಬನವಾಸಿ ಮಂಡಲ ಮನಾ ಸಮುದ್ರಾನ್ತ ರಾಜಾದಿತ್ಯರಾಸರ್ ಆಳೆ! ಆಳುನಖೇಡ ಮರುಸಾಸಿರನು ಮಾನ್ ಚಿತ್ರ ವಾಹನ ನಾಳುತ್ತುಂ....|| ಆಳ್ವಖೇಡ 6000 ಎಂಬುದಾಗಿದೆ. (E. C. Vol VIII) ಬನ

ವಾಸಿ 12,000ದಲ್ಲಿ ಸೇರಿರಬಹುದಾದ ಹಿರಿದಾದ ಘಟಕವು ಅಳ್ವಖೇಡ. ಉಳಿದುವುಗಳು ಕೊಂಕಣ 900, ಸಾವಿಮಲೆ, ಸಾಂತಳಿಗೆ 1000, ಹೈವೆ 500"(S. K. H. Vol I ಪುಟ 8 ಮುನ್ನುಡಿ)

10. ಅರಸೀಕೆರೆಯ No. 55 ಕ್ರಿ. ಶ. 1143ರ ಶಾಸನದಲ್ಲೂ, No. 220 ಕ್ರಿ. ಶ. 1178ರ ಶಾಸನದಲ್ಲೂ 'ಆಳ್ವರಖೇಡ' ಎಂಬುದಾಗಿ ಉಲ್ಲೇಖಿಸಿದೆ.

11. ತುಳುನಾಡಿನಲ್ಲಿ ಆಳುವರ ಶಾಸನಗಳು ವಿಪುಲವಾಗಿವೆ. ಆದರೆ ಪ್ರಕೃತಿಯ ಹಾಗೂ ಹವಾಮಾನದ ದುಷ್ಪರಿಣಾಮದಿಂದಲೂ, ಜನರ ಅಜ್ಞಾನದ ದೆಸೆಯಿಂದಲೂ ಅವುಗಳು ಬಹಳವಾಗಿ ರೂಪುಗೆಟ್ಟಿರುವುದು ಅತ್ಯಂತ ವಿಷಾದಕರವಾದ ಸಂಗತಿಯಾಗಿದೆ. ಈ ಶಾಸನಗಳು ಯೋಗ್ಯ ರೀತಿಯಲ್ಲಿರುತ್ತಿದ್ದರೆ ತುಳುವದ ಚರಿತ್ರೆಯು ಇನ್ನೂ ವಿಷದವಾಗಿ ತಿಳಿಯಲ್ಪಡಲು ಅನುಕೂಲವಾಗುತ್ತಿತ್ತು. ಇಷ್ಟರ ತನಕ ಆಳುಪರ ಶಾಸನಗಳು ಈ ಕೆಳಗಿನ ಸ್ಥಳಗಳಲ್ಲಿ ದೊರಕಿವೆ: ಮಂಗಳೂರು, ಕದಿರೆ, ಮೂಡಬಿದ್ರೆ, ಕಾಪು, ಉದಿಯಾವರ, ಬಾರಕೂರು, ಬಸರೂರು, ಕುಂದಾಪುರ, ಕೋಟೇಶ್ವರ, ಕೋಟ, ಬ್ರಹ್ಮಾವರ, ಕೋಟಿ, ಬೈಂದೂರು, ಉಪ್ಪುಂದ, ಹಂದಾಡಿ, ಹಾನೆಹಳ್ಳಿ, ವಾರಂಬಳ್ಳಿ, ಮೂಡನಿಡಂಬೂರು, ಕುತ್ತುಪಾಡಿ, ನೀಲಾವರ, ಪುತ್ತಿಗೆ, ವಾರಂಗ, ಪೊಳಲಿ, ಇರುವೈಲು, ಕುಮ್ರುಕೋಡು, ಪಾದೆಬೆಟ್ಟು, ಹೇರಾಡಿ, ವಡ್ಡರ್ಸೆ, ಬನ್ನಾಡಿ, ಆವರ್ಸೆ, ಕುಂಜೂರು, ಬೆಳ್ಳರಪಾಡಿ, ಕುದಿಗ್ರಾಮ, ಪೆರ್ಣಂಕಿಲ, ಹಾವಂಜೆ, ಪಾದೂರು, ತಾಳ್ಕೋಡು (ಹೊನ್ನಾವರ ತಾಲೂಕು), ಶಿರಾಲಿ (ಭಟ್ಕಳ), ಇಡಗುಂಜಿ (ಹೊನ್ನಾವರ ತಾಲೂಕು), ಅನ್ವೇಷಣೆಗೆ ಇನ್ನೂ ತುಂಬಾ ಆಸ್ಪದ ವಿದೆ (A. R. of Madras Presidency and Karnatak Inscriptions Vol III Part I)

12. ವಿಜಯನಗರದ ಪ್ರಾದುರ್ಭಾವ ಕಾಲಕ್ಕಿಂತ ಮೊದಲು ಪಶ್ಚಿಮ ಕರಾವಳಿಯು ಕರ್ನಾಟಕ ಪ್ರಾಚೀನ ಕಾಲದಿಂದಲೂ ಆಳುಪರಿಂದ ಆಳಲ್ಪಟ್ಟಿತ್ತು.

[Before the advent of the Vijayanagara rule, the West Coast was subject to the administration af the Alupas from the earliest period of Karnataka history, though they paid nominal homage to the then ruling sovereign. It is interesting to note that the South and North Kanara districts present a different cultural basis in which the life of the people was moulded. The phraseology and nomenclature of the administrative institutions are different from those of the up-country though their functions were similiar in character.

K. I. Vol. I Int. XII-XX ಇದು ತುಳುವದ ರಾಜಕೀಯ, ಭೌಗೋಳಿಕ ಮತ್ತು ಸಾಂಸ್ಕೃತಿಕ ಮೇರೆಯನ್ನು ನಿರ್ಧರಿಸಲು ಅನುಕೂಲವಾಗಿದೆ. ಆಳುಪರಸರು ಪಾಂಡ್ಯ ಚಕ್ರವರ್ತಿ ಆಳುಪೇಂದ್ರ ದೇವ ಎಂಬ ಬಿರುದನ್ನು ಧರಿಸಿದ್ದು, ಅವರ ರಾಜ್ಯವು ಹೊಯ್ಸಳ ಅರಸನಾದ ವೀರ ಬಲ್ಲಾಳ III ನಿಂದ ಕಟ್ಟಕಡೆಗೆ ಸ್ವಾಧೀನ ಮಾಡಲ್ಪಟ್ಟಿತು. ಮೂರನೆಯ ವೀರ ಬಲ್ಲಾಳನು ಆಳುಪ ವಂಶದ ಚಿಕ್ಕಾಯಿತಾಯಿ ಎಂಬವಳನ್ನು ವಿವಾಹವಾದನು (Madras Epigraphical Reports 1923, para 50 and 1932, para 31) ಈ ಕಾರಣದಿಂದ ಆಳುಪರು ಜೈನ ಧರ್ಮವನ್ನು ಸ್ವೀಕರಿಸಲೂ ಕಾರಣವಾಯಿತೆನ್ನ ಬಹುದು. ಮಾತ್ರವಲ್ಲದೆ ಹೊಯ್ಸಳ ಮೂರನೆಯ ವೀರ ಬಲ್ಲಾಳನು ಪಾಂಡ್ಯ ಚಕ್ರವರ್ತಿ ಅರಿರಾಯ ಬಸವ ಶಂಕರ' ಎಂಬ ಬಿರೂಧವನ್ನು ಧರಿಸಲು ಕಾರಣವಾಯಿತು. ಪಿಟ್ಟಪೊಂಬುಚ್ಚದ ಸಾಂತಾರ ಕುಲದೊಡನಾದ ವಿವಾಹ ಸಂಬಂಧದಿಂದಲೂ ಆಳುಪರು ಜೈನಮತ ಪೋಷಕರಾಗಲು ಕಾರಣವಾಯಿತು.

13. ಶಾಸನಾದಿಗಳಲ್ಲಿ ಆಳುಪರ ಹೆಸರಿನ ಈ ಕೆಳಗಿನ ರೂಪಗಳು ದೊರೆಯುತ್ತವೆ. ಆಳುವರಸರ್, ಆಳು ಅರಸರ್, ಆಳುಪೇಂದ್ರ ಮತ್ತು ಆಳ್ವೇಂದ್ರ ಇವುಗಳು ಹೊರತಾಗಿ ಅಲೂಪವೆಂಬುದಾಗಿಯೂ ಆಲುಪವೆಂಬುದಾಗಿಯೂ ಕಂಡು ಬರುವುದಿಲ್ಲ.

15. ಈ ಕೆಳಗಿನ ಶಾಸನಗಳ ಒಕ್ಕಣೆಗಳನ್ನು ಪರಿಶೀಲಿಸುವಾಗ :–

I) ತುಳುವಂ ಕೊಂಕಣ ಮೊಯ್ದು ತಾಳ್ದಮಲೆಯಂ ಬೆಂಕೊಣ್ಡು (E. C. Vol. III Date, 1012 A. D.)

II ತುಳುದೇಶಂ ಚಂಗ ಭೂಪಾವನಿನೆಗಳ್ದ ಬಯಲು ನಾಡು ಕೊಂಗೊರ್ವಿ ಪಾಳಸ್ತಳ ಮುದ್ಯತು ಚೋಳ ಭೂಮಂಡಳ...(E. C. Vol V Date : 1155 A. D.)

III ತುಳುದೇಶ ಚಕ್ರಂಗೊಟ್ಟಂ ತಳವನ ಪುರ ಮುಚ್ಚಂಗಿ ಕೋಳಾಲ ವೇಳುಂ ಮಲೆ ವಲ್ಲೂರ್ಕಂಚಿಕಣರ್ವಸುವ ಹಳಿಯ ಘಟ್ಟಂ ಬಯಲ್ನಾಡು ನೀಳಾಚಳದುರ್ಗಂ (E. C. Vol V Dato: A. D. 1173)

IV ತುಳುದೇಶಂ ಚಕ್ರಗೊಟ್ಟಂ ತಳವನ ಪುರ ಮುಚ್ಚಂಗಿ ಕೋಳಾಲ ವೇಳುಂ.... ...(E. C. Vol V Date 1160 A.D.)

V ಶ್ರೀಮತ್ತ್ರಿಭುವನಮಲ್ಲ ಬಲ್ಲಾಳಹೊಯ್ಸಳ ಕೊಂಕನಾಡಾಳ್ವಮೇಡ ಬಯಲ್ನಾಡ ಕಾಡಂ ಸಾವಿ ಮಲೆಯಿಂದೊಳಗಾದ ಭೂಮಿಯೋಮಂ........(E.C. Vol Date. A. D. 1101)

VI ಶ್ರೀಮತ್ರಿಭುವನಮಲ್ಲ ವಿನಯಾದಿತ್ಯ ಪೊಯ್ಸಳಂ ಕೊಂಕಣದಾಳ್ವಖೇಡದ ಬಯಲ್ನಾಡ ತಳೆಕಾಡ ಸಾವಿಮಲೆಯಿನೊಳಗಾದ ಭೂಮಿಯೆಲ್ಲಿಮಂ (E. C. Vol VI Date 1103 A. D)

VII ಭುಜಬಳವೀರ ಗಂಗ ಶ್ರೀವಿಷ್ಣು ವರ್ಧನ ಹೊಯ್ಸಳ ಪ್ರತಾಪನಾರಸಿಂಗದೇವರು ಮೂಡಲು ನಂಗಲಿ ತೆಂಕರಾಮೇಶ್ವರ ಪಡುವಲಾಳ್ವರಖೇಡ ಬಡಗ ಹೆದ್ದೊರೆ ಪರಿಯಂತಂ ಗಂಗವಾಡಿ 96,000 ಮಂ (E. C. Vol V—ಅರಸಿಕೆರೆ Date 1143 A D.)

VIII ಶ್ರೀಮತ್ರಿಭುವನ ಮಲ್ಲ ತಳಕಾಡುಗೊಂಡ ಭುಜಬಳ ಪ್ರತಾಪ ಹೊಯ್ಸಳ ನರಸಿಂಗದೇವ ಪೃಥಿವೀರಾಜ್ಯಂ ಗಂಗವಾಡಿತೊಂಭತ್ತಾರು ಸಾವಿರಮುಂ ನೊಲಂಬವಾಡಿಮೂವತ್ತಿಚ್ಛಾಸಿರಮುಂ ಬನವಸೆ ಪನ್ನಿಚ್ಛಾಸಿರಮು ಕಡಂಬಳಿಕೆ ಸಾಯಿರಮುಂ ಮೂಡಲು ನಂಗಲಿಯುಘಟ್ಟಮು ತೆಂಕಲು ಕೊಂಗು ಪಡುವಲಾಳ್ವಖೇಡ ಬಡಗಲು ಹೆದ್ದೊರೆ ಮರ್ಯಾದೆಯಾಗಿ(E. C. Vol V 1228 A. D.)

IX ಚಕ್ರವರ್ತಿ ಹೊಯ್ಸಳ ವೀರ ಬಲ್ಲಾಳದೇವರು ಮೂಡಲುನಂಗಲಿ ತೆಂಕಲುಕೊಂಗು ಪಡುವಲಾಳ್ವಖೇಡಂ ಬಡಗಲು ಹೆದ್ದೊರೆಯಾದಿಯಾಗಿ ಪಲವು ದುರ್ಗಂಗಳಂ ಸಾಧಿಸಿ (E C. Vol V Date: 1200)

X ಪಾಳೇಳ್ವನಂ ಭಸ್ಮಮಾಗುರಿದಿಂತೆಯ್ದಿನೊಳಂಬವಾಡಿ ಬನವಾಸೀ ಮಂಡಳಂ ಪೂಳದೆ ಕೆರೆದಂತಾದುದು ಗುತ್ತಿ ಪಾತ್ತಿ ಪೊಗಿದತ್ತಾ ಪಾನುಗಲು ಖೇಡ ದಾಳ್ವರಖೇಡಂ ಪ್ರಬಳ ಪ್ರತಾಪ ಶಿಖಿಯಿಂ ಬಲ್ಲಾಳ ಭೂಪಾಳಕ(E. C. Vol. V Dated: 1178 A. D.)

ಮೇಲಿನ ಉದ್ಧರಣೆಗಳಿಂದ ಪಶ್ಚಿಮಕರಾವಳಿಯಲ್ಲಿ ಆಳ್ವಖೇಡವು (ತುಳುನಾಡು) ಪ್ರಧಾನ ದೇಶವೆಂಬುದಾಗಿಯೂ ಅದು ಹೆಚ್ಚು ಕಡಿಮೆ ಸ್ವತಂತ್ರ ದೇಶವಾಗಿತ್ತೆಂಬುದಾಗಿಯೂ ಅದರ ಮೇರೆಯು ಕೊಂಕಣದಿಂದ ದಕ್ಷಿಣದಲ್ಲಿ ಮಲೆಯಾಳದ ವರೆಗಿತ್ತೆಂಬುದಾಗಿಯೂ, ಹೈವ (ಹೈಗ) ದೇಶವಿದ್ದರೂ ಅದು ಸ್ವತಂತ್ರ ದೇಶವಾಗಿರದೆ ಆಳ್ವಖೇಡದ ಭಾಗವಾಗಿದ್ದಿರಬೇಕೆಂಬುದಾಗಿಯೂ, (ಕಾರಣ ತುಳುವಂ ಕೊಂಕಣ ಎಂದಿರುವುದರಿಂದ), ಕೊಂಕಣವೆಂದರೆ ಗೋವೆಯಿಂದ ಗೋಕರ್ಣದ ವರೆಗಿನ ಭೂಪ್ರದೇಶವೆಂಬುದಾಗಿಯೂ ತಿಳಿಯುವವಕಾಶವಿದೆ.

16. ಬಸರೂರು ಶಕ 1077ರ ಕವಿಯಾಳುಪೇಂದ್ರ ದೇವನ ಶಾಸನದಲ್ಲಿ ಬಸುರೆಪುರವೆಂದು ಕರೆಯಲ್ಪಟ್ಟಿದೆ. ಈ ಶಾಸನದಲ್ಲಿ 'ಹೊಸಪಟ್ಟಣ ಬಸುರೆಪುರದ' ಎಂದಿರುವುದರಿಂದ ಈ ಪಟ್ಟಣವು ಬಹಳ ಪುರಾತನವಾದುದೆಂದು ಹೇಳುವುದು ಕಷ್ಟ

(S. I. I. Vol VII No. 393) ಕಾರ್ಕಳವು ವೀರಪಾಂಡ್ಯಪ್ಪೊಡೆಯರ ಶಾಸನದಲ್ಲಿ 'ಪಾಂಡ್ಯನಗರಿ' ಎಂಬುದಾಗಿ ಕರೆಯಲ್ಪಟ್ಟಿದೆ. (S. I. I. Vol. VII No. 248). ಮಂಗಳೂರಿನ ಕದಿರೆಯು ಶಾಸನವೊಂದರಲ್ಲಿ 'ಕದಳಿ' ಎಂಬುದಾಗಿ ಬರೆಯಲ್ಪಟ್ಟಿದೆ 'ಕದಳಿಯ ಶ್ರೀಮಂಜುನಾಥ' (S. I. I. Vol VII No. 189) ತುಳುವದ ಆದಿಯ ರಾಜಧಾನಿಯಾದ ಉದಯಾವರವು (ಉಡುಪಿ ಬಳಿಯ) 'ಒಡೆವುರ' ಎಂಬುದಾಗಿ ಮೊದಲ ಶಾಸನಗಳಲ್ಲಿ ಕರೆಯಲ್ಪಟ್ಟಿದೆ. (A R. 104 for 1901; S. I. I. Vol VII No 283)

17 ತುಳುವದ ರಾಜಧಾನಿಗಳಲ್ಲೊಂದಾದ ಬಾರಕೂರು ಪಟ್ಟಣವು ಬಾರಕನೂರು, ಬಾರಕನ್ಯಾಪುರ, ಬಾರಕನೂಪುರ, ಬಾರಹಕನ್ಯಾಪುರ, ಬಾರಕೂರ್ರು ಎಂಬುದಾಗಿ ಶಾಸನಗಳಲ್ಲಿ ಕಂಡುಬರುತ್ತದೆ. (S. I. I. Vol. VII, Vol. IX part I & II, K. I. Vol. (I) E C. Vol.5 ಮತ್ತು 6) ಬಾರಕನೂರು ಎಂಬುದೇ ಬಾರಕೂರಾಗಿ ರೂಪಾಂತರವಾಗಿರಬೇಕು. 'ನೂರು' ಎಂಬುದರ ಅರ್ಥವನ್ನು ಮಾಡುವುದು ಕಷ್ಟ. ಇಂತಹ ಇತರ ಕೆಲವು ಹೆಸರುಗಳು ಇವೆ. ಕೊಡಗನೂರು, ಮೂಗೂರುನೂರು, ತುರಕಾರನೂರು, ಕೊಳಗನೂರು (A.R.No.75 of 1901, S. I. I. Vol. VII No 389, K.I. Vol I No.46 of 1939 - 40, 'ಬಾರಹಕನ್ಯಾ ಪುರ' (ಬಾರ ಕನ್ಯಾಪುರ) ಎಂಬ ಹೆಸರು ಬಾರಕೂರಿಗೆ ಪ್ರಥಮವಾಗಿ ಪಾಂಡ್ಯ ಚಕ್ರವರ್ತಿ ಭುಜಬಳ ಕವಿಯಾಳ್ಪೇಂದ್ರ ದೇವರ ಶಕ 1077 ರ ಶಾಸನದಲ್ಲಿ ತಿಳಿದು ಬರುತ್ತದೆ. ಈ ಹೆಸರು ರಾಜನ ಅನುಮತಿಯಿಂದಲೇ ಶಾಸನಗಳಲ್ಲಿ ಕೆತ್ತಲ್ಪಟ್ಟಿರ ಬೇಕು.

(ಬಾರಹವೆಂಬುದು ದ್ವಾದಶದ ಪ್ರಾಕೃತ ರೂಪ; 'ಬಾರ' ಎಂದರೆ ಹದಿನೆರಡು; 'ಬಾರ'ವು ದ್ವಾರದ ತತ್ಭವವೂ ಅಹುದು; ಆದುದರಿಂದ ದ್ವಾರಕದ ತದ್ಭವವು ಬಾರಕವಾಗ ಬಹುದು. Kittel Dictionary ಪುಟಗಳು 1106-817 ಬಾರಕೂರಿನ ಸ್ಥಳ ಪುರಾಣದಲ್ಲಿ 'ಘೂರಕೂಲ'ವೆಂಬ ಹೆಸರಿದೆ. ಇದು ಅರ್ವಾಚೀನ ಹೆಸರೆಂಬುದಾಗಿ ತಿಳಿಯ ಬಹುದು)

18. ತುಳುನಾಡಿನಲ್ಲಿ ಪಾಂಡ್ಯೇಶ್ವರ, ಪಾಂಡೇಶ್ವರ—ಎಂಬುದಾಗಿರುವ ಊರ ಹೆಸರಾಗಲೀ, ದೈವತದ ಹೆಸರಾಗಲೀ ಮಹಾಭಾರತದ ಪಾಂಡವರಿಗೆ ಸಂಬಂಧಿಸಿದುದಲ್ಲ. ಅವು ಆಳುಪರಸರಲ್ಲಿ ಪಾಂಡ್ಯನಾಮಧೇಯವಾದ ಅರಸರಿಂದ ಬಂದುದಾಗಿದೆ ಅಂತೆಯೇ 'ಅರ್ಜುನಪುರ'ವೆಂಬುದು ವಿಜಯ ನಗರದ ಮಲ್ಲಿಕಾರ್ಜುನ ಮಹಾರಾಯನ ಹೆಸರಿನಿಂದ ಬಂದುದಾಗಿದೆ. ಶಕ ವರುಷ 1282ನೆಯ ಶ್ರೀ ವೀರ

ಬುಕ್ಕಣ್ಣ ಒಡೆಯರ ಕಾಲದ ಬಾರಕೂರ ಶಾಸನ ಒಂದರಲ್ಲಿ 'ಬುಕ್ಕ ಪಟ್ಟಣ'ದ ಉಲ್ಲೇಖವಿದೆ. ಮುಂದಿನ ಶಾಸನಗಳಲ್ಲಿ ಅದು ಬೊಕ ಪಟ್ಟಣವಾಗಿಯೂ ಬರೆಯುಲ್ಪಟ್ಟಿದೆ. ಇದು ಈಗ ಅಜ್ಞಾನದಿಂದಲೋ ಪುರಾಣಕತೆಯಿಂದಲೋ ಬಕಪಟ್ಟಣವಾಗಿ ಬಕಾಸುರನನ್ನು ವಧಿಸಿದ ಸ್ಥಳವೆಂಬುದಾಗಿ ತಿಳಿಯಲ್ಪಟ್ಟಿದೆ. (S.I.I Vol VII No.329 A.R.No.138 of 1901) ಬಾರಕೂರಿನ ಹತ್ತಿರದಲ್ಲೇ ಭಂಡಿಮಠವಿದೆ.

19. ವಿಜಯನಗರ ಸ್ಥಾಪನೆಯಾದಂದಿನಿಂದ ತುಳುನಾಡನ್ನು ಪ್ರಾಮುಖ್ಯವಾದ ಎರಡು ರಾಜ್ಯಗಳಾಗಿ (ಪ್ರಾಂತ್ಯಗಳಾಗಿ) ವಿಭಾಗಿಸಿ ಅತ್ಯಂತ ಶಿಸ್ತು ಕ್ರಮಗಳಿಂದ ಆಳಲು ಪ್ರಾರಂಭವಾಯಿತು- ಇವು ಬಾರಕೂರು ಮತ್ತು ಮಂಗಳೂರು ರಾಜ್ಯಗಳು. ಕೆಲವೊಮ್ಮೆ ಕಡಬ ರಾಜ್ಯವೂ ಒಂದು ಪ್ರಾಂತ್ಯವಾಗಿತ್ತು- ಈ ಪ್ರಾಂತ್ಯ ಯಾ ರಾಜ್ಯದಲ್ಲಿ ವಿಜಯನಗರದ ಮಹಾರಾಜನ ಪ್ರತಿನಿಧಿಗಳು ಮಹಾಮಂಡಲೇಶ್ವರ, ಪ್ರಧಾನ, ಮಹಾ ಪ್ರಧಾನ, ದಣ್ಣಾಯಕ, ಒಡೆಯ ಎಂಬ ಹೆಸರುಗಳಿಂದ ರಾಜ್ಯ ಪರಿಪಾಲನೆಯನ್ನು ಮಾಡುತ್ತಿದ್ದರು. ಕೆಲವೊಮ್ಮೆ ಬಾರಕೂರು ಮತ್ತು ಮಂಗಳೂರು ರಾಜ್ಯಗಳಿಗೆ ಒಬ್ಬನೇ ರಾಜ್ಯಪಾಲನಿದ್ದುದುಂಟು. ಅಂತಹ ಸಂದರ್ಭದಲ್ಲಿ ಬಾರಕೂರೇ ರಾಜ್ಯಧಾನಿಯಾಗಿದ್ದುದು ಹೆಚ್ಚಾಗಿ ಕಂಡು ಬರುತ್ತದೆ. ಮಾತ್ರವಲ್ಲದೆ ಬಾರಕೂರು ರಾಜ್ಯವೆಂಬುದು 'ತುಳು ರಾಜ್ಯ'ವೆಂಬುದಾಗಿಯೇ ಪರಿಗಣಿಸಲ್ಪಡುತ್ತಿತ್ತು. 'ಬಾರಕೂರು ತುಳು ರಾಜ್ಯ' (S.I.I.Vol VII Nos. 355, 350, 347, 344, 340, 311, 310, 309,) Karnatak Inscriptions Volume I—ಎಂಬ ಗ್ರಂಥದ ಮುನ್ನುಡಿ ಭಾಗದ ಪುಟ 11 ರಲ್ಲಿ ತುಳು ರಾಜ್ಯವೆಂಬುದು ಕೆಲವೊಮ್ಮೆ ಮಂಗಳೂರೆಂಬುದಾಗಿಯೂ ಕರೆಯಲ್ಪಡುತ್ತಿತ್ತು ಎಂದು ಬರೆದುದು ಅಷ್ಟೊಂದು ಸಮಂಜಸವಲ್ಲ. ಇದಕ್ಕೆ ಈ ಗ್ರಂಥದಲ್ಲೇ ಉದಾಹರಣೆಗಳಿವೆ (K.I.Vol.I Nos. 37, 52, 53, 55, 58,59) ಹಿಂದಣ ಆಳ್ವಖೇಡವು ವಿಜಯನಗರದ ಆಧಿಪತ್ಯದಲ್ಲಿ ಕೊಂಕಣ, ಹೈವ, ಭಟ್ಕಳ, ಬಾರಕೂರು ಮತ್ತು ಮಂಗಳೂರು ರಾಜ್ಯಗಳಾಗಿ ವಿಭಾಗಿಸಲ್ಪಟ್ಟಿತ್ತು ಇಲ್ಲಿ ಕೊಂಕಣದ ರಾಜಧಾನಿಯು ಹೊನ್ನಾವರವಾಗಿಯೂ (ಸುವರ್ಣ ಪುರ), ಹೈವದ ರಾಜಧಾನಿಯು ಸುವರ್ಣಪುರವೇ ಆಗಿಯೂ (S.I.I Vol.VII No.207; (ಸುವರ್ಣ ಪುರಿಯಿಂದ ಅಲಂಕೃತಂ ಆದ ಹೈವ ಕೊಂಕಣ ರಾಜ್ಯಮಂ), ಭಟ್ಕಳದ ರಾಜಧಾನಿಯು ಹಾಡುವಳ್ಳಿ ಯಾ ಸಂಗೀತಪುರವಾಗಿಯೂ ಇದ್ದುದು ಶಾಸನಗಳಿಂದ ತಿಳಿದು ಬರುತ್ತದೆ. ನಗಿರೆ ರಾಜ್ಯವು ಪ್ರಾಮುಖ್ಯತೆಗೆ ಬರುವ ತನಕ ತುಳುರಾಜ್ಯದ

ಪ್ರಭಾವವು ಕೊಂಕಣದ ವರೆಗೂ ಬೀಳುತ್ತಿತ್ತು ಎಂದೇ ಹೇಳ ಬೇಕಾಗುತ್ತದೆ. ಕಾಯಿಕಿಣಿಯ (ಭಟ್ಕಳ) ಶಾಸನವೊಂದು (A. D. 1417) ತುಳು ರಾಜ್ಯದ ಭೌಗೋಳಿಕ ಸ್ಥಾನವನ್ನು ಹೀಗೆ ವಿವರಿಸುತ್ತದೆ. "ವಾರಾಸಿ ಬಳಸಿಂದ ಶೋಭಿಸುವುದೀ ಜಂಬೂ ಮಹಾದ್ವೀಪಮುಂ ಮೇರುಕ್ಷ್ಮಾಧರ ಮಧ್ಯಮಂತದರ ತೆಂಕಲ್ಭಾರತಕ್ಷೇತ್ರಮಂ ತಾರಾವಮಾವಳಿಯಂ ನದೀ ನದಗಳಿಂ ಕಾಸಾರ ಸುಕ್ಷೇತ್ರದಿಂದಾಯ್ಯಾರ್ಯಖಂಡ ಮದೊಪ್ಪಿ ತೋರ್ಪುದದರೊಳ್ಬ ತೌಳ ವಾ ದೇಶಮಂ || ಅದರೊಳ್ನಂದನ ಚೂತ,ಚಂಪಕ ಮಶೋಕಕುಳುಂಗು ಚೆಂದೆಂಗು ಕುಂದದವಲ್ಲೀ ಬಕುಳಾಭಪಾಟಲಗಳಿಂ ನೀರೇಜ ಷಂಡಂಗಳಿ ಮದ ವದ್ಭೃಂಗ ಸುಕಾಳಿಯಿಂ ಕಳವು ಸುಕ್ಷೇತ್ರಂಗಳಿಂ ದಿಕ್ಸು ಡೋಂಟದ ಚೆಲುವಿಂ ಕರರಯ್ಯ ಮಪ್ಪ ವಿಷಯಂ ಕಾಇಕಣಿ ನಾಮಮುಂ" ಭಟಕಳ ರಾಜ್ಯವು ತುಳುರಾಜ್ಯದ ಭಾಗವೇ ಎಂಬುದು ಇದರಿಂದ ವಿದಿತವಾಗುವುದು. ಹದಿನೈದನೆಯ ಶತಮಾನದ ಮಧ್ಯಕಾಲದಿಂದ ಬಂತೂ ಹಯಿವೆ, ತುಳು, ಕೊಂಕಣ ರಾಜ್ಯಗಳನ್ನು ಮೇಲಧಿಕಾರಿಯೊಬ್ಬನು ಹೊನ್ನಾವರದಲ್ಲಿ ಕೇಂದ್ರ ಸ್ಥಾನವಾಗಿಯಾಗಲೀ, ಅನಂತರ ನಗಿರೆಯು ಕೇಂದ್ರವಾಗಿಯಾಗಲೀ ಇದ್ದು ರಾಜ್ಯ ಭಾರವನ್ನು ನಡೆಸುವ ಕ್ರಮವು ಜಾರಿಗೆ ಬಂತು ಎಂದ ಹೇಳಬಹುದು. ನಗಿರೆಯ ಅರಸರು ತುಳು, ಹೈವ, ಕೊಂಕಣ ರಾಜ್ಯಗಳ ಅಧಿಪತಿಗಳೆಂಬುದಾಗಿ ಕರೆಯಲ್ಪಟ್ಟುದು ಶಕ 1394 ಅನಂತರದಿಂದಲೇ ಎಂದು ಹೇಳಬೇಕಾಗುತ್ತದೆ. ಅಂತೂ ತುಳು,ಹೈವ, ಕೊಂಕಣ, ನಗಿರಗಳನ್ನೊಳಗೊಂಡ ಪ್ರದೇಶವು ರಾಜಕೀಯದ ದೃಷ್ಟಿಯಿಂದಾಗಲೀ, ಸಾಂಸ್ಕೃತಿಕ ದೃಷ್ಟಿಯಿಂದಾಗಲೀ ಒಂದು ವಿಶಿಷ್ಟ ಘಟಕವಾಯಿತೆಂಬುದಾಗಿ ಹೇಳಬಹುದು. ಕೃಷ್ಣದೇವರಾಯನ ಕಾಲದಲ್ಲಂತೂ ಈ ಪ್ರದೇಶಗಳು ಒಂದು ಪ್ರಬಲ ರಾಜಕೀಯ ವಿಶಿಷ್ಟ ಭಾಗವಾಯಿತು. ಕೆಳಗಿನ ದೃಷ್ಟಾಂತಗಳಿಂದ ವಿಷಯವು ಮನನವಾಗಬಲ್ಲುದು.

1) ಶ್ರೀ ಮನ್ಮಹಾ ಪ್ರಧಾನ ಅಂತಪ್ಪ ಒಡೆಯರು ಹೊನ್ನಾವುರದ ರಾಜಧಾನಿಯಲ್ಲಿದ್ದು ಹಯಿವೆ ತುಳು ಕೊಂಕಣ ರಾಜ್ಯಂಗಳನು ಪ್ರತಿಪಾಲಿಸ್ತಂಲ್ಲಿರ್ದಂದಿನ.........(Kaikini Ins A. D. 1438. K. I. Vol.I.56 of 1939—40)

2) ಶ್ರೀ ಮನ್ಮಹಾ ಮಂಡಲೇಶ್ವರ ರಿಪುಕಟಕ ಸೂರೆಕಾರ ಸಿದ್ಧ ಸಿಂಹಾಸನಾಧೀಶ್ವರ ಸಾಳುವ ಮಲ್ಲಿ ರಾಜೇಂದ್ರ ನಳಿಯ ದೇವರಸ ಒಡೆಯರು ನಗಿರು ತುಳು ಹಯಿವೆ ರಾಜ್ಯವಂ ಪ್ರತಿಪಾಲಿಸುತಂ (Ibid No.62 of 1939-40 date A.D.1481)

3) ಮಲೆಯ ರಾಯ ತ್ರಿಭುವನ ಕಠಾರಿ........ಸಾಳುವ ಮಲ್ಲಿ ರಾಜೇಂದ್ರ.... ದೇವರಸವೊಡೆಯರೊಪ್ಪು ತಿರ್ದರದಂತೆಂದೊಡೆ ನಗರಿ ಸಿಂಹಾಸನಾಧೀಶ್ವರಂ ತುಳು ಹಯಿವೆ ರಾಜ್ಯಮಂ ಪ್ರತಿಪಾಲಿಸುತಿರ್ದ (Ibid No 63 of 1939-40 date: 14ರ1)

(4) ಮಲೆರಾಯ ತ್ರಿಭುವನ ಕಠಾರಿ........................ರಾಜೇಂದ್ರನಳಿಯ ದೇವರಸ ಒಡೆಯ ರೊಪ್ಪು ತಿರ್ದರದಂತೆಂದೊಡೇ ನಗಿರ ಸಿಂಹಾಸ ನಾಧೀಶನಾಗಿ ತುಳು ಹೈವ ರಾಜ್ಯಮಂಪ್ರತಿಪಾಲಿಸುತಿರ್ದ........(Ibid No. 64 of 1939-40; date : 1484)

(5) ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಮಂಡಲೇಶ್ವರಂ ಸಾಳುವ ದೇವರಸ ವೊಡೆಯರು ನಗಿರರಾಜೆಯ ಹಯಿವೆ ತುಳು ಕೊಂಕಣ ಮುಂತಾದ ರಾಜ್ಯನನ್ನು ಪ್ರತಿಪಾಲಿಸುತಂ.... (Ibid No. 67 of 1939-40; date : 1494)

(6) ಸ್ವಸ್ತಿ ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀವೀರ ಪ್ರತಾಪ ಕೃಷ್ಣರಾಯ ಮಹಾರಾಯರ ವಿಜಯ ಸಾಮ್ರಾಜ್ಯಾಭ್ಯುದಯದಲೂ ಶ್ರೀಮನ್ಮಹಾಮಂಡಲೇಶ್ವರಂ ಯಿಂಮಡಿ ದೇವರಾಯವೊಡೆಯರು ನಗಿರರಾಜ್ಯ ಹಯಿವೆ ತುಳು ಕೊಂಕಣ ಮುಂತಾದ ರಾಜ್ಯವನು ಪ್ರತಿಪಾಲಿಸುತ್ತಿದಂದಿನ.... (Ibid No. 68 of 1939-40; date A. D. 1522)

(7) ಶ್ರೀಮನ್ಮಹಾ ಮಂಡಲೇಶ್ವರಂ ಯಿಮ್ಮಡಿ ದೇವರಾಯಿವೊಡೆಯರು ನಗಿರರಾಜ್ಯ ಹೈವ ತುಳು ಕೊಂಕಣ ಮುಂತಾದ ರಾಜ್ಯವನು ಪ್ರತಿಪಾಲಿಸುತಿರ್ದಂ ದಿನ...(Ibid No. 69 of 1939-40; date A D. 1522)

(8) ಶಕವರ್ಷ 1309 ಸಂದ 10ನೆಯ ವರ್ತಮಾನ............ವೀರಹರಿಹರ ಮಹಾರಾಯರ ಕಾಲದ ಬಾರಕೂರಿನ ಶಿಲಾಶಾಸನ ಒಂದರಲ್ಲಿ ಮಲ್ಲಪ್ಪ ಒಡೆಯರು ಬಾರಕೂರು ರಾಜ್ಯವೊಳಿರ್ದು (ರಾಜಧಾನಿ?) ತುಳುಹೈವೆ ಕೊಂಕಣ ರಾಜ್ಯಗಳನ್ನು ಪ್ರತಿಪಾಲಿಸುತ್ತಿದ್ದರೆಂದಿದೆ (S. I. I. Vol VII No. 347) ಅಂತೆಯೇ ಶಕ 1318ರ ಶಾಸನದಲ್ಲಿ ಮಲ್ಲಪ್ಪ ಒಡೆಯರು ತುಳು ಹಯಿವೆ ರಾಜ್ಯವ ಪಾಲಿಸುತ್ತಿದ್ದರೆಂದೂ, ಶಕ 131ಳರ ಶಾಸನದಲ್ಲಿ ಮಹಾ ಪ್ರಧಾನ ಸಿಂಗಣ್ಣ ಒಡೆಯರು ಬಾರಕೂರು ರಾಜಧಾನಿಯೊಳಿರ್ದು ತುಳು ಮಲಹೆ ರಾಜ್ಯಗಳನ್ನು ಪ್ರತಿಪಾಲಿಸುತ್ತಿದ್ದರೆಂದೂ ಇದೆ. (Ibid Nos. 342 & 344)

(9) ಬಸ್ತಿಮಾಸ್ಕಿ ಮತ್ತು ಕಯಕಿಣಿ ಶಾಸನಗಳು (ಭಟ್ಕಳ) [Karnatak Ins Volume III Part I Nos. 72 & 74]

(10) ಭಟ್ಕಳದ ಮಾವಳ್ಳಿ ಶಾಸನದಲ್ಲಿ (A. D. 1547) ಚಂದ್ರ ವಂಶದ ಮಹಾಮಂಡಲೇಶ್ವರ ಸಾಳುವ ಕೃಷ್ಣರಾಜ ಒಡೆಯನು ತುಳುದೇಶದ ಗೆರಸೊಪ್ಪೆಯು ರಾಜಧಾನಿಯಾಗಿ ಅಲ್ಲಿಯ ನೆಲೆ ವೀಡಿನಲ್ಲಿ ನಗಿರೆ ಹೈವ, ತುಳು ಮತ್ತು ಕೊಂಕಣ ರಾಜ್ಯಗಳನ್ನು ಆಳುತ್ತಿದ್ದನೆಂದಿದೆ. "ಅಸ್ತಿ ತೌಳವದೇಶೇಸ್ಮಿಂ ನಗರೀ ಕರ್ತ್ತಿ ಭವತ್ಯನೇಕೇ ಮಹೀಪಾಲಾ ಜಾತಾಃ ಸೀತಾಂಶು ವೌಶ ಜಾಃ |.... ............... ಮಹಾನುಭಾವನಾದ ಸಾಳುವ ಕೃಷ್ಣದೇವರಾಯ ಒಡೆಯರು ನಗಿರೆ ರಾಜ್ಯ ಹೈವ ತುಳು ಕೊಂಕಣ ಮುಂತಾದ ರಾಜ್ಯಮನು........ಪ್ರತಿಪಾಲಿಸುತಂ ಗೆರೆಸೊಪ್ಪೆಯ ರಾಜಧಾನಿಯ್ಯ ನೆಲೆವೀಡಿನೊಳಿರುತಿದ್ದಂದು" (K.I. Vol. III Part I No 79 of 1939-40 date: 1547 A.D)

20. ತುಳುಭಾಷೆಯು ಭಟ್ಕಳದಲ್ಲೂ ಪ್ರಚಾರದಲ್ಲಿತ್ತೆಂಬುದು ಶಿರಾಲಿಯಲ್ಲಿ ದೊರಕಿದ ಶಕ ವರ್ಷ 1278ನೇ ವೀರಕುಲ ಶೇಖರ ದೇವರಸನ (ಆಳುವರಸು) ಶಾಸನದಿಂದ ತಿಳಿದು ಬರುತ್ತದೆ "ಎರಡು ಭಾಷೆಯ ಗ್ರಾಮ ಜನರಿಂಗೆ ಅರಸರು ಆಡುವ ಬಿಡಾರವನು ಆಚಂದ್ರಾರ್ಕವಾಗಿ ಪುಕಾ ಇದೆವು" It is interesting to note that the people are referred to as talking two languages, evidently the Tulu and Kannada (K.I. Vol III Part I No 47 of 1940–41)

21. ಕ್ರಿ. ಶ. 1586ರಿಂದ ಕ್ರಿ. ಶ. 1614ರ ವರೆಗೆ ಪೆನುಕೊಂಡೆಯಲ್ಲಿ ಸಿಂಹಾಸನಾರೂಢನಾದ ವೀರಪ್ರತಾಪ ಶ್ರೀ ವೀರವೆಂಕಟಪತಿ ದೇವ ಮಹಾರಾಜನು ಉಡುಪಿನ ಶ್ರೀಕೃಷ್ಣ ದೇಗುಲದ ಜೀರ್ಣೋದ್ಧಾರದ ಕುರಿತಾಗಿ ಕ್ರಿ. ಶ. 1614ರಲ್ಲಿ ಬರೆಸಿದ ಶಿಲಾಶಾಸನದಲ್ಲಿ ಹೀಗಿದೆ. "....ಸ್ವಸ್ತಿ ಜಯಾಭ್ಯುದಯ ಶಾ| ಶ| ವರ್ಷ | ನಾ| 1536 ಯಾರದ ವೈ| ಶು | ೧೨ರಲ್ಲೂ | ಶ್ರೀ ಮದ್ರಾಜಾಧಿರಾಜ ರಾಜ ಪರಮೇಶ್ವರ ಶ್ರೀ ವೀರ ಪ್ರತಾಪ ಶ್ರೀ ವೀರ ವೆಂಕಟಪತಿ ದೇವಮಹಾರಾಯರು ಪೆನುಕೊಂಡೆಯಲ್ಲಿ ಸಿಂಹಾಸನಸ್ಥರಾಗಿ ಸಕಲ ರಾಜ್ಯವನ್ನೂ ಪ್ರತಿಪಾಲಿಸುತ್ತಾ ಇದ್ದ ಕಾಲದಲ್ಲಿ ಅವರ ಕೆಳದಿ | ವೆಂಕಟಪ್ಪ ನಾಯಕರೂ ತುಳು ರಾಜ್ಯ, ಮಲೆರಾಜ್ಯಗಳನ್ನು ಸದ್ಧರ್ಮದಿಂದ ಆಳುವ ಕಾಲ (×)ದಲ್ಲಿ ಶ್ರೀ....ಜಕಾಚಾರ್ಯ ಪದವಾ (ಕ್ಯ×) ಪ್ರಮಾಗ್ನರಾದ ಶ್ರೀ ಮದ್ವೈಷ್ಣವ ಸಿದ್ಧಾಂ (ತ) ಪ್ರತಿಷ್ಠಾಪನಾಚಾರ್ಯರಾದ ಶ್ರೀ ಹಯಗ್ರೀವ ದೇವದೇವಪಾದ ಪದ್ಮಾರಾಧಕ ಶ್ರೀ ಮಧ್ವಾದಿ

ರಾಜ ತೀರ್ಥ ಶ್ರೀಪಾದಂಗಳವರ ಕರಕಮಲ ಸಂಜಾತರಾದ ಶ್ರೀಮದ್ವೇದ ವೇದ್ಯ ತೀರ್ಥ ಶ್ರೀ ಪಾದಂಗಳವರು ತಮ್ಮ ಪೂಜಾಪರ್ಯಾಯದಲ್ಲಿ ಉಡುಪಿನ ಶ್ರೀ ಕೃಷ್ಣ ದೇವರಲ್ಲೂ ಮೊದಲೇ ಮಠದ ಕೆಲಸವಾಗಿ ಇರಲಾಗಿ ಶ್ರೀ ಕೃಷ್ಣ ದೇವ ರೂನೂ ಹೊರಮಂಟಪಕ್ಕೆ ಬಿಜಮಾಡಿಸಿ, ಆ ಮೇಲೆ ಎರಡು ನೆಲೆಯಾಗಿ ತಾಮ್ರದ ಹೊದಿಕೆಯನ್ನು ಮಾಡಿಸಿ ಆ ಮೇಲೆ ಕಲಶಾಸ್ಥಾಪನೆಯನ್ನು ಮಾಡಿಸಿ ಕೆಳದಿ ವೆಂಕಪ್ಪ ನಾಯಕರ ಮುದ್ರೆಯಾಗಿ ಚಿಂನ ಭಂಡಾರದ ಓಬರ ಮಗಳ ಮಕ್ಕಳು ರಾಮಕೃಷ್ಣಪ್ಪ ಒಡೆಯರೂ ಬಾರಕೂರ ಸಿಂಹಾಸನವನ್ನಾಳುವ ಯೊಹಸಮಯ ದಲ್ಲಿ ಅವರ ಅನುಮತಿ ಇಂದ ತಥಾ........ತಿಥಿಯಲ್ಲಿ ವಿಧ್ಯುಕ್ತ ಪ್ರಕಾರದಿಂದ ಶ್ರೀ ಕೃಷ್ಣದೇವರನೂ ಪುನಃ ಪ್ರತಿಷ್ಟೆಯನೂ ಮಾಡಿದ ಕಾಲದಲ್ಲಿ ವೆಂಕಟಪತಿದೇವ ಮಹಾರಾಯರ ನಿರೂಪದಿಂದ ಕೆಳದಿಯ ವೆಂಕಪ್ಪನಾಯಕರೂ ಶ್ರೀಕೃಷ್ಣದೇವರ ಅಮೃತಪಡಿ ನಂದಾದೀಪಕ್ಕೆ ಬಾರಕೂರ ರಾಜ್ಯಕ್ಕೆ ಸಲುವ ನಾಲ್ವತ್ತು ನಾಡೊಳ ಗಣ ಹೂವಿನ ಕೆರೆ ಗ್ರಾಮುವನ್ನು ತತ್ಸವಂತ್ಸರ ಕಾರ್ತಿಕ ಶು॥ ೧೫ । ಸೋಮವಾರ ದ ಪುಣ್ಯಕಾಲದಲ್ಲಿ ಮರುಡೇಶ್ವರನ ಸನ್ನಿಧಿಯಲ್ಲಿ ಸಹಿರಣ್ಯೋದಕ ದಾನಾಧಾರಾ ಪೂರ್ವಕವಾಗಿ ಬಾರಕೂರ ರಾಜ್ಯಕೆ ಸಲುವ ನಾಲ್ವತ್ತ ನಾಡೊಳಗಣ ಕೆಳಗಣ ಹೂವಿನ ಕೆರೆ ಗ್ರಾಮಕ್ಕೆ ಸಲುವ ಚತುಸ್ಸೀಮೆಗೂ ವಾಮನ ಮುದ್ರೆ ಶಿಲಾ ಪ್ರತಿಷ್ಠೆ ಯನ್ನು ಮಾಡಿಸಿ ಸರ್ವಮಾನ್ಯವಾಗಿ ವಹಿಸಿ ಉತ್ತಾರವನ್ನು ಮಾಡಿಸಿ ತಮ್ಮ ಗುರಿ ಯಾದ ಮನುಷ್ಯರು........ವ್ಯಾಸಪ್ಪಯ್ಯಗಳು ಕಳುಹಿಸಿ ಶ್ರೀ ಕೃಷ್ಣದೇವರ ಮಠದ ಚತುಃಸ್ಸೀಮೆಗೂ ಚಕ್ರ ಶಂಖದ ಶಿಲಾ ಪ್ರತಿಷ್ಠೆಯನ್ನು ಮಾಡಿಸಿ ಬರೆಸಿದ ಧರ್ಮ ಶಾಸನ. ಶ್ರೀಪ್ರಮಾಥಿ ಸಂ। ಮಕರ ಮಾಸ ಪೋಹ ಮಾಘ ಶು ।೧। ಸ್ಥಿರವಾರದಲ್ಲಿ ಶ್ರೀಕೃಷ್ಣದೇವರ ಹರಿವಾಣ ನೈವೇದ್ಯಕ್ಕೆ........ತೀರ್ಥ ಶ್ರೀ ಪಾದಂಗಳೂ ಮಾಡಿದ ಧರ್ಮದ ವಿವರ "ಬನ್ನಂಜದ ಅಧಿವಾಸವೋ........" (S. I. I. Vol. VII)

ಈ ಶಾಸನದಿಂದ ಕನಕದಾಸರ ಕಾಲದಲ್ಲಿ ಕೃಷ್ಣದೇಗುಲದ ಜೀರ್ಣೋದ್ಧಾರದ ಶಂಕುಸ್ಥಾಪನೆ ಮಾಡಿದರೆಂದೂ ಅವರ ಶಿಷ್ಯರ ಕಾಲದಲ್ಲಿ ಕೆಲಸವು ಪೂರ್ಣವಾಗಿ ದ್ದಿರಬೇಕೆಂದೂ ಊಹಿಸಬಹುದು. ಶಿಲಾಲೇಖದ "ಪೂಜಾಪರಿಯಾಯದಲ್ಲಿ........ ಉಡುಪಿನ ಶ್ರೀಕೃಷ್ಣದೇವರನ್ನು ಹೊರ ಮಂಟಪಕ್ಕೇ ಬಿಜಮಾಡಿಸಿ" ಎಂಬ ಒಕ್ಕಣೆ ಯಿಂದ ಶ್ರೀಮದಾಚಾರ್ಯರು ಪ್ರತಿಷ್ಠಿಸಿದ ವಿಗ್ರಹವು ಕೀಳಲ್ಪಟ್ಟಿದೆಯೆಂದೂ ಮತ್ತು ಅದೇ ಶಿಲಾಶಾಸನದ "........ವಿದ್ಯುಕ್ತ ಪ್ರಕಾರ ಶ್ರೀ ಕೃಷ್ಣದೇವರನ್ನು ಪುನಃ ಪ್ರತಿಷ್ಠೆಮಾಡಿದ........" ಎಂಬ ವಾಕ್ಯದಿಂದ ಮತ್ತೆ ಶ್ರೀ ಕೃಷ್ಣ ವಿಗ್ರಹವನ್ನು ಪ್ರತಿ ಷ್ಠಿಸಿದ್ದಾರೆಂದೂ ಸಿದ್ಧವಾಗುವುದು.

ಇದಕ್ಕಿಂತ ಹಿಂದೊಮ್ಮೆ ಎಂದರೆ ಶಕ 1359ರಲ್ಲಿ ದೇವರಾಯಮಹಾರಾಯರು ವಿಜಯ ನಗರದ ಸಾಮ್ರಾಟರಾಗಿರುವಾಗ ಬಾರಕೂರು ರಾಜ್ಯವನ್ನು ಅಣ್ಣಪ್ಪ ಒಡೆಯರು ಪ್ರತಿಪಾಲಿಸುತ್ತಿದ್ದಾಗ ಸಿಂಗರಸನು ಶಿವಳ್ಳಿಗೆ ಧಾಳಿ ಮಾಡಿದುದರ ಫಲಿತಾಂಶವಾಗಿ ಶ್ರೀಕೃಷ್ಣದೇವರ ಪ್ರತಿಮಾಚಲನೆಯನ್ನು ಮಾಡುವಂತಾಗಿ ಪುನಃ ಪ್ರತಿಷ್ಟೆ ಮಾಡಬೇಕಾಗಿತ್ತು (S. I. I. Vol. VII No. 296.)

22. ಶಾಸನಗಳಲ್ಲಿ ನಾಡವರ ಉಲ್ಲೇಖವು ಮೊತ್ತಮೊದಲನೆಯದಾಗಿ ತೋರಿಬರುವುದು ಬಾರಕೂರಿನ ಶಕ ವರುಷ 1321ನೆಯ ವೀರ ಪ್ರತಾಪ ಹರಿಹರ ಮಹಾರಾಯರ ಶಾಸನದಲ್ಲಿ (S. I. I. Vol. VII No. 350) ಕಾಯಿಕಿಣಿಯ A. D. 1417ರ ಶಾಸನ ಒಂದರಲ್ಲಿ "ಮೂಡಲೂ ಮಾಣಿ ನಾಡವ ಕುಟುಂಬ ಆಳುತ್ತ ವೃತ್ತಿಗಡಿ" ಎಂದಿದೆ (K. I Volume I No. 41 of 1939-40)

23. ತುಳುವದ ಶಾಸನಗಳಲ್ಲಿ ಬರುವ ಅಧಿಕಾರಿಗಳು ಯಾ ಅಧಿಕಾರ ವರ್ಗಗಳು (ಇವುಗಳು ತುಳುವಕ್ಕೆ ಮಾತ್ರ ಸಂಬಂಧಿಸಿದುವುಗಳೆಂಬ ಅಭಿಪ್ರಾಯವಲ್ಲ)

ಮಹಾಮಂಡಲೇಶ್ವರ, ಮಂಡಲೇಶ್ವರ, ಮಹಾಪ್ರಧಾನ, ಪ್ರಧಾನ, ದಂಡನಾಯಕ (ದಣ್ಣಾಯಕ), ಮಹಾದಂಡನಾಯಕ, ಮಾಂಡಲಿಕ, ಸಾಮಂತ, ದೇಶಾಧಿಪತಿ, ಸ್ಥಾನದಕರ್ತ (ಸ್ಥಾನಿಕ, ಸ್ಥಾನಪತಿ), ಅರಸ, ಅಧಿಕಾರಿ, ಭೂಷಣ ಅಧಿಕಾರಿ, ಮಧ್ಯಸ್ಥ, ಹೆಗ್ಗಡೆ (ಪೆರ್ಗಡೆ), ಅಧಿವಾಸಿ, ಅಧ್ಯಕ್ಷ, ಸೇನಭೋವ, ಸೇನಪ (ನಾಡಸೇನಭೋವ), ಕರಣಿಕ (ಧರ್ಮಕರಣಿಕ), ಮಹಾಪ್ರಭು, ಸೇನಾಪತಿ, ತಂತ್ರಾಳ, ತಂತ್ರಿ, ನಾಯಕ, ಪಟ್ಟಣಸೆಟ್ಟಿ, ಅಡಪ (ಪಡಪ), ಗ್ರಾಮಣಿ, ಪುರೋಹಿತ, ಭಂಡಾರಿ, ಅರವಣೆಯ, ಅಯ್ಯ, ಜಂನಿ (ಜನನಿ?), ಊರಾಳ, ಅಸ್ರಂಣ, ಗುರಿಕಾರ, ಕೊಟ್ಟಾರಿ, ಬಲ್ಲಾಳ, ಬಂಟ, ಕಲ್ಲು ಕುಟಿಕ (ಕಲ್ಕುಡ), ಬುದ್ಧಿವಂತ, ದೇವರದೇವ, ಪರಿಚಾರಕ, ಪುರಾಣಿಕ, ಗೌಡ, ಓಲೆಕಾರ, ರಾಜಗುರು, ಬ್ರಹ್ಮರು, ದಳವಾಯಿ, ತೋಳಾರ (ತೊಳಹ), ಸೆಟ್ಟಿಕಾರ, ಹೊಣೆಕಾರ, ಪೂಜಾರಿ, ಆಡಿಗಳು, ಮಂಡಲದಧಿದೇವ, ಸುಂಕದೊಡೆಯ, ಭಟ್ಟಾರಕ.

ಅಧಿಕಾರವುಳ್ಳ ಸಂಸ್ಥೆಗಳು:- ಊರು (ಊರವರು), ನಾಡು, ಸಮಸ್ತನಾಡು (ನಾಡವರು?) ಮಹಾನಾಡು, ಗ್ರಾಮ (ಗ್ರಾಮದವರು), ಊರುಗ್ರಾಮ, ದೇಶ (ದೇಶಸಮಸ್ತರು), ಹಲರು (ಸಮಸ್ತಹಲರು), ನಖರ (ನಖರದವರು), ಮಹಾನಖರ, ಹಂಜಮಾನದವರು, ಜನನಿಗಳು (ಜನನ, ಜಂನಿಗಳು), ಸ್ಥಾನ (ಸ್ಥಾನದವರು), ಜಗತ್ತು, (ಮಹಾಜಗತ್ತು), ಮಹಾಜನ, ಸಮುದಾಯ (ಪಟ್ಟಣ ಸಮುದಾಯ), ಸೆಟ್ಟಿಕಾರರು, ಪರಿವಾರ, ಒಕ್ಕಲರು (ಒಕ್ಕಲು ಮಕ್ಕಳು), ಮೂಲಿಗಳು

ಪಾದಮೂಲಿಗಳು, ಎಳಮೆಗೊಳಗಾದವರು, ಕೊಳಹರು, ಬಾಕೆನೆಂಗೆಯುವರು, ಕಟ್ಟಳೆಯವರು (16 ಕಟ್ಟಳೆಯವರು, ಸಮಸ್ತಕಟ್ಟಳೆಯವರು), ಮೂರು ಸಾವಿರಾಳರು, ಐನೂರ್ವರು ಇತ್ಯಾದಿ, ಪರಿಷೆ, ಅಧ್ಯಕ್ಷ, ಬಾಳಿಕೆಯವರು, ಪ್ರಜೆಗಳು, ಆರುವಾರುಕಾರರು, ದೇವಪುರುಷರು, ದೇವಸ್ವದವರು, 16 ಮತ್ತು 24 ಬಳಿಯವರು, ಎರಡು ಕೋಲಬಳಿಯವರು, ಸರ್ವಾತಿಥ್ಯ ಕುಟುಂಬ, ದೇವಕೂಟ, ಕ್ರಮುಕಾರಿಯು, ಹತ್ತರ ನಿಯೋಗಿಗಳು, ಹೊರಗಿನವರು.

**ಭೌಗೋಳಿಕ ಯಾ ರಾಜಕೀಯ ವಿಭಾಗಗಳು:—** ಊರು, ಪುರ, ಗ್ರಾಮ, ಗಡಿ, ನಾಡು, ವಾಗಣೆ, ಸ್ಥಳ, ಸ್ಥಳನಾಡು, ಸ್ಥಾನ, ಮಂಣು, ನಾಲ್ಕುಗ್ರಾಮ, ಏಳುನಾಡು, ನಾಲ್ವತ್ತುನಾಡು ಇತ್ಯಾದಿ, ದೇಶ, ಸಂಸ್ಥಾನ, ಪಟ್ಟಣ, ನಕರ, ಮಹಾನಕರ, ಮಹಾರಾಜ್ಯ, ಕೇರಿ, ಗುತ್ತು, ಚಾವಡಿ, ವಿಷಯ, ಸೀಮೆ, ಚತುಸ್ಸೀಮೆ, ಬೀಡು, ಆಳಿಕೆ, (ನಂದಳಿಕೆ, ಪುಂಜಳಿಕೆ, ಪಯ್ಯಾಳಿಕೆ), ಹರವರಿ, ಬಾಳಿಕೆ, ಬೆಂಗರೆ, ರಾವು, ಗೋವಳ, ಭುವನಾಶ್ರಯ, ಮಂಡಲ, ಕುದುರು

**ಶಾಸನಗಳಲ್ಲಿ ಬರುವ ನಾಣ್ಯಗಳೂ, ಅಳತೆಗಳೂ:—** ಗಡ್ಯಾಣ (ಗದ್ಯಾಣ), ಕಾಟಿ, ಕಾಟಿಗಡ್ಯಾಣ, ವರಹ, ದೊಡ್ಡವರಹ, ಮಂಗಳೂರು ಗಡ್ಯಾಣ ಬಾರಕೂರು ಗಡ್ಯಾಣ, ಪಾಂಡ್ಯ ಗಡ್ಯಾಣ, ಹೊನ್ನು, ಪಣ, ನೆಗ, ತಾರ, ಹಡಿತಾರ, ಹಾನೆ, ನಾಡ ಹಾನೆ, ಕಂಚಿನ ಹಾನೆ, ಮೂಡೆ, ಮುಡಿ, ಕಂಡುಗ, ಮೂಗಂಡುಗ, ನಾಗಂಡುಗ, ಕುಡುತೆ, ಬಳ್ಳ, ಸೇರು, ಹಾಡ

**ಶಾಸನಗಳಲ್ಲಿ ಬರುವ ತೆರ ವಣಗಳು:—** ತೆರು, ಮುಡಗಡಿ, ಅರುಗಡಿ, ದೇವರಧರ್ಮ, ಮನೆಹಣ, ನೊಗಹಣ, ಒಕ್ಕಲುಗುತ್ತಗೆ, ಕಾಣಿಕೆ, ಬಡಾಯು, ಬೆಳಾಕರಣ, ಬೆಳುದಂಡ, ಎಸೆ, ಒಸಗೆ, ಬಿಜ್ಜ, ಬಿಢಾರ, ವತ್ತುಗಾಯಿ, ಅರವಸ್ತು, ಬೀಡು, ಅಪ್ಪಣೆ, ಅನಾಯ, ಅಸಂತಾಯ, ಅಕರ, ವರಡ, ಸರಡ, (S. I. I & K. I. & S. K. M) ಸಾಲಿಕೆಯ ಹಣ, ಹೊಸ್ತಿನ ಕಾಣಿಕೆ, ಉಡುಗೊರೆ ಕಾಟಿಗಡ್ಯಾಣ, ಉಪಚಾರಕಾಟಿಗಡ್ಯಾಣ, ಪ್ರಮಾಣ ಕಾಟಿಗಡ್ಯಾಣ

24 ಕರ್ಣಾಟಕ ಶಾಸನಗಳಲ್ಲೆಲ್ಲ ಸ್ಥಾನ, ಅಧಿಸ್ಥಾನ, ಪುರ, ನಗರ, ವಾಸಕ ಮತ್ತು ಆವಾಸಕ ಎಂಬ ಎಂಬ ಹೆಸರುಗಳು ಬರುತ್ತವೆ ಇವುಗಳಲ್ಲಿ. ವಾಸಕ ಯಾ ಆವಾಸಕವೆಂಬುದು ಅರಸನ ತಾತ್ಕಾಲಿಕ ಬೀಡು(Temporary Residence) ಕೇಶವನ ಕಲ್ಪದ್ರು, ಕೋಶದ ಪ್ರಕಾರ ಪುರ ಮತ್ತು ನಗರವೆಂದರೆ ಒಂದೇ ಅರ್ಥವುಳ್ಳ ಪರ್ಯಾಯ ಶಬ್ದಗಳು (ಪುರಂವಾನಗರಂಚವ) ಆದರೆ ಕನ್ನಡ ಶಾಸನಗಳಲ್ಲಿ ಬರುವ ನಗರ, ನಖರ, ನಕರ ಎಂಬುದು ವ್ಯಾಪಾರದ ಕೇಂದ್ರವಾಗಿರುವ ಪಟ್ಟಣ

ವೇದಾರ್ಥವಾಗುವುದು. ಶಿವ ತತ್ವಾರ್ಥ ರತ್ನಾಕರ ಎಂಬ ಗ್ರಂಥದಲ್ಲಿ (Chapter VI, VV, 15-16) ಆಮದು ರಫ್ತು ಮಾಡುವ, ಬೇರೆ ಬೇರೆ ಜಾತಿ ಸಮಾಜಗಳು ವಾಸವಾಗಿದ್ದು, ರಾಜನ ಸಂಸ್ಥಾನವಿರುವ ದೊಡ್ಡ ಪಟ್ಟಣವು ನಗರವೆಂಬುದಾಗಿದೆ (Nagara is defined in the Sivatatvaratnakara as a metropolis of imports and exports, a residence of various communities and castes and a seat of the King)

ತುಳುವದ ಶಾಸನಗಳಲ್ಲಿ ಆಳುಪರ ಪ್ರಾದುರ್ಭಾವದಂದಿನಿಂದ ನಕರಗಳ ಉಲ್ಲೇಖವು ಆಗಿಂದಾಗ್ಯೆ ಬರುವುದು ಕಂಡುಬರುತ್ತದೆ. "ಕೋಳಲ ನಕರಕ್ಕೆ" "ಒದೆವುರ ನಕರ" (S. I. I. Vol. VII No. 283), "ಎಳಮಾಳುದಿಳಿಪುರದ ನಕರದೆರ್ಪ (ಳ್ಪ?) ತ್ತೊಕ್ಕಲು" (Ibid No. 279) "ಪದಿನೆಂಟು ಪಟ್ಟಣ ಮುಮರ್ ನಿತ್ತ ವ್ಯವಸ್ಥೆ" (Ibid No. 284) 'ಆ ಊರನಾಳ್ವ ಪಾಂಡ್ಯ ಮಹಾದೇವಿಯರ ನಗರ ಸಮೂಹಕ್ಕೆ' (Ibid No. 376) ಎರಡು ನಕರದ ಸಮಸ್ತ ಹಲರ, ಅನುಮತಿ' (Ibid No. 262) ಹದಿನಾರು ಒಳ ನಖರ (Ibid No. 259) ಇದರಿಂದ ತುಳುವದ ವ್ಯಾಪಾರ ವಹಿವಾಟು, ಆರ್ಥಿಕ ಸಂಪತ್ತು ಏಳೆಂಟನೆಯ ಶತಮಾನ ಕಾಲದಿಂದಲೇ ತಿಳಿದು ಬರುತ್ತದೆ.

(25) ಕಲ್ಯಾಣ ಚಾಲುಕ್ಯರ ಶಾಸನಗಳಲ್ಲೊಂದಾದ ಎರಡನೆಯ ಜಗದೇಕಮಲ್ಲನ ಋಷ್ಯಶೃಂಗದ (ಶಿರಕಂಗಿ, ಸೌಂದತ್ತಿ ತಾಲೂಕು, ಬೆಳಗಾವ್ ಜಿಲ್ಲಾ) ಕ್ರಿ.ಶ. 1148ರ ಶಾಸನದಲ್ಲಿ ಅಲ್ಲಿಯ ಗ್ರಾಮೇಶ್ವರ ದೇವಸ್ಥಾನದ ಸಹಾಯಕವಾಗಿ ಆ ಊರಿನ ಗಾವುಂಡರು (ಗೌಡರು)ಭೂದಾನ ಮಾಡಿದ ದಾಖಲೆಯಿದೆ. ಈ ಗಾವುಂಡರಲ್ಲಿ ಕೆಲವರು ತೊಳಹ (ತೊಳಪ) ಕುಲಕ್ಕೆ ಸೇರಿದವರೆಂದು ನಮೂದಿಸಲ್ಪಟ್ಟಿದೆ. ಈ ಕುಲದ ಹೆಸರು ವಿಜಯ ನಗರದ ಕಾಲದ ಶಾಸನಗಳಲ್ಲಿ ಆಗಿಂದಾಗ್ಗೆ ಪಶ್ಚಿಮ ಕರಾವಳಿಯ ಉತ್ತರ ಮತ್ತು ದಕ್ಷಿಣ ಕನ್ನಡದ ಕ್ಷೇತ್ರದಲ್ಲಿ ಕಂಡು ಬರುತ್ತದೆ. ಮಾತ್ರವಲ್ಲದೆ ತೊಳಹ ಕುಲವು ಉಡುಪಿ ತಾಲೂಕಿನ ಸುರಾಲಿನಲ್ಲಿ ಆಳ್ವಿಕೆಯಲ್ಲಿದ್ದುದು ಶಾಸನಗಳಿಂದ ತಿಳಿದು ಬರುತ್ತದೆ (ತೊಳಹಾರ ಯಾ ತೊಳರ) ತುಳುವದ ತೊಳಹರ ಮೂಲವು ಬೆಳಗಾವಿನ ತೊಳಹರ ಕುಟುಂಬವೆಂಬುದಾಗಿ ಅನುಮಾನಿಸಲಾಗಿದೆ. [Madras Epigraphical Report for 1931-32, page 63, para 37] [K. I. Vol I Int page IX] ಇದರಿಂದ ಒಂದು ವಿಷಯವು ಸೂಚಿತವಾಗುತ್ತದೆ. ಈ ತೊಳರ (ತೊಳಹರ) ಕುಟುಂಬವು ಬೆಳಗಾವ್ ಜಿಲ್ಲೆಯ ತಮ್ಮ ತೌರೂರಿಂದ ಸಮುದ್ರ ಕರಾವಳಿಗೆ ಬಂದು ಚಾಳುಕ್ಯರ ಯಾ

ಹೊಯ್ಸಳರ ಕಾಲದಲ್ಲಿ ತುಳುವವು ಅವರ ಪ್ರಭುತ್ವಕ್ಕೊಳಪಟ್ಟಾಗ ನೆಲೆ ಮಾಡಿರ ಬೇಕು.

"ಕಾವಗೌಡಂ ನೆಗರ್ದ ತೊಳಹರ ಕುಳಕ್ಕೆ ತಿಳಕಂ ಬರಸಿಡಿಲಿದಿರಾನ್ತ ವೈರಿಗಂ ಕೂರ್ಪ ಜನಕ್ಕೆರಗಲಿ ಭಂಡಿ ಎನಿಪ್ಪಂ ಕಳೆವುರಿ ಇಲ್ಲದೊಳಂಡ ಕಾವಗ ವುಂಡಂ"

"ವಿನಯನಿದಿರಾಜಿ ಗೌಡಿಗೆ ಮನುಚರಿತನೆನಿಪ್ಪ ತಿಪ್ಪ ಗೌಡಂ ಗಂ ಕೇತನು ಸಾತನೆಂಬ ಮಕ್ಕಳು ಜನಿಯಿಸಿದರು ತೊಳಹಕುಳಕೆ ತಿಳಕರೆನಲ್ಕಂ" [K.I. Vol 1 No. 24]

ಪ್ರಾಯಶಃ ತುಳುವದ ಶಾಸನದಲ್ಲಿ ಈ ತೋಳಹ ಕುಲಕ್ಕೆ ಪ್ರಥಮ ಉಲ್ಲೇಖವು ಭುಜಬಳ ಕವಿಯಾಳ್ವೇಂದ್ರನ ಶಕವರ್ಷ ೧೧೬೨ ಶಾಸನದಲ್ಲಿ. ಅದರಲ್ಲಿ ಈ ಕೆಳಗಿನಂತಿದೆ." ಶಿವಾನಂದ ಯೋಗಿನಿ ವೇದ್ಯಶಾಲೆಂ ಮಾಡಿ ಸೂರಲಲು ತೊಳಹನ ಕೈಯಲೂ ಬಿಡಾರ್ವ್ಯರ ಮಾಡಿ ಹಿಡಿವಸಿಗೆ ಬಿತುವ ಒದಿರ ಗದ್ದೆಯು ಮೋಲಕ್ಕಿದ ಪಾಂಡ್ಯಗಡ್ಯಾಣಂ ಮೂವತ್ತು ಮನಾ ಪೊನ್ನ ವೃದ್ಧಿಯುಮಂ ಅಗ್ರಕ್ಕೆಂದು ಶಾಸನ ಮಾಗೆ ಮಾಡಿಸಿದ ಧರ್ಮ" (S. I. I. Vol VII No. 381.)

26. ಆಪತ್ಕಾಲದಲ್ಲಾಗಲೀ ಅಥವಾ ಕೇಂದ್ರ ಸರಕಾರವು ಬಲಹೀನವಾಗಿ ರಕ್ಷಣಾರಹಿತ ಸ್ಥಿತಿಯಲ್ಲಿ ಜನಗಳಿರುವ ಸಂದರ್ಭದಲ್ಲಾಗಲೀ ತಮ್ಮನ್ನು ತಾವೇ ರಕ್ಷಿಸಿಕೊಳ್ಳುವುದಕ್ಕೆ ಪ್ರಜೆಗಳು ಕಾರ್ಯದಕ್ಷತೆಯಿಂದ ಮುಂದು ಬಂದು ಪ್ರತಿಜ್ಞಾಬದ್ಧರಾಗಿದ್ದರೆಂಬುದಕ್ಕೆ ತುಳುವದ ಚರಿತ್ರೆಯಲ್ಲಿ ಅನೇಕ ಉದಾಹರಣೆಗಳು ಕಂಡು ಬರುತ್ತವೆ. ಕೆಳಗೆ ವಿಶಿಷ್ಟವಾದೊಂದನ್ನು ಉದಾಹರಿಸಲು ಇಚ್ಛಿಸುತ್ತೇನೆ.

"ಶ್ರೀ ಜಯಾಭ್ಯುದಯ ಶಾಲಿವಾಹನ ಶಕವರ್ಷ ೧೪೩೧ ಸಂದು ಎರಡನೆಯ ವರ್ತಮಾನ ಸಿದ್ಧಾರ್ಥಿ ಸಂವತ್ಸರದ ಧನುರ್ಮಾಸ ೨೯ನೆ ಶುಕ್ರವಾರದಲು ಶ್ರೀಮತು ಶಂಕರದೊಡೆಯರಾದ ಕುಂದ ಹೆಗ್ಗಡೆಯರೂ ಬಂದು ಆಶ್ರಯಿಸಿದವರೂ ನಂಮೊಳೇಕಸ್ಥರಾಗಿ ತಿರುಮಲೆ ಅರಸರಾದ ಮದ ಹೆಗ್ಗಡೆಯರಿಗೂ ಆ ಸಿರಿಸಿದವರಿಗೂ ಬರಸಿಕೊಟ್ಟ ಶಿಲಾಶಾಸನದ ಕ್ರಮವೆಂತೆಂದರೆ— ಭೂಮಿಯೂ ಚಂದ್ರನೂ ಉಳಲಿ ಪರಿಯಂತರಂ ಸಲ್ಲುದು ಕಾಪು ಎರಡು ಸ್ಥಾನ ಕೂಳೂಳಗೆ ಬಂದು ಹೊರಗೆ ಅಂಮುಠ ಅರಸು ಆನಂತಿಗಳಲಿಯೆಡೆ ಕೊಟ್ಟರೆ ನಂಮ ಆಳು ಅಂಬು ಆರಿ ಕೊಪ್ಪರಿಗೆಯನ್ನು ಯಿತ್ತು ನಂಮ ಅನುವರ............ನು ಜಯಿಸಿಕೊಂಡೆವು. ನಂಮೊಳಗೆ ಒಬ್ಬರ ಇದಿರಿಗೆವೊಬ್ಬರು ಮಥದಿಂದ ಸಲ್ಲದು ನಿಂಮ ಯಿದಿರಿಗೆ ಬಹ ಅನುಸರಿಗಳಿಗೆ ನೆರನ ಕೊಡಸಲ್ಲದು. ಒಬ್ಬರು ಬಿಟ್ಟುವೊಬ್ಬರು ನಿಲ್ಲಸಲ್ಲದು. ನಂಮ ಯಿರುವರ

ಕೂಡಿ ಮೋಹರ್ಸ್ಯಹಂತವರ ಭಂಡಿ ಬುದ್ಧಿಯಿಂದ ವಧಿಸಿದ ಯಿಧಿತಾದ ಅನುಸರಿಗಳೂ ಜಯಿಸಿಕೊಂಬೆ ಉ. ನಂಮು ಯಿಬ್ಬರೊಳಗೆ ಮನಸ್ತಾಪಗಳು ಬಂದರೆ ಬುದ್ಧಿಯಿಂದಲೇ ಪರಿಹರಿಸಿಕೊಳ್ಳಬೇಕಲ್ಲದೆ ತುಡುಕಿ ಕಾದಸಲ್ಲದು. ಈ ವಖ್ಖಣಿಕೆಗೆ ನಾವು ತಪ್ಪಿದರೆ ಯೆಂಟು ಘಟ್ಟದಲಿಯಿಳವ ಎತ್ತುಗಳ ಕೊಂದ ದೋಷ. ಗಂಗೆ ತಟಿಯಲ್ಲಿ ಸಾವಿರ ಕಪಿಲೆಯ ಕೊಂದ ದೋಷ. ವಾರಣಾಸಿಯಿಂದ ರಾಮೇಶ್ವರ ಪರಿಯಂತರ ಪ್ರತಿಷ್ಠೆಯಾದ ಲಿಂಗವನೂ ಕಿತ್ತದೋಷ. ಯಿ ಶಿಲಾಶಾಸನದ ಅಡಕಕೆ ತಪ್ಪುವವರಲ್ಲವೆಂದು ಬರದುಕೊಟ್ಟ ಶಿಲಾಶಾಸನ, ಈ ಕಟ್ಟಿಗೆ ಪಾಂಡ್ಯ ದೇವರಸವೊಡೆಯರ ವೊಪ್ಪು. ನಂದಣಿಕೆಯ ದಯಿವಗಳು ತಪ್ಪಿದವರು" (S. I. I. Vol. VII No. 273 A. R. No 91 of 1901)

27. ಕರ್ಣಾಟಕದ ಶಾಸನಗಳಲ್ಲಿ 'ಅಳಪಗಣ' ದಂತಹ ಇತರ ಗಣಗಳ (class) ಉಲ್ಲೇಖವು ಅಗಿಂದಾಗ್ಗೆ ಬಂದಿರುತ್ತದೆ. ಈ ಕೆಳಗೆ ಕೆಲವು ದೃಷ್ಟಾಂತಗಳನ್ನು ಕೊಟ್ಟಿದೆ.

(I) "ಮಾತೃಗಣ" (ಎರಡನೇ ಪುಲಕೇಶಿಯ ಬಾದಾಮಿಯ ಶಾಸನ-ತಾರೀಕು ಸುಮಾರು ಕ್ರಿ. ಶ. 610—K. I. Vol I No. (I)

(II) "ಪರಲೂರಗಣಾಗ್ರಣಿ" (I bid No 3 - ಅಡೂರು, ಹಂಗಳ ತಾಲೂಕು — ತಾರೀಕು ಸುಮಾರು ಕ್ರಿ. ಶ. 750)

(III) "ಅಂತಾಕಾರಯ ಗಣದೊಳತಿ ಪ್ರಸಿದ್ಧರುಂ" (I bid No. 32— ಸೌಂದತ್ತಿ ತಾಲೂಕಿನ ಬಾಡ್ಲಿಯ ಶಾಸನ ತಾರೀಕು 1210 ಕ್ರಿ. ಶ.)

(iv) 'ಶೂದ್ರ ಗಣದ ಮದುವೆಯೊಳೊನ್ದಂ' (K. I. Vol II No. 4- ಪ್ರಭೂತ ವರ್ಷನ ದಂಡಾಪುರದ ಶಾಸನ-ತಾರೀಕು ಕ್ರಿ. ಶ. 918)

(v) 'ಸಿಂಘವುರಗಣದ ನಾಗಣ' (Ibid No. 5-ತಾರೀಕು 859 ಕ್ರಿ. ಶ.)

(vi) 'ಬಲಾತ್ಕಾರದ ಗಣದ ನೇಮಿಚಂದ್ರ ದೇವರ ಶಿಷ್ಯರು. ಪಾರೀಶ್ವರ ದೇವರು' (K. I. Vol III Part I No. 74- ಹೈವ, ತುಳು, ಕೊಂಕಣ ಮುಂತಾದ ರಾಜ್ಯಗಳನ್ನಾಡುವ ಮಹಾ ಮಂಡಲೇಶ್ವರ ಕೃಷ್ಣ ದೇವರಸ ಒಡೆಯರ ಕಯಿಕಣಿಯ ಶಾಸನ— ತಾರೀಕು ಕ್ರಿ. ಶ. 1542)

28. ಕರ್ಣಾಟಕದ ಇತರ ಕಡೆಗಳಲ್ಲಿ ಬಳಿಗಳು:

(i) 'ಪರಲೂರಾಚೇದಿಯ [ಬ್ಬ] ಳಿ ಪ್ರಭಾಚನ್ದ್ರ ಗುರಾವರ್ಪಡೆದ.'— (K. I. Vol I No. 3 – ತಾರೀಕು ಸುಮಾರು ಕ್ರಿ. ಶ. 750)

(ii) 'ಸಿಂಘಪುರಗಣದ ನಾಗಣನ್ದ್ಯಾಚಾರ್ಯರ್ಪಡೆ ದೋರತ್ತಿಗೇರಿಯು ಬಳಿ ಇದಕ್ಕೆ ಸಾಕ್ಷಿ' (K. I Vol II No. 5 – ತಾರೀಕು ಕ್ರಿ. ಶ.850)

(iii) 'ತನ್ಮಕ್ಕಳುಗೆ ಸಾಸಿರ್ವ್ವರು ಬಳಿಯಂ ಕೊಟಗದ್ದೆ'(I bid No. 17 – ತಾರೀಕು ಕ್ರಿ. ಶ. 1126)

(iv) 'ಅಣನ್ದೂರು ಮೂನೂರರ ಬಳಿಯಂ ಕುಲಿಗೆಯೆಯ್ವತ್ತರೊಳಗಣ' (I bid No. 12 – ತಾರೀಕು ಕ್ರಿ. ಶ. 1114)

(v) 'ಶ್ರೀಲೋಕಪಾಲೇಶ್ವರ ಕಮ್ಮಾರಿ ಬಳಿ' (ಪಟ್ಟದ ಕಲ್ಲಿನ ವಿರೂಪಾಕ್ಷನ ಗುಡಿಯ ಪ್ರಾಕಾರದಲ್ಲಿಟ್ಟ ಲಿಪಿಗಲ್ಲು ಕ್ರಿ. ಶ. ಎಂಟನೆಯ ಶತಮಾನ)

ooo ooo ooo ooo

## BIBLIOGRAPHY

1. Sources of Karnatak History Vol. I-by S. Srikanta Sastri (S. K. H.)

2 Epi graphia Carnatica (E. C.)

3 South Indian Inscriptions Vols. VII, IX Parts I & II (S. I I.)

4 Karnatak Inscriptions edited by Vidyaratna R. S. Panchamukhi Vols. 1, 2, and 3 (K. I )

5 Annual Reports of Epigraphy of the Madras Presidency (1901 to 1935) (A. R.)

# ಈ ಪುಸ್ತಕದ ರಚನೆಯಲ್ಲಿ ಉಪಯೋಗಿಸಿದ ಗ್ರಂಥಗಳು ಮತ್ತು ಸಾಹಿತ್ಯ


1. Castes and Tribes of Southern India by E. Thurston (Vols. I to VIII.)

2. Castes in India by Dr. J. H. Hutton (Greoffrey Cumerlege, Oxforod University Press.—1951.)

3. Census Statement of Population of 1871 of South Kanara District, arranged according to Area, Caste and Occupation Cookson (Madras Printed at Scottish, Press by Graves, Cookson andCo., 1874)

4. Dravidian Etymological Dictionary by I. Burough and Ameneau (Oxford, at the Clarendon Press 1961)

5. Devil worship of the Tuluvas —Burnell.

6. Grammar of the Tulu Language—Rev. I. Brigel (Mangalore Published by C Stolz, B. M. B. & T. Depository—1872)

7. Gazetteer of South Kanara (1905)

8. Gazetteer of the Bombay Presidency (Vol. XV Part I) Kanara (Bombay: Printed at the Government Central Press—1883)

9. History of Tuluva by Dr.Bhaskar Ananda Saletore (Poona, Oriental Book Agency-1936)

10. History of Kannada Language—R. Narasimhachar (University of Mysore, 1934)

11. India's Legacy, the World's Heritage by P R Ranganatha Poonja (Published by B M B Depot, Mangalore—1948)

12. Kadamba Kula by George Moraes, Bombay.

13. Kannada English Dictionary by Rev. F. Kittel (Mangalore B. M. B. & T. Depositony 1894)

14. List Showing the Names of Towns and Villages Constituting the several Registration Districts in the Registration District of South Kanara (Madras: Printed by the Superintendent, Government Press, 1905)

15. 'Lost Lumuria' by W. Scott and Elliot

16. List of the Antiquarian Remains in the Madras Presidency by Robert Sewell (Compiled under the orders of the Govt., Printed at the Govt., Press Madras 1882)

17. Malabar by Willium Logan (Vol I) Madras Printed by R Hill, at the Government Press, 1887)

18. Madras District Manuals – Malabar.

19 Madras District Manuals – South Kanara (Compiled by J. Sturrock Vol I—Madras, Printed by the Superintendent, Government Press, 1894)

20. Manual of the Administration of the Madras Presidency Vol I – Madras, Printed by E. Keys, at Government Press, 1885.

21. Manual of the Administration of the Madras Presidency Vol II (Appendices) Printed by E Keys, at the Government Press, 1885

22. Mysore Gazetter – Compiled for Government Vol I-Edited by C. HayawadanaRao (1929), New Edition.

23. New Approach to the so called Dravidian Problem-Aneient Ties Among Lata And Karnata As Suggested by Personal Names S B. Joshi and B. S Kulakarni (Article contributed to the Souvenir of the 16th Maharashtra & Karnatak Provincial Medical Conference 1957)

24. Sthanikas and their Historical Importance by Dr Basker Ananda Saletore.

25. Social and Economic Life of Vijayanagara Empire by Dr. B. A. Saletore.

26. Studies in the Historical and Cultural Geography and Ethnology of Gujarat by Dr. Husmukh Sankalia (Institute of Research, Deccan Collrege, Poona 1949)

27. Sources of Karnatak History by S. Srikanta Shastri (University of Mysore,) 1940.

28. South Indian Inscriptions.

29. Sthanikas of Kanara District (North & South) Chera Nattoja Shiva Rao, Puttur, 1944)

55. ಉಡುಪಿ— ರಾಷ್ಟ್ರಕವಿ ಶ್ರೀ ಗೋವಿಂದ ಪೈ. ಅವರಿಂದ (ಉಡುಪಿ ಮುನಿಸಿಪಾಲಿಟಿಯು ಬೆಳ್ಳಿ ಹಬ್ಬದ ಕುರಿತಾಗಿ ಹೊರಡಿಸಿದ ಸಂಚಿಕೆಯಲ್ಲಿ ಪ್ರಕಟವಾದ ಲೇಖನ, 1960 - 61)

56. ತುಳುನಾಡ ಮಹಾಕಥೆತೊ ವಾರ್ಷಿಕ ಎಸ್. ವಿ. ಪಣಿಯಾಡಿ (1929)

57. ಮಧುಪುರ- ಸಂಪಾದಕ: ಕೆ.ವೆಂಕಟ ಕೃಷ್ಣಯ್ಯ. (ಗೀತಾ ಪ್ರಕಾಶನ, ಕಾಸರಗೋಡು 1962)

58. ಪುಳಿನಾಪುರ ಮಹಾತ್ಮೆ— ಎನ್.ಎ.ಶೀನಪ್ಪ ಹೆಗ್ಡೆ (1949)

59. ಶಿವ ಬ್ರಾಹ್ಮಣ ಪರಿಷತ್ತು, ಮಂಗಳೂರು- ಆಯುರ್ವೇದ ಭೂಷಣ ಎಂ. ವಿ. ಶಾಸ್ತ್ರಿ ಇವರ ಅಧ್ಯಕ್ಷ ಭಾಷಣ.

60. ಸ್ಥಾನಿಕ ಪ್ರಾಜ್ಞದ ಸುವರ್ಣ ಪದಕ ವಿಜಯಿ-ಮ. ರಾ. ಎನ್. ಎಸ್. ಶಿವ ರಾವ್ ಪುರುಷೋತ್ತರವರ ಉಪನ್ಯಾಸ (1927)

61. ತುಳುವರ ಸಾಗರೋತ್ತರ ಸಂಬಂಧಗಳು—ಮ. ರಾಜೀವ (42 ನೆಯ ಕನ್ನಡ ಸಾಹಿತ್ಯ ಸಮ್ಮೇಳನಾಂಕ. ಮಣಿಪಾಲ, 1960 ಇದರಲ್ಲಿ ಪ್ರಕಟವಾದ ಲೇಖನ)

62. ನಮ್ಮ ಹಿರಿಯರನ್ನು ಕುರಿತು— ಶ್ರೀ ಗೋವಿಂದ ಪೈ, ಮಂಜೇಶ್ವರ (ಮುಂಬಯಿಯಲ್ಲಿ ಗೌಡ ಸಾರಸ್ವತ ಬ್ರಾಹ್ಮಣ ಸಭಾದವರಿಂದ ಬೆಳ್ಳಿ ಹಬ್ಬ ಸಂಬಂಧ ಪ್ರಕಟಿಸಲ್ಪಟ್ಟ ಸಂಚಿಕೆಯಿಂದ ಪುನಃ ಮುದ್ರಿಸಿದ್ದು)

63. ಶ್ರೀ ವಾದಿರಾಜ ಗುರುವರರ ಚರಿತ್ರೆ—ಶ್ರೀ. ಬಿ ಶ್ರೀನಿವಾಸ ಭಟ್ಟ, ಸಾಹಿತ್ಯ ಶಿರೋಮಣಿ (ಉಡುಪಿ ಪಾವಂಜೆ ಗುರು ರಾವ್ ಎಂಡ್ ಸನ್ಸ್, ಶಾ.ಶ. 1874)

64. ಕನ್ನಡ ನಾಡೂ ದೇಸೀ ಸಾಹಿತ್ಯವೂ — ಮುಳಿಯ ತಿಮ್ಮಪ್ಪಯ್ಯ (Kannada Research Institute, Dharwar 1954)

65. ಶ್ರೀಮಧ್ವವಿಜಯಸ್ಥಭಾವ ಪ್ರಕಾಶಿಕಾ—ಶ್ರೀ ನಾರಾಯಣ ಪಂಡಿತಾಚಾರ್ಯ (ಪಾವಂಜೆ ಗುರು ರಾವ್, ಶ್ರೀ ಮನ್ಮಧ್ವ ಸಿದ್ಧಾಂತ ಗ್ರಂಥಾಲಯ, ಉಡುಪಿ ಶಾ. ಶ. 1847)

66. ಗ್ರಾಮ ಪದ್ಧತಿ-'ಭಟ್ಟಾಚಾರ್ಯ' ಪ್ರಕಾಶಕರು: ಕೆ. ಎಮ್. ದಾಸ ಪ್ರಭು ಎಂಡ್ ಸನ್ಸ್, ಮಂಗಳೂರು (1924)

67. ಉತ್ತರ ಸಹ್ಯಾದ್ರಿ ಖಂಡ-ಹೊಸಬಾಳೆ ಗ್ರಾಮ ನಿವಾಸಿ ಅನಂತ ಶರ್ಮರಿಂದ ಪ್ರಕಟಿಸಲ್ಪಟ್ಟದ್ದು (ಶಕ 1834) ನಡಹಳ್ಳಿ

68. ಸ್ಕಂದ ಪುರಾಣಾಂತರ್ಗತಂ ಸಹ್ಯಾದ್ರಿ ಖಂಡಂ (Edited by J. Gerson Da Cunha Bombay 1877)

69. ಅಷ್ಟಾದಶ ಪುರಾಣದರ್ಪಣ—ಜ್ವಾಲಾ ಪ್ರಸಾದಜೀ ಮಿಶ್ರ (ಶ್ರೀ ವೆಂಕಟೇಶ್ವರ ಸ್ಟೀಮ್ ಯಂತ್ರಾಲಯದಲ್ಲಿ ಛಾಪಿಸಿ ಪ್ರಕಟಿಸಲ್ಪಟ್ಟದ್ದು, ಬೊಂಬಾಯಿ-ಶಕ 1827)

70. ಬ್ರಾಹ್ಮಣೋತ್ಪತ್ತಿ ಮಾರ್ತಂಡ – ಹರಿ ಕೃಷ್ಣಶಾಸ್ತ್ರಿ (ಶರ್ಮ) (ವೆಂಕಟೇಶ್ವರ ಸ್ಟೀಮ್ ಯಂತ್ರಾಲಯ, ಬೊಂಬಾಯಿ, 1830 ಶ.)

71. ಶಂಕರ ವಿಜಯ—ಆನಂದ ಗಿರಿ (ಪಂಡಿತ ಜೀವಾನಂದ ಪ್ರೊಫೆಸರ್) ಇವರಿಂದ ಮುದ್ರಿಸಲ್ಪಟ್ಟದ್ದು, ವಿದ್ಯಾಸಾಗರ ಭಟ್ಟಾಚಾರ್ಯರ ಸಂಸ್ಕೃತ ಕಾಲೇಜು ಕಲ್ಕತ್ತಾ, 1881)

72. ಕರ್ಣಾಟಕ ಸಂಸ್ಕೃತಿ—ದೇವುಡು (ನರಸಿಂಹ ಶಾಸ್ತ್ರಿ), ಬೆಂಗಳೂರು ಸಿಟಿ. ಬೆಂಗಳೂರು ಪ್ರೆಸ್, ಮೈಸೂರು ರೋಡು (1935)

73. ಗಜತಪೀಠಪುರಮಾಹಾತ್ಮ್ಯಂ ( ಉಡುಪಿ ಕ್ಷೇತ್ರ ಮಹಾತ್ಮ್ಯಂ Edited by K. Padmanabha Shastri, V.Subbaraycharya Ananthasayana 1913)

74. ಯಕ್ಷಗಾನ ಬಯಲಾಟ—ಶಿವರಾಮ ಕಾರಂತ (ಹರ್ಷ ಮುದ್ರಣ, ಪ್ರಕಟಣಾಲಯ ಪುತ್ತೂರು, ದ.ಕ—1957)

75. ತುಳುನಾಡಿನ ಬಸದಿಗಳು-ಬಿ. ನೇಮಿರಾಜ ಹೆಗ್ಡೆ ಪ್ರಕಾಶಕರು (1926)

76. ಭಾರತೀಯ ಸಂಸ್ಕೃತಿ — ಡಾ। ಎಸ್. ಶ್ರೀಕಂಠ ಶಾಸ್ತ್ರಿ ಮೈಸೂರು ವಿಶ್ವವಿದ್ಯಾ ನಿಲಯ—1954.

77. ಪಟ್ಟದ ಕಲ್ಲುಗುಡಿಗಳು—ಎ. ಎಂ. ಅಣ್ಣಿಗೇರಿ- ಕ್ಯೂರೇಟರ ಆಫ್ ದಿ ಮ್ಯೂಜಿಯಂ ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, 1960.

78. ಭೂತಾಳ ಪಾಂಡ್ಯನ ಕಟ್ಟುಕಟ್ಟಳೆಗಳು—ಬಿ. ಯಸ್. ಭಾಸ್ಕರ ರೈ—ಎಡ್ವಕೇಟ್ ಹಂಪನ ಕಟ್ಟೆ—ಮಂಗಳೂರು (1957)

79. ತೀರ್ಥ ಕ್ಷೇತ್ರ ಮಹಾತ್ಮ್ಯವು (ತೀರ್ಥ ಬೈಲು-ಪಾಂಡೇಶ್ವರ) ಪ್ರಕಾಶಕರು ಅರ್ಚಕ ಸುಬ್ರಾಯ ಅಡಿಗ (1947)

80. ಕಾನಿಗೆ-ಕೆ. ಬಿ. ನಾರಾಯಣ ಕಿಲ್ಲೆ - ತುಳುನಾಡು ಪ್ರೆಸ್, ಉಡುಪಿ (1932)

## ಕೆಲವು ಪ್ರಾಮುಖ್ಯ ತಿದ್ದುಪಡಿಗಳು

ಪುಟ ೨೪-ಪಙ್ಕ್ತಿ ೧೫-'ತಮಿಳು ಶಾಸನಗಳಲ್ಲಾಗಲೀ, ಸಂಘಮ್ ಸಾಹಿತ್ಯದಲ್ಲಿಯು ಒಂದು ಉಲ್ಲೇಖ ಹೊರತಾಗಿ ಇತರ ತಮಿಳು ಸಾಹಿತ್ಯಗಳಲ್ಲಾಗಲೀ ತುಳು ಯಾ ತುಳುವಕ್ಕೆ ಉಲ್ಲೇಖ ಕಂಡು ಬರುವುದಿಲ್ಲ' ಎಂದು ಓದುವುದು.

ಪುಟ ೨೩ - ಪಙ್ಕ್ತಿ ೨೪-"ತುಲಾವುಸಿ" ಎಂಬುದನ್ನು "ಕುಲಾವುಸಿ" ಎಂದು ಓದುವುದು.

ಪುಟ ೮೦ – ಪಙ್ಕ್ತಿ ೧೭—"ಚಾರಿತ್ರಿಕ ದಾಖಲೆಗಳನ್ನೊಳಗೊಂಡಂತೆ ಭಾಸವಾಗುವುದಿಲ್ಲ" ಎಂದು ಓದುವುದು.

ಪುಟ ೧೧೩—ಪಙ್ಕ್ತಿ-೨೨-"ನೆಲೆಸಿದವರಲ್ಲ" ಎಂಬುದನ್ನು "ನೆಲೆಸಿದವರು" ಎಂದು ಓದುವುದು.

ಪುಟ ೧೯೭—ಪಙ್ಕ್ತಿ—ಅಲ್ತಿ ಎಲ್ದಂಕು, ಝುಲುರಿ, ಝುಲ್ಲಿಲು ಕೂಲುರ್, ಶಬ್ದಗಳನ್ನು ಅಳ್ತಿ, ಎಳ್ದಂಕು, ಝುಲ್ಲರಿ, ಝುಲ್ಲಳಿ, ಕೂಳ್ ಎಂಬುದಾಗಿ ಓದುವುದು (ಇಲ್ಲಿ ಳ ಎಂಬುದು 'ಕುಳ'—ಳಕಾರ ಎಂದು ತಿಳಿಯತಕ್ಕದ್ದು.)

ಪುಟ ೧೮೫-ಪಙ್ಕ್ತಿ ೭-Distinations ಎಂಬುದನ್ನು distinctions ಎಂದು ಓದುವುದು.

